
ನವಕರ್ನಾಟಕ ಪ್ರಕಾಶನ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಜಿ. ಎಂ. ಬೊಮ್ನಳ್ಳಿ, ಅರಸು, ಸ್ಯಾಮ್, ಶ್ರೀಹರಿ, ಯತೀಶ್, ಸೃಜನ್, ಸಾಲಿ

ಮುಖಚಿತ್ರ : ಬುದ್ಧ, ಶಿಲ್ಪಿ ದಿ. ಶಶಿಧರ ಪತ್ತಾರ

ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ನ**ಮ್ಮ ರಾಜ್ಯದಲ್ಲಿ ಪ್ರವಾಹದಿಂದಾಗಿರುವ ಹಾನಿಯ ಕಲ್ಪನೆ ಮಾಡಿಕೊಳ್ಳುವುದು ಕಷ್ಟ. ಮಳೆಯೇ ಇಲ್ಲದೆ ಬೆಳೆ ಇಡಲು ಸಾಧ್ಯವಾಗಿಲ್ಲದಿರುವಂತಹ ಜಿಲ್ಲೆಗಳಲ್ಲಂತೂ ಬೆಳಗಾವಿ ಮುಂತಾದೆಡೆಗಳಲ್ಲಿ ಉಂಟಾಗಿರುವ ನಷ್ಟವು ವಿಸ್ಮಯವನ್ನು ತರುತ್ತದೆ. ಮನೆ, ದವಸ-ಧಾನ್ಯ, ಜಾನುವಾರು ಎಲ್ಲವನ್ನೂ ಕಳೆದುಕೊಂಡಿರುವ ನೂರಾರು ಕುಟುಂಬಗಳವರು ಅತ್ಯಂತ ದಾರುಣ ಪರಿಸ್ಥಿತಿ ಎದುರಿಸುತ್ತಿದ್ದಾರೆ. ಈ ವರ್ಷದ ಬೆಳೆಯೂ ಅವರಿಗೆ ದಕ್ಕುವಂತಿಲ್ಲ; ಏಕೆಂದರೆ, ಅವರ ಜಮೀನು ಕೃಷಿ ಯೋಗ್ಯತೆಯನ್ನು ಕಳೆದುಕೊಂಡಿದೆ. ಜೊತೆಗೆ ಸಾಂಕ್ರಾಮಿಕ ರೋಗಗಳ ಅಪಾಯವೂ ಇದೆ. ಇಂತಹ ಪರಿಸ್ಥಿತಿಯಲ್ಲಿ ರಾಜಕೀಯ ಪಕ್ಷಗಳು ಪರಿಹಾರದ ಕೆಲಸದಲ್ಲಿ ತೊಡಗಿಕೊಳ್ಳುವುದನ್ನು ಬಿಟ್ಟು ಪರಸ್ಪರ ಗೂಬೆ ಕೂರಿಸುವ ಯತ್ನದಲ್ಲಿ ಮುಳುಗಿರುವುದು ನಮ್ಮ ರಾಜಕೀಯ ಮತ್ತು ಸಾಂಸ್ಕೃತಿಕ ದುರಂತ. ಅತ್ತ ಮುಂಬೈಯಲ್ಲಿ ಕೆಲವು ಚಲನಚಿತ್ರ ನಟ-ನಟಿಯರು ಸಿನಿಮೀಯವಾಗಿ ಪೊರಕೆ ಹಿಡಿದು ಬೀದಿಗೆ ಬಂದರೆ ಇನ್ನು ಕೆಲವರು ಪ್ರತಿಭಟನೆಗಳಲ್ಲಿ ಭಾಗವಹಿಸಿದರು. ಜನಸಾಮಾನ್ಯರು ಇಡೀ ರಾತ್ರಿ ನೀರು-ಮಳೆಯಲ್ಲಿ ಮನೆಗಳಿಗೂ ಹೋಗಲಾಗದೆ ಬೀದಿಗಳಲ್ಲಿ ಸಂಕಷ್ಟಕ್ಕೆ ಸಿಲುಕಿದ್ದಾಗ ದೊಡ್ಡ ಬಂಗಲೆಗಳ ಸಿನಿಮಾ ತಾರೆಯರು ಆ ಜನಕ್ಕೆ ನಿಲ್ಲಲು ನೆಲೆಯನ್ನು ಸಹ ನೀಡದೆಹೋದರು. ಇವರು ಸಮಾಜದಲ್ಲಿ ಆರಾಧ್ಯರು ! ಯಥಾಪ್ರಕಾರ ಸಾಮಾನ್ಯ ಜನರೇ ಸಹಾಯಹಸ್ತ ನೀಡಲು ಮುಂದಾದದ್ದು. ಇಂತಹ ಯಾವ ತಿಳಿಗೇಡಿತನಕ್ಕೂ ಅವಕಾಶ ನೀಡದೆ ನಮ್ಮ ಇಡೀ ರಾಜ್ಯವು ಪ್ರವಾಹ ಸಂತ್ರಸ್ತರಿಗೆ ಮತ್ತು ಬರಗಾಲದಿಂದ ನಿತ್ರಾಣವಾಗಿರುವವರಿಗೆ ನಿಶ್ಚಿತವಾದ ಬೆಂಬಲ ನೀಡುವ ಜವಾಬ್ದಾರಿ ಹೊರಬೇಕಾಗಿದೆ.

* * *

ನಾನಾವತಿ ಆಯೋಗದ ವರದಿಯು ದೇಶದೆಲ್ಲೆಡೆ ಚರ್ಚೆಗೆ ಬಂದು, ಸಿಖ್ ಜನಾಂಗದವರ ಮೇಲೆ ಹಲ್ಲೆ ನಡೆಸಿ ಅನೇಕರನ್ನು ಕೊಂದ ಮತ್ತು ಕೊಲ್ಲಿಸಿದ ಅಪರಾಧಿಗಳನ್ನು ಶಿಕ್ಷಿಸಬೇಕೆಂದು ದೊಡ್ಡ ಧ್ವನಿ ಎದ್ದಿದೆ. ಎಲ್ಲ ಪ್ರಸಂಗಗಳನ್ನೂ ಎರಡು ದಿನಗಳಲ್ಲಿ ಮರೆತುಬಿಡುವ ಸ್ವಭಾವವನ್ನು ಬೆಳೆಸಿಕೊಂಡಿರುವ ನಮ್ಮ ದೇಶದಲ್ಲಿ ಈ ರೀತಿಯ ಎಚ್ಚರ ಸ್ವಾಗತಾರ್ಹವಾದ್ದು. ಸಮಕಾಲೀನ ಘಟನೆಗಳಿಗೆ ಅಷ್ಟೇ ಕಾತುರದಿಂದ ಪ್ರತಿಕ್ರಿಯಿಸಿ ಸಾಮುದಾಯಿಕ ಪ್ರಜ್ಞೆಯಿಂದ ಮಧ್ಯಪ್ರವೇಶ ಮಾಡುವುದು ಅಂತಹ ದುರ್ಘಟನೆಗಳು ಮರುಕಳಿಸದಂತೆ ಮಾಡಲು ಇರುವ ಏಕೈಕ ಮಾರ್ಗ. ಗುರ್‌ಗಾಂವ್‌ನಲ್ಲಿ ನಡೆದ ಪ್ರಭುತ್ವದ ದೌರ್ಜನ್ಯ, ಮನಸ್ಸಿನಿಂದ ಇನ್ನೂ ಮಾಸಿಲ್ಲದ ಗುಜರಾತ್ ಹತ್ಯೆಗಳು, ಗೋಧ್ರಾ ಪಾತಕ, ಕಾಶ್ಮೀರದ ಎಡೆಬಿಡದ ಕೊಲ್ಲುವಾಟ, ಮಣಿಪುರದ ಸಮಸ್ಯೆ, ಎಲ್ಲದರಲ್ಲೂ ಜನರ ಧ್ವನಿ ಗಟ್ಟಿಯಾಗಿ ಕೇಳಬೇಕು. ''ಕಿವುಡರಿಗೂ ಕೇಳಿಸುವಂತೆ'' ಮಾಡಲು ಫ್ರಾನ್ಸಿನ ವೆಯ್ಯಾಂತ್ ಉಪಕ್ರಮವನ್ನು ಭಗತ್ ಸಿಂಗ್ ಉದಾಹರಿಸಿದ್ದುದನ್ನಿಲ್ಲಿ ನೆನೆಯಬಹುದು. ವೆಯ್ಯಾಂತ್ ಮಾರ್ಗಕ್ಕೆ ಭಿನ್ನವಾದವನ್ನು ಸಹ ಕಂಡುಕೊಳ್ಳುವ ಅಗತ್ಯವಿದೆ. ಕೇಳಿಸುವಂತೆ ಮಾಡುವುದು ಹೇಗೆಂಬುದನ್ನು ಆಯೋಗಗಳು ತಿಳಿಯಹೇಳಬೇಕಾಗಿಲ್ಲ.

ಹಾಗೆ ನೋಡಿದರೆ, ಚುನಾವಣಾ ಆಯೋಗ ಮತ್ತು ಸರ್ವೋಚ್ಚ ನ್ಯಾಯಾಲಯ ಜನರ ಅತಿಸಾಮಾನ್ಯ ಹಿತವನ್ನು ರಕ್ಷಿಸುವಲ್ಲಿ ಸಹ ವಿಫಲವಾಗುತ್ತಿವೆ ಎಂಬ ಆತಂಕ ಕ್ರಮೇಣ ಅಧಿಕಗೊಳ್ಳುತ್ತಿದೆ. ಪ್ರಜಾಪ್ರಭುತ್ವದ ಕ್ರಮಗಳನ್ನು ಪೋಷಿಸಬೇಕಾದ ಚುನಾವಣಾ ಆಯೋಗವು ಬಿಹಾರದಲ್ಲಿ ಜಾರಿಗೊಳಿಸುತ್ತಿರುವ ಕೆಲವು ಆಜ್ಞೆಗಳು ಜನರನ್ನು ಪ್ರಜಾಪ್ರಭುತ್ವಕ್ಕೆ ವಿಮುಖರಾಗುವಂತೆ ಮಾಡುವುದರಲ್ಲಿ ಯಶಸ್ಸುಗಳಿಸುತ್ತಿವೆಯೆಂಬ ಅನುಮಾನ ಅನಿವಾರ್ಯವಾಗುತ್ತಿದೆ. ಅಧಿಕಾರವನ್ನು ಸರ್ವಾಧಿಕಾರವನ್ನಾಗಿ ಪರಿವರ್ತಿಸಿಕೊಳ್ಳುವ ಕೌಶಲ್ಯ ನಮ್ಮ ದೇಶದಲ್ಲಿ ವಿಪರೀತವಾಗಿ ಬೆಳೆಯುತ್ತಿದೆ. ನಮ್ಮ ಲೋಕಸಭೆ ಮತ್ತು ರಾಜ್ಯಸಭೆಗಳ ಸದಸ್ಯರಿಗೆ ಇದೇಕೆ ಕಣ್ಣಿಗೆ ರಾಚುತ್ತಿಲ್ಲವೋ ತಿಳಿಯದು. ವಾಜಪೇಯಿ ಸರ್ಕಾರವಿದ್ದಾಗಿನಿಂದಲೂ ದೇಶದಲ್ಲಿ ಒಂದು ಸಮಸ್ಯೆ ದೈತ್ಯಾಕಾರದಲ್ಲಿ ಬೆಳೆಯುತ್ತಿತ್ತು, ಆದರೆ ಅದನ್ನು ಉಪೇಕ್ಷಿಸಲಾಯಿತು. ಈಗ ಅದಕ್ಕೆ ನ್ಯಾಯಾಲಯವು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಪರಿಹಾರ ನೀಡಿ ನ್ಯಾಯವು ನಾಟ್ಯವಾಡುವಂತೆ ಮಾಡಿದೆ. ವೃತ್ತಿಪರ ಶಿಕ್ಷಣದಲ್ಲಿ ಖಾಸಗಿತನದ ದರ್ಬಾರು, ಅಲ್ಪಸಂಖ್ಯಾತರ ಹಕ್ಕುಗಳ ನೆಪ ಹೂಡಿ ದೌಲತ್ತು ನಡೆಸುತ್ತಿರುವ ಸಂಸ್ಥೆಗಳು, ಹಣವಂತರಿಗೆ ಮಾತ್ರ ದೊರೆಯಬಹುದಾದ ಶಿಕ್ಷಣ ಸೌಲಭ್ಯ, ಇವೆಲ್ಲಾ ಟಿ.ಎಂ.ಎ. ಪೈ ವಿವಾದದಲ್ಲಿ ನ್ಯಾಯಾಲಯವು ತೀರ್ಪು ನೀಡಿದಾಗಿನಿಂದ ಹೆಮ್ಮರವಾಗಿ ಬೆಳೆಯುತ್ತಲೇ ಇದ್ದವು. ಆದರೆ ಕೇಂದ್ರ ಸರ್ಕಾರ ನಿಷ್ಕ್ರಿಯವಾಗಿ ಕೂತಿತ್ತು. ಪ್ರವೇಶದ ನೀತಿಯನ್ನು ಸ್ಪಷ್ಟವಾಗಿ ಕಾನೂನಿನ ಪರಿಧಿಯಲ್ಲಿ ನಿರೂಪಿಸಬೇಕಾಗಿದ್ದ ಕೇಂದ್ರ ಸರ್ಕಾರ ಕಳೆದ ಆರೇಳು ವರ್ಷಗಳಲ್ಲಿ ಅಜಗರವಾಗಿ


೯ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೨ ಸೆಪ್ಟೆಂಬರ್ ೨೦೦೫



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : nkp@bgl.vsnl.net.in**
**website : www.navakarnatakabooks.com**



# ಅಣ್ವಸ್ತ್ರ ನೀತಿ

**ಯೋ**ಗಶಾಸ್ತ್ರವನ್ನು ಕುರಿತ ಒಂದು ವಿಚಾರಗೋಷ್ಠಿಯಲ್ಲಿ ಕೆಲವು ವರ್ಷಗಳ ಹಿಂದೆ ಒಂದು ಮಾತು ಕೇಳಿಬಂದಿತ್ತು: ''ಮೈತ್ರಿ, ಕರುಣಾ, ಮುದಿತಾ ಮುಂತಾದ ಆಶಯಗಳನ್ನು ಯಾವಾಗಲೂ ವಿಶೇಷವಾಗಿ ಮಾನ್ಯಮಾಡುವ ಯೋಗಶಾಸ್ತ್ರದ ವಿದ್ಯಾರ್ಥಿಗಳು ವಿಶ್ವಭ್ರಾತೃತ್ವ, ಶಾಂತಿ ಮತ್ತು ಸಮಾಧಿಗಳಂತಹ ಆಕಾಂಕ್ಷೆಗಳನ್ನು ಇರಿಸಿಕೊಳ್ಳುವುದು ಸಹಜವಾಗಿದೆ. ಸ್ವಸ್ಥಚಿತ್ತವನ್ನು ಹೊಂದಲು ಹತ್ತಾರು ವಿಧಾನಗಳನ್ನು ಯೋಗವು ಹೇಳಿಕೊಡುತ್ತದೆ. ಹೀಗಿರುವಾಗ ಯೋಗಾಭ್ಯಾಸಿಗಳು ಕೆಲವರು ಅಣ್ವಸ್ತ್ರಗಳ ತಯಾರಿಕೆಯನ್ನು ಬೆಂಬಲಿಸುವುದು ಮತ್ತು ಅಣುಬಾಂಬು ನಮ್ಮನ್ನು ರಕ್ಷಿಸುತ್ತದೆಯೆಂಬ ಭಾವನೆ ತಾಳುವುದು ಆಶ್ಚರ್ಯಕರ.''

ಈ ಮಾತನ್ನು ಕೇಳಿ ಗೋಷ್ಠಿಯಲ್ಲಿ ಭಾಗವಹಿಸಿದ್ದ ಅನೇಕರು ಅಸಮಾಧಾನಗೊಂಡರು ಮತ್ತು ಆಕ್ಷೇಪವೆತ್ತಿದರು. ಯಾವ ರಾಷ್ಟ್ರಪ್ರೇಮಿಯೂ ಅಣ್ವಸ್ತ್ರವನ್ನು ವಿರೋಧಿಸಕೂಡದೆಂಬ ಅಭಿಪ್ರಾಯ ಸಹ ಅಲ್ಲಿ ವ್ಯಕ್ತವಾಯಿತು. ಆ ಸಂದರ್ಭದಲ್ಲಿ ಐಲೀನ್ ವೆಲ್ಸಮ್ ಎಂಬಾಕೆಯ 'ದಿ ಪ್ಲುಟೋನಿಯಂ ಫೈಲ್ಸ್' (ನ್ಯೂಯಾರ್ಕ್, ೧೯೯೯) ಎಂಬ ಪುಸ್ತಕದ ಪರಿಚಯ ಮಾಡಿಕೊಟ್ಟು ಆಕೆ ಉಲ್ಲೇಖಿಸಿರುವ ಒಂದೆರಡು ಅಂಶಗಳನ್ನು ಪ್ರಸ್ತಾಪಿಸಲಾಯಿತು. ಅಮೆರಿಕಾ ದೇಶದಲ್ಲಿ ಅಣ್ವಸ್ತ್ರ ತಯಾರಿಕೆಯ ಯೋಜನೆಗಳು ಕಾರ್ಯಗತವಾದ ನಂತರ ವಿಕಿರಣದ ಆಘಾತಗಳನ್ನು ಪರೀಕ್ಷಿಸಲು ಮನುಷ್ಯರ ಮೇಲೆ ಹಲವು ಗುಪ್ತ ಪ್ರಯೋಗಗಳನ್ನು ನಡೆಸಲಾಯಿತು. ಹೀಗೊಂದು ಪ್ರಯೋಗವು ತಮ್ಮ ಮೇಲೆ ನಡೆಯುತ್ತಿದೆಯೆಂಬ ವಿಷಯವು ಆ ಜನರಿಗೆ ತಿಳಿದಿರಲಿಲ್ಲ. ಪ್ರಯೋಗವನ್ನು ಅಟಾಮಿಕ್ ಇನರ್ಜಿ ಕಮಿಷನ್‌ನ ವತಿಯಿಂದಲೇ ನಡೆಸಲಾಗುತ್ತಿತ್ತು. ಪ್ರಯೋಗಗಳ ಮುಖ್ಯ ಉದ್ದೇಶವು ಅಣ್ವಸ್ತ್ರಗಳನ್ನು ತಯಾರಿಸುವೆಡೆ ಸುರಕ್ಷತೆಯನ್ನು ಕಾಪಾಡಿಕೊಳ್ಳುವುದು ಹೇಗೆ ಮತ್ತು ಅಣ್ವಸ್ತ್ರಗಳನ್ನು ಯುದ್ಧದಲ್ಲಿ ಬಳಸಿದಾಗ ಉಂಟಾಗುವ ಸನ್ನಿವೇಶ ಎಂತಹದ್ದು ಎಂಬುದನ್ನು ತಿಳಿದುಕೊಳ್ಳುವುದಾಗಿತ್ತು. ಆಸ್ಪತ್ರೆಗಳಲ್ಲಿದ್ದ ಎಷ್ಟೋ ರೋಗಿಗಳನ್ನು ವಿಕಿರಣಕ್ಕೆ ಗುರಿ ಮಾಡಿ ಪ್ರಯೋಗಗಳನ್ನು ರಹಸ್ಯವಾಗಿ ನಡೆಸಲಾಯಿತೆಂಬುದರ ಅರ್ಥ ಸ್ಪಷ್ಟವಾಗಿದೆ. ಅಣ್ವಸ್ತ್ರಗಳ ತಯಾರಿಕೆಯ ಸಂದರ್ಭದಲ್ಲಿ ಹತ್ತಾರು ರಹಸ್ಯಗಳು ಹಾಗೆಯೇ ಉಳಿಯುತ್ತವೆ ಮತ್ತು ಅಪಾಯಗಳ ಸರಮಾಲೆ ಸಹ ಗುಟ್ಟಾಗಿಯೇ ಬೆಳೆಯುತ್ತಿರುತ್ತದೆ. ಹಣದ ವೆಚ್ಚವೂ ಸೇರಿದಂತೆ ಎಲ್ಲಾ ರಹಸ್ಯಗಳೇ! ಅಂತೆಯೇ, ದೇಶದಲ್ಲಿ ಮತ್ತು ಅಂತರರಾಷ್ಟ್ರೀಯವಾಗಿ ಏನೆಲ್ಲಾ ಒಪ್ಪಂದಗಳನ್ನು ಮಾಡಿಕೊಂಡಿರಲಾಗುತ್ತವೆಯೋ ಅವೂ ರಹಸ್ಯಗಳಾಗಿಯೇ ಉಳಿದಿರುತ್ತವೆ.

ಅಣ್ವಸ್ತ್ರಗಳನ್ನು ಹೊಂದಿ ನೆರೆರಾಷ್ಟ್ರಗಳನ್ನು ಮಣಿಸಬಹುದು ಮತ್ತು ನಮ್ಮನ್ನು ಯಾರೂ ತಡೆಯಲಾರರು, ಎಲ್ಲರನ್ನೂ ಹೊಸಕಿಹಾಕಿಬಿಡುತ್ತೇವೆ, ಎಂಬ ಭಾವನೆಯು ಅಹಂಕಾರದ ಪ್ರತೀಕವೇ ವಿನಾ ವಾಸ್ತವಿಕವಾದ ಅಂಶವಾಗುವುದಿಲ್ಲ. ಯಾರನ್ನು ಈ ಅಸ್ತ್ರಗಳಿಂದ ರಕ್ಷಿಸಬಹುದೆಂದು ಹೇಳಲಾಗುತ್ತದೋ ಅವರಿಗೇ ಇದರಿಂದ ಹೆಚ್ಚಿನ ಕುತ್ತಿನ ಸಂಭವ, ಮಾರಕ ಪರಿಣಾಮ. ಇಪ್ಪತ್ತನೆಯ ಶತಮಾನದಲ್ಲಿ ಮಾನವನ ಭವಿತವ್ಯದ ಮೇಲೆ ಗಾಢ ಪರಿಣಾಮ ಬೀರುವ ಎರಡು ಘಟನೆಗಳು ಜರುಗಿದವು : (ಅ) ಬೆಳವಣಿಗೆ, ಸಮಾನತೆ ಮತ್ತು ಶಾಂತಿಗೆ ಬೆನ್ನೆಲುಬಾಗಲಿದ್ದ ೧೯೧೭ರ ರಷ್ಯದ ಸಮಾಜವಾದಿ ಕ್ರಾಂತಿ, ಹಾಗೂ (ಆ) ೧೯೪೫ರ ಪರಮಾಣು ಬಾಂಬುಗಳ ಎಸೆತದಿಂದ ಹಿರೋಷಿಮ ಮತ್ತು ನಾಗಸಾಕಿಗಳ ಭಸ್ಮ. ಹೊಸವಿಶ್ವದ ಹರಿಕಾರನಂತಿದ್ದ ಸಮಾಜವಾದಿ ಕ್ರಾಂತಿಯನ್ನು ನಾಶ ಮಾಡಿ ಬಾಂಬಿನ ದುರುಳತನವನ್ನು ಹೆಚ್ಚಿಸುವ ಪ್ರಕ್ರಿಯೆ ಈಗ ಜಾರಿಯಲ್ಲಿದೆ. ೧೯೪೫ರ ಆಗಸ್ಟ್ ೬ ಮತ್ತು ೯ರಂದು ವಿಶ್ವದಲ್ಲಿ ಉಗ್ರಭಯೋತ್ಪಾದಕತೆಯ ಉದ್ಘಾಟನೆಯಾಯಿತು. ಆಂತರಿಕ ಭಯೋತ್ಪಾದನೆಗೆ ಹಿಟ್ಲರ್ ನಿದರ್ಶನ ನೀಡಿದ್ದ; ಅಂತರರಾಷ್ಟ್ರೀಯ ಭಯೋತ್ಪಾದನೆಗೆ ಟ್ರೂಮನ್ ಚಾಲನೆ ಕೊಟ್ಟ. ಯುದ್ಧದಲ್ಲಿ ಆಗಲೇ ಸೋತಿದ್ದು ಶರಣಾಗತಿಯ ದಿನಕ್ಕಾಗಿ ಕಾಯುತ್ತಿದ್ದ ಜಪಾನಿನ ಮೇಲೆ ಅಣ್ವಸ್ತ್ರ ಧಾಳಿ ತೀರಾ ಅನವಶ್ಯಕವಾಗಿತ್ತು. ಆದರೆ ಮುಂದಿನ ದಶಕಗಳಲ್ಲಿ ವಿಶ್ವದ ಯಜಮಾನ ತಾನೆಂದು ಗಂಟೆ ಬಡಿದು ಸಾರುವ ಉದ್ದೇಶದಿಂದ ಅಮೆರಿಕಾ ಲಕ್ಷಾಂತರ ಜನರನ್ನು ಕೊಂದಿತು. ಆ ಕಾರಣದಿಂದ ಅದು ವಿಶ್ವದ ಮೊದಲ 'ರೋಗ್ ಸ್ಟೇಟ್' ಎಂಬ ಪಟ್ಟ ಪಡೆಯಲು ಅರ್ಹವಾಯಿತು. ಬಾಂಬಿನ ಈ ದುಷ್ಟತನವನ್ನು ಹಿಮ್ಮೆಟ್ಟಿಸುವ ಬದಲು ಪೋಷಿಸಲಾಗುತ್ತಿರುವ ದುರಂತ ನಮ್ಮ ಕಣ್ಣ ಮುಂದಿದೆ.

ಭಾರತ ಮತ್ತು ಪಾಕಿಸ್ತಾನಗಳು ಅಣುಬಾಂಬುಗಳನ್ನು ಸ್ಫೋಟಿಸಿದ ತರುವಾಯದಲ್ಲಿ ಪಾಕಿಸ್ತಾನದ ಒಬ್ಬ ವಿಜ್ಞಾನಿ ಹೇಳಿದ್ದಿದು : ''ಇದೇನು ಮಹಾ ಸಂಶೋಧನಾ ಸಾಹಸವಲ್ಲ. ಇದ್ದ ಜ್ಞಾನದ ತಾಂತ್ರಿಕ ಅಳವಡಿಕೆ ಅಷ್ಟೇನೂ ಮಹತ್ವದ್ದಲ್ಲ. ನಮ್ಮೆರಡು ರಾಷ್ಟ್ರಗಳಲ್ಲಿ ಜೀವನವನ್ನು ಉತ್ತಮಗೊಳಿಸುವ ವೈಜ್ಞಾನಿಕ ಸಂಶೋಧನೆ ಮತ್ತು ತಾಂತ್ರಿಕ ಸಾಧನೆ ಹಾಗೂ ಅದಕ್ಕೆ ಬೇಕಾದ ಶೈಕ್ಷಣಿಕ ವ್ಯವಸ್ಥೆ ಇದ್ದಿದ್ದರೆ ಈ ಬಾಂಬುಗಳಿಗಿಂತಲೂ ಚೆನ್ನಾಗಿರುತ್ತಿತ್ತು.'' ಬೇರೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಬದಲು ಎರಡು ರಾಷ್ಟ್ರಗಳೂ ಪೈಪೋಟಿಯಿಂದ ಅಸ್ತ್ರಗಳನ್ನು ಇಮ್ಮಡಿಗೊಳಿಸಿಕೊಳ್ಳುತ್ತಾ ಆರ್ಥಿಕ ಮುಗ್ಗಟ್ಟಿನಲ್ಲಿ ಸಿಲುಕಿಕೊಂಡಿವೆ. ಈ ಪೈಪೋಟಿಯಿಂದ ಲಾಭ ಇರುವುದು ಶಸ್ತ್ರಾಸ್ತ್ರಗಳನ್ನು ಎರಡು ದೇಶಗಳಿಗೂ ಮಾರುವ ಅಮೆರಿಕಾಕ್ಕೆ ಮಾತ್ರ!

ಎರಡು ನೊಬೆಲ್ ಪಾರಿತೋಷಕಗಳನ್ನು ಪಡೆದಿದ್ದ ಲೈನಸ್ ಪಾಲಿಂಗ್, ನೆಹರು ಸ್ಮಾರಕ ಉಪನ್ಯಾಸದಲ್ಲಿ ಅಮೆರಿಕಾದ ರಕ್ಷಣಾ ಸಚಿವಾಲಯದ ಸಹಾಯಕ ಕಾರ್ಯದರ್ಶಿ ಹೆನ್ರಿ ಕಸ್ ಎಂಬುವನ ಬಗ್ಗೆ ಪ್ರಸ್ತಾಪ ಮಾಡಿದ್ದರು. ಅವನಿಗೆ ಒಂದು ಸುವರ್ಣ ಪದಕ ನೀಡಲಾಗಿತ್ತಂತೆ. ಅಮೆರಿಕಾದ ಅಧ್ಯಕ್ಷರೇ ನೀಡಿದ್ದು. ಆ ವರ್ಷದಲ್ಲಿ ಶಸ್ತ್ರಾಸ್ತ್ರಗಳನ್ನು ಬೇರೆ ದೇಶಗಳಿಗೆ ಮಾರಿ ಲಾಭ ಗಳಿಸಿಕೊಟ್ಟಿದ್ದನೆಂಬ ಕಾರಣಕ್ಕೆ. – ಪದಕ ಸ್ವೀಕರಿಸಿ ಕಸ್ ಹೇಳಿದನಂತೆ : ''ನಾನು ಸಲ್ಲಿಸಿರುವ ಯೋಜನೆಯನ್ನು ಅಧ್ಯಕ್ಷರು ಅಂಗೀಕರಿಸಿದರೆ ಈ ವರ್ಷದ ಎರಡರಷ್ಟು ಶಸ್ತ್ರಾಸ್ತ್ರಗಳನ್ನು ನಾವು ಮುಂದಿನ ವರ್ಷ ಮಾರಬಹುದು'' ಎಂದು. ಈಗಿನ ಎಫ್-೧೬ ವಿಮಾನ, ಬೋಯಿಂಗ್ ವಿಮಾನದ ಖರೀದಿ, ಮುಂತಾದುವನ್ನು ಈ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕು. ಎಲ್ಲಾ ಶಸ್ತ್ರಾಸ್ತ್ರ ಖರೀದಿ ಮತ್ತು ಶೇಖರಣೆ ಅಮೆರಿಕಾಕ್ಕೆ ವರಪ್ರಸಾದವಿದ್ದಂತೆ. ಅದಕ್ಕೇ ಅವರಿಗೆ ಯುದ್ಧದ ವಾತಾವರಣದ ನಿರ್ಮಾಣವೆಂದರೆ ಎಲ್ಲಿಲ್ಲದ ಉಲ್ಲಾಸ ಮತ್ತು ಉತ್ಸಾಹ!

ಅಣ್ವಸ್ತ್ರಗಳ ಯೋಜನೆಯನ್ನು ವಿರೋಧಿಸುವುದು ದೇಶಪ್ರೇಮದ ಕೊರತೆಯ ಸೂಚನೆಯೆಂದು ಭಾರತೀಯ ಜನತಾ ಪಕ್ಷದ ನಾಯಕರು ಆಗಾಗ್ಗೆ ಹೇಳುತ್ತಿರುತ್ತಾರೆ. ನಮ್ಮ ದೇಶದ ವರ್ಚಸ್ಸು ಅಂತರರಾಷ್ಟ್ರೀಯವಾಗಿ ಬಹುವಾಗಿ ವರ್ಧಿಸುವುದು ಅಣುಬಾಂಬಿನ ತಯಾರಿಕೆಯಿಂದ ಎಂದವರು ಘೋಷಿಸಿದ್ದಾರೆ. ಭಾರತದ ಸುರಕ್ಷತೆಯ ಕಾಳಜಿ ಇಲ್ಲದವರು ಮಾತ್ರ ಅದನ್ನು

ವಿರೋಧಿಸುತ್ತಾರೆಂಬ ದೂಷಣೆಯನ್ನೂ ಅವರು ಹೊರಿಸುತ್ತಾರೆ. ದೇಶದ ವರ್ಚಸ್ಸು ಹೆಚ್ಚುತ್ತದೋ ಅಥವಾ ಕುಗ್ಗುತ್ತದೋ ಎಂಬುದು ಗುಟ್ಟಾದ ವಿಷಯವೇನಲ್ಲ. ದಕ್ಷಿಣ ಆಫ್ರಿಕಾ ಮತ್ತು ಬ್ರೆಜಿಲ್ ಬಾಂಬಿನ ತಯಾರಿಕೆಯನ್ನು ನಿಷೇಧಿಸಿ ವರ್ಚಸ್ಸು ಹೆಚ್ಚಿಸಿಕೊಂಡರು. ಅವರ ಸುರಕ್ಷತೆಗೆ ಭಂಗ ಉಂಟಾಗಿಲ್ಲ. ಭಾರತವು ಬಾಂಬು ತಯಾರಿಸಿದ್ದರೂ ದೇಶದ ಪಾರ್ಲಿಮೆಂಟಿನ ಮೇಲಿನ ಹಲ್ಲೆಯನ್ನು ತಡೆಯಲಾಗಲಿಲ್ಲ. ಜೊತೆಗೆ, ಲಾಹೋರಿನ ಮೇಲೆ ಬಾಂಬು ಹಾಕಿದರೆ ಅಮೃತಸರದ ಜನವೂ ಹತರಾಗುತ್ತಾರೆ; ಪಾಕಿಸ್ತಾನ ಬಾಂಬ್ ಪ್ರಯೋಗಿಸದಿದ್ದರೂ ಈ ದುರಂತ ಸಂಭವಿಸಬಹುದು. ಹೀಗಿರುವಾಗ ಅಮೆರಿಕಾ ಮುಂತಾದ ದೇಶಗಳ ಸಮನಾಗಿ ನಿಲ್ಲಲು ಭಾರತವು ಬಾಂಬ್ ತಯಾರಿಕೆಗೆ ಹೊರಟಿರುವುದು ಒಂದು ದೊಡ್ಡ ವ್ಯಂಗ್ಯವೆನಿಸುತ್ತದೆ. ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ನೋಡಿದಾಗ ಭಾರತ ಮತ್ತು ಪಾಕಿಸ್ತಾನ ವಿಶ್ವದಲ್ಲಿ ೧೩೮ ಮತ್ತು ೧೪೯ನೆಯ ಸ್ಥಾನಗಳಲ್ಲಿವೆ. ಅಂಥವು ಪರಮಾಣು ಶಸ್ತ್ರಾಸ್ತ್ರಗಳ ತಯಾರಿಕೆಗೆ ಹಣ ಸುರಿಯುವುದು ಬೇಜವಾಬ್ದಾರಿತನ, ಮೂರ್ಖತನ. ಆಹಾರ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯ, ಇವುಗಳಿಗೆ ಗಮನ ನೀಡಿ ಅಭಿವೃದ್ಧಿಯ ಹಾದಿ ತುಳಿಯುವುದರ ಬದಲು ನಮ್ಮ ಈ ಎರಡು ರಾಷ್ಟ್ರಗಳು ವಿಶ್ವದಲ್ಲಿ ಮಹಾಶಕ್ತಿಗಳಾಗಿ ಕಂಡುಬರಬೇಕೆಂಬ ಕನಸು ಕಾಣುತ್ತಾ ಹಣವನ್ನು ಚರಂಡಿಗೆ ತುಂಬುತ್ತಿವೆ. ನೈತಿಕತೆಯ ಎತ್ತರದಿಂದ ಕೆಳಕ್ಕೆ ಜಾರಿ ನಮ್ಮ ದೇಶವು ಅಣ್ವಸ್ತ್ರ ಹೊಂದಿರುವ ಯುದ್ಧಕೋರರ ಮತ್ತು ಕೊಲೆಗಡುಕರ ಗುಂಪಿಗೆ ಸೇರಹೊರಟಿದೆಯೆಂದು ಬಹುಹಿಂದೆಯೇ ಅಡ್ಮಿರಲ್ ಎಲ್. ರಾಮದಾಸ್ ಟೀಕಿಸಿದ್ದುದನ್ನು ನೆನೆಯಬಹುದು. ಆದರೆ ನಮ್ಮ ಕೆಲವು ವಿಜ್ಞಾನಿಗಳು ಸಹ ವಾಗಾಡಂಬರದಲ್ಲಿ ತಲ್ಲೀನರಾಗಿ ಬಾಂಬಿನ ಯೋಜನೆಯನ್ನು ಶ್ಲಾಘಿಸುತ್ತಿದ್ದಾರೆ. ಅವರ ಸಂಭ್ರಮ ಮತ್ತು ಭಾವೋದ್ರೇಕಗಳು ದೇಶಕ್ಕೆ ಆರೋಗ್ಯಕರವಲ್ಲ. ನಾವು ಉಪಯೋಗಿಸಲೇಬಾರದ ಆಯುಧಗಳ ನಿರ್ಮಾಣಕ್ಕೆಂದು ಹಣ ಸುರಿಯುವುದು ''ಒಂದು ತಾಂತ್ರಿಕ ಅಪರಾಧ''ವೆಂದು ಭೌತವಿಜ್ಞಾನಿ ಫ್ರೀಮನ್ ಡೈಸನ್ ಹೇಳುತ್ತಿದ್ದುದುಂಟು. ಅಂತಹ ಅಗಾಧ ವ್ಯರ್ಥ ಇಂದು ನಮ್ಮದಾಗುತ್ತಿದೆ.

ಈಚಿನ ಅಮೆರಿಕಾ ಜೊತೆಯ ಒಪ್ಪಂದಕ್ಕೆ ಹಿನ್ನೆಲೆಯಾಗಿರುವುದು ಭಾರತದ ಅರ್ಥರಹಿತ ಲಾಲಸೆಯಾದ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಖಾಯಂ ಸದಸ್ಯತ್ವ. ಅದನ್ನು ಪಡೆಯಲು ನಮ್ಮೆಲ್ಲ ನೀತಿಗಳನ್ನೂ ಗಾಳಿಗೆ ತೂರಿ ಅಮೆರಿಕಾದ ಮನವೊಲಿಸಲು ನಮ್ಮ ರಾಷ್ಟ್ರ ಹರಸಾಹಸ ಮಾಡುತ್ತಿದೆ. ಆಫ್ರಿಕದ ದೇಶಗಳು ಈ ಆಸೆಯ ಮೇಲೆ ತಣ್ಣೀರೆರಚಿವೆ. ಭದ್ರತಾ ಮಂಡಲಿಯಲ್ಲಿ ಖಾಯಂ ಸದಸ್ಯತ್ವ ಪಡೆದು ನಾವು ಮಾಡಬೇಕೆಂದಿರುವುದೇನು ? ನೆರೆಯ ರಾಷ್ಟ್ರಗಳನ್ನು ಬೆದರಿಸುವುದೆ ? ತಾನೇ ವಿಶ್ವಸಂಸ್ಥೆಯೆಂದು ವರ್ತಿಸುವ ಅಮೆರಿಕಾಕ್ಕೆ ಪಕ್ಕವಾದ್ಯವಾಗುವುದೆ ? ಅಣ್ವಸ್ತ್ರ ಹೊಂದಿರುವವರೆಲ್ಲಾ ಸದಸ್ಯತ್ವ ಪಡೆಯಬೇಕೆಂಬ ನಿಯಮವನ್ನು ಜಾರಿಗೊಳಿಸುವುದೆ ? ಈಗ ವಿಶ್ವಸಂಸ್ಥೆಯಲ್ಲಿ ಅಮೆರಿಕಾ ಪ್ರತಿನಿಧಿಯಾಗಿರುವ ಬೋಲ್ಟನ್ ಹಿಂದೊಮ್ಮೆ ಹೇಳಿದ್ದನಂತೆ, ''ಭದ್ರತಾ ಮಂಡಲಿಯ ಖಾಯಂ ಸದಸ್ಯನಾಗಿರಲು ಅಮೆರಿಕಾ ಒಂದಕ್ಕೇ ಅರ್ಹತೆ ಇರುವುದು'' ಎಂದು. ಅಂತಹ ಅಮೆರಿಕಾದ ಎಲ್ಲ ಆಕ್ರಮಣಗಳಿಗೂ ಭದ್ರತಾ ಮಂಡಲಿಯ ಮೊಹರನ್ನು ಒತ್ತಲು ಭಾರತ ಅಲ್ಲಿರಬೇಕೆ ? ಈಗಾಗಲೆ ಉಲ್ಲೇಖಿಸಿರುವಂತೆ ಮಾನವ ಅಭಿವೃದ್ಧಿಯ ಮಾಪನದಲ್ಲಿ ಭಾರತವು ಅತ್ಯಂತ ಕೆಳಗಿನ ಸ್ಥಾನದಲ್ಲಿದೆ. ಅಷ್ಟೇ ನಮ್ಮ ೬೦ ವರ್ಷಗಳ ಅದ್ಭುತ ಸಾಧನೆ! ಅದನ್ನು ಉತ್ತಮಪಡಿಸುವುದರ ಬದಲು ಅಣ್ವಸ್ತ್ರ ಹೊಂದುವುದು ಮತ್ತು ಭದ್ರತಾ ಮಂಡಲಿಯಲ್ಲಿ ಖಾಯಂ ಸ್ಥಾನ ಪಡೆಯುವುದು ಹೆಚ್ಚು ಆದ್ಯತೆಯ ವಿಷಯವಾಗಬಾರದು. ರಾಜಕೀಯ ಮೇಲುಗೈ ಪಡೆಯಲು ಇಂತಹ ಕ್ರಮವು ಎಂದೆಂದಿಗೂ ಸಾಧುವಲ್ಲ. ಅದರ ಪರಿಣಾಮ ಸಹ ನಮ್ಮ ಪರವಾಗಿರುತ್ತದೆಂಬ ಭರವಸೆಯೂ ಇಲ್ಲ. ಅಲಿಪ್ತ ನೀತಿಯನ್ನು ಎತ್ತಿಹಿಡಿದ ಭಾರತ ಮಾರಕ ಶಸ್ತ್ರಾಸ್ತ್ರಗಳ ಅನಿರ್ಬಂಧಿತ ಮಾರಾಟವನ್ನು ಖಂಡಿಸಿದ್ದ ಸಂದರ್ಭಗಳಿವೆ. ಅಂದರೆ, ನಿಶ್ಶಸ್ತ್ರೀಕರಣವನ್ನು ಗುರಿಯಾಗಿ ಹೊಂದಿದ್ದ ಭಾರತ ಈಗ ಶಸ್ತ್ರಪೈಪೋಟಿಗೆ ಇಳಿದಿದೆಯೆಂದರ್ಥ.

ಇದೇ ಜುಲೈ ೧೮ರಂದು ಭಾರತ-ಅಮೆರಿಕಾ ಒಪ್ಪಂದವೊಂದು ಅಸ್ತಿತ್ವಕ್ಕೆ ಬಂದಿತು. ಅದು ಭಾರತಕ್ಕೆ ಎಳ್ಳಷ್ಟೂ ಪ್ರತಿಕೂಲವಾಗಿಲ್ಲವೆಂದು ಪ್ರಧಾನಿ ಮನಮೋಹನ ಸಿಂಗ್ ಹೇಳುತ್ತಿದ್ದರೂ ಜಾಗತಿಕ ಅನುಭವವು ಅದನ್ನು ಸುಳ್ಳಾಗಿಸುವ ಸಾಧ್ಯತೆಯತ್ತ ನಮ್ಮ ದೃಷ್ಟಿಯನ್ನು ಹರಿಸುತ್ತದೆ. ಪರಮಾಣು ಆಧಾರಿತ ಯೋಜನೆಗಳನ್ನು ನಾಗರಿಕ ಮತ್ತು ಮಿಲಿಟರಿ ಉಪಯೋಗದವೆಂದು ಪ್ರತ್ಯೇಕಿಸಿ, ಮೊದಲನೆಯದನ್ನು ಅಂತರರಾಷ್ಟ್ರೀಯ ಉಸ್ತುವಾರಿಗೆ ಮುಕ್ತವಾಗಿ ತೆರವುಗೊಳಿಸಿ ಎರಡನೆಯದನ್ನು ಮಾತ್ರ ಸ್ವಂತದ ರಹಸ್ಯವೆಂದು ಮುಂದುವರಿಸಿಕೊಳ್ಳುವುದು ಒಪ್ಪಂದದ ಪ್ರಮುಖ ಭಾಗ. ಯಾವುದು ನಾಗರಿಕ ಅಣುಸ್ಥಾವರವೆಂದು ತೀರ್ಮಾನಿಸುವ ಹಕ್ಕು ಭಾರತದ್ದಾಗಿರುತ್ತದೆಂದು ಪರಮಾಣು ಶಕ್ತಿ ಆಯೋಗದ ಅಧ್ಯಕ್ಷರು ಸ್ಪಷ್ಟೀಕರಣ ನೀಡಿದ್ದಾರೆ. ಈ ಬೇರ್ಪಡಿಸುವಿಕೆಗೆ ಸುಮಾರು ಇಪ್ಪತ್ತು ಸಾವಿರ ಕೋಟಿ ರೂಪಾಯಿಗಳ ಖರ್ಚು ಬರುತ್ತದೆಂದು ಅಂದಾಜು ಮಾಡಲಾಗಿದೆ. ಪ್ರತ್ಯೇಕಿಸಿದ ನಂತರ ರಹಸ್ಯವಾಗಿ ಏನೇನು ನಡೆಯುತ್ತದೋ, ಎಷ್ಟು ಹಣ ದುರ್ವ್ಯಯವಾಗುತ್ತದೋ, ಅದು ಗುಟ್ಟಾಗಿಯೇ ಉಳಿಯಬಹುದು. ನಮ್ಮ ಭೂಭಾಗದಲ್ಲಿ ಸಂಶಯ ಮತ್ತು ಯುದ್ಧದ ವಾತಾವರಣವನ್ನು ಹೆಚ್ಚಿಸುವುದು ಬಿಟ್ಟು ಇದರಿಂದ ಬೇರೇನೂ ಪರಿಣಾಮವಿರುವುದಿಲ್ಲ. ನಾಗರಿಕ ಉಪಯೋಗದ ವಿಭಾಗದಲ್ಲಿ ಅಮೆರಿಕಾ ಭಾರತಕ್ಕೆ ಇಂಧನ ಪೂರೈಕೆಗಾಗಿ ಸಹಾಯಹಸ್ತ ನೀಡಲಿದೆಯೆಂದು ಹೇಳಲಾಗಿದೆ. ಯಾವ ರಾಷ್ಟ್ರದೊಡನೆಯೂ ಅಮೆರಿಕಾ ತನ್ನ ಒಪ್ಪಂದಗಳನ್ನು ಸದಾ ನಿಷ್ಠೆಯಿಂದ ಪಾಲಿಸಿರುವ ದಾಖಲೆ ಇಲ್ಲ. ತನ್ನ ಆಶಯಕ್ಕೆ ಅಡ್ಡಬರುತ್ತದೆಂದು ಕಂಡಾಗ ಒಪ್ಪಂದವನ್ನು ಹರಿದು ಗಾಳಿಗೆ ತೂರುವುದು ಆ ದೇಶದ ಸಂಪ್ರದಾಯ. ಅದನ್ನು ಸದ್ಯಕ್ಕೆ ಪಕ್ಕಕ್ಕಿಟ್ಟು ನೋಡಿದರೆ ಒಪ್ಪಂದದ ನಿರೀಕ್ಷೆಗಳೇನು ? ಭಾರತದ ಅಣುಶಕ್ತಿ ಆಯೋಗದ ಮಾಜಿ ಅಧ್ಯಕ್ಷ ಹಾಗೂ ಹಾಲಿ ಸದಸ್ಯರಾದ ಶ್ರೀ ಎಂ. ಆರ್. ಶ್ರೀನಿವಾಸನ್ ಒಪ್ಪಂದವನ್ನು ಸ್ವಾಗತಿಸಿ ಕೊಂಡಾಡಿದ್ದಾರೆ (ದಿ ಹಿಂದು, ಆಗಸ್ಟ್ ೨).

ಅವರ ಪ್ರಕಾರ ಅಣುಮೂಲದ ವಿದ್ಯುಚ್ಛಕ್ತಿಯ ಉತ್ಪಾದನೆಯು ಈಗಿರುವ ಶೇ. ೩ರಿಂದ ಮುಂದಿನ ಐವತ್ತು ವರ್ಷಗಳಲ್ಲಿ ಶೇ. ೨೬ಕ್ಕೆ ಏರಬೇಕಂತೆ. ೨೦೦೨-೦೩ರಲ್ಲಿ ಕಲ್ಲಿದ್ದಲು ಮೂಲದ್ದು ಶೇ. ೬೭, ತೈಲ-ಅನಿಲ ಮೂಲದ್ದು ಶೇ. ೨೦ ಮತ್ತು ಜಲಮೂಲದ್ದು ಶೇ. ೧೦ ಇದ್ದುದು ೨೦೫೨ರ ವೇಳೆಗೆ ಕ್ರಮವಾಗಿ ಶೇ. ೪೭, ೧೬ ಮತ್ತು ೮ ಆಗಿರುತ್ತದಂತೆ; ಆದ್ದರಿಂದ ಅಣುಮೂಲದ್ದು ಶೇ. ೨೬ರಷ್ಟಾಗಬೇಕು. ಏಕೆಂದರೆ ವಿವಿಧ ಮೂಲಗಳ ಶಕ್ತಿಯ ಅಗತ್ಯ ಅಷ್ಟಿರುತ್ತದಂತೆ. ಈ ಹಿನ್ನೆಲೆಯಲ್ಲಿ

೨೦ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆನ್ನೆಯಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




## ಜುಲೈ ಸಂಚಿಕೆ

**ಮಾ**ಂಸಾಹಾರ (ಮಾನವನಿಗೆ) ವರ್ಜ್ಯವೇ?'' ಎಂಬ ಡಾ॥ ವೆಂಕಟಯ್ಯ ಅಪ್ಪಗೆರೆಯವರು ಎತ್ತಿದ ಪ್ರಶ್ನೆಗೆ ಅದು ವರ್ಜ್ಯವೆಂಬ ಉತ್ತರ ಅವರು ಪ್ರಸ್ತುತಪಡಿಸಿದ ಸಿದ್ಧಾಂತದಲ್ಲಿಯೇ ಅಡಕವಾಗಿದೆ.

ಆದಿಯಲ್ಲಿ ಮಾನವನು ಮಾಂಸಾಹಾರಿಯಾಗಿದ್ದ. ಅದಕ್ಕೆ ಅನುಕೂಲವಾಗಿ ಆತನು ಕೋರೆಹಲ್ಲುಗಳನ್ನು ಮತ್ತು ಗಿಡ್ಡ ಜಠರವನ್ನು ಹೊಂದಿದ್ದನು; ಕಾಲಕ್ರಮೇಣ ಆತನ ದೇಹರಚನೆ ಮತ್ತು ರಚನಾಂಗಗಳು ಮಿಶ್ರ ಆಹಾರಕ್ಕೆ ಅನುಕೂಲವಾಗುವಂತೆ ಪರಿವರ್ತನೆಗೊಂಡವು. ಈ ಪರಿವರ್ತನೆಯ ದಿಕ್ಕು ಪೂರ್ಣ ಸಸ್ಯಾಹಾರದತ್ತ ಎಂದೆನಿಸುವುದು ಕಷ್ಟಸಾಧ್ಯವಲ್ಲ. ಸವೆಯಬಲ್ಲ ದಾರಿ ಒಂದೆರಡು ದಿನಗಳದ್ದಲ್ಲ, ಸಹಸ್ರಾರು ವರ್ಷಗಳ ಕಾಲದ್ದಾಗಿರಬಹುದು.

ಸುರತ್ಕಲ್ **ಟಿ. ಸಿ. ಶ್ರೀಯಾನ್**

ಸಸ್ಯಾಹಾರಿಗಳು ಚುರುಕು ಬುದ್ಧಿಯವರು, ಮೇಧಾವಿಗಳು ಎಂಬುದನ್ನು ಸಾರಾಸಗಟಾಗಿ ತಳ್ಳಿಹಾಕಿದ್ದು ಉತ್ತಮವೆನಿಸಿತು. ಮಾಂಸಾಹಾರ ಸೇವನೆ ಆರೋಗ್ಯ ಹಾಗೂ ಬಲವರ್ಧನೆಗೆ ಸೂಕ್ತವಾದದ್ದು. ಕೇವಲ ತಮ್ಮ ಧರ್ಮ, ಆಚಾರ, ಪೂಜೆ, ಪೌರೋಹಿತ್ಯದ ಮೂಲಭೂತವಾದದ ಸಸ್ಯಾಹಾರಿ ಜನಾಂಗವು ತಾವೇ ಶ್ರೇಷ್ಠ ಎಂಬ ಅಜ್ಞಾನಕ್ಕೆ ಪೆಟ್ಟು ಕೊಟ್ಟಂತಿತ್ತು.

ಜಾಗತೀಕರಣದ ಪ್ರಭಾವದಿಂದಾಗಿ ಇಂದು ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲಿಷ್ ಅನಿವಾರ್ಯವಾಗಿದೆ. ಹಾಗಂತ ಹೆತ್ತತಾಯಿಯನ್ನು (ಕನ್ನಡ) ಬಿಡಲುಂಟೆ? ಒಂದನೇ ತರಗತಿಯಿಂದಲೇ ದ್ವಿತೀಯ ಭಾಷೆಯನ್ನಾಗಿ ಇಂಗ್ಲಿಷ್ ಅಳವಡಿಕೆಯು ಸೂಕ್ತ. ಆದರೆ ಈ ಸರ್ಕಾರಿ ಶಾಲೆಗಳಿಗೆ ಉತ್ತಮ ಆಂಗ್ಲ ಶಿಕ್ಷಕರು ಅನಿವಾರ್ಯ. ಗ್ರಾಮೀಣ ಪ್ರದೇಶಗಳಲ್ಲಿ ಇಂಗ್ಲಿಷ್ ಬಳಕೆಯಾದಾಗ ಕಾನ್ವೆಂಟ್ ಶಾಲೆಗಳಿಗೆ ಸ್ಪರ್ಧೆಯೊಡ್ಡಿ ಬಡಮಕ್ಕಳೂ ಸಹ ಕನ್ನಡದ ಜೊತೆಗೆ ಇಂಗ್ಲಿಷ್ ಪ್ರಭುತ್ವಿಗಳಾಗುತ್ತಾರೆ. ಅದೇ ರೀತಿ ಇದೇ ಸಮಯದಲ್ಲಿ ನಮ್ಮ ರಾಜ್ಯದಲ್ಲಿ ಸ್ಥಾಪನೆಯಾಗುವ ಕೇಂದ್ರೀಯ ಇಂಗ್ಲಿಷ್ ಶಾಲೆಗಳಲ್ಲಿ ಕನ್ನಡದ ಕಲಿಕೆ ಕಡ್ಡಾಯಗೊಳಿಸುವುದು ರಾಜ್ಯ ಸರ್ಕಾರದ ಗುರುತರದ ಜವಾಬ್ದಾರಿ.

ಲಕ್ಷ್ಮೀಸಾಗರ **ಪದ್ಮಶಾಲಿ ಎಲ್. ಕೆ. ಮಂಜುನಾಥ**

ಕರ್ನಾಟಕದ ಪ್ರಾಥಮಿಕ ಶಿಕ್ಷಣದಲ್ಲಿಂದು ಎರಡು ಭಾಷಾ ಮಾಧ್ಯಮಗಳಿವೆ. ಒಂದು – ಮಾತೃಭಾಷಾ ಮಾಧ್ಯಮ, ಇನ್ನೊಂದು – ಆಂಗ್ಲಭಾಷಾ ಮಾಧ್ಯಮ. ಇಲ್ಲಿ ಬಡವರ ಮಕ್ಕಳು ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುತ್ತಿದ್ದರೆ, ಶ್ರೀಮಂತರ ಮಕ್ಕಳು ಮಾತ್ರ ಆಂಗ್ಲಭಾಷಾ ಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಇದು ಆರ್ಥಿಕ ಅಸಮಾನತೆ ಮೂಲದ ವರ್ಗದ ಪ್ರಶ್ನೆಯೇ ಹೊರತು ನಿರ್ದಿಷ್ಟ ಜಾತಿಗಳ ಪ್ರಶ್ನೆಯಲ್ಲ. ಇಂತಹ ಭಾಷಿಕ, ಶೈಕ್ಷಣಿಕ ಮತ್ತು ಆರ್ಥಿಕ ಅಸಮಾನತೆಯನ್ನು ಮಾತೃಭಾಷೆಯನ್ನು ಶೈಕ್ಷಣಿಕ ಮಾಧ್ಯಮವನ್ನಾಗಿ ಒಪ್ಪಿರುವ ನಮ್ಮ ಸಾಂವಿಧಾನಿಕ ಪ್ರಜಾಪ್ರಭುತ್ವವು ಒಪ್ಪುವುದಿಲ್ಲ.

ಆಂಗ್ಲಭಾಷೆ ಇಲ್ಲಿ ಯಾರ ಮಾತೃಭಾಷೆಯೂ ಅಲ್ಲ. ಅಂತಹ ಮಾಧ್ಯಮದ ಶಿಕ್ಷಣವನ್ನು ಒತ್ತಾಯಿಸುವ ಹಕ್ಕು ಸಂವಿಧಾನಾತ್ಮಕವಾಗಿ ಯಾರಿಗೂ ಇಲ್ಲ. ಅಂಥವರ ಬಗೆಗೆ ಸರ್ಕಾರವು ಚಿಂತಿಸುವ ಪ್ರಮೇಯವೂ ಇಲ್ಲ. ಇದನ್ನು ರಾಜ್ಯ ಸರ್ಕಾರವೇ ಅಲ್ಲದೆ ಕೇಂದ್ರ ಸರ್ಕಾರವೂ ಚಿಂತಿಸಿ, ರಾಷ್ಟ್ರೀಯ ಭಾಷಾ ಮತ್ತು ಶಿಕ್ಷಣ ನೀತಿಯನ್ನು ರೂಪಿಸಿ ಜಾರಿಗೊಳಿಸಬೇಕು. ಇಲ್ಲವಾದಲ್ಲಿ ರಾಜ್ಯ ಸರ್ಕಾರವು ಮಾತೃಭಾಷಾ ಮಾಧ್ಯಮವನ್ನು ಜಾರಿಗೊಳಿಸಿದಾಗಲೂ ಕೇಂದ್ರೀಯ ಪಠ್ಯಕ್ರಮದ ಶಾಲೆಗಳ ಮೂಲಕ ಆಂಗ್ಲ ಮಾಧ್ಯಮಕ್ಕೆ ಕಡಿವಾಣ ಇಲ್ಲದಂತಾಗಿ, ಅದಕ್ಕೆ ಅನುಕೂಲಕರವಾದ ವಾತಾವರಣವೇ ನಿರ್ಮಾಣವಾದಂತಾಗುತ್ತದೆ.

ಈ ನೆಲೆಯಲ್ಲಿ ವೈಜ್ಞಾನಿಕ ಭಾಷಾ ನೀತಿಯನ್ನಿಟ್ಟುಕೊಳ್ಳದ ನಮ್ಮ ಇವತ್ತಿನವರೆಗಿನ ಸರ್ಕಾರಗಳ ಸಂದರ್ಭದಲ್ಲಿ ಆಂಗ್ಲ ಭಾಷಾ ಮಾಧ್ಯಮದ ಶಾಲೆಗಳು ದ್ವಿಗುಣಗೊಳ್ಳುತ್ತಿರುವುದು ಸಹಜವೇ ಆಗಿದೆ. ಇದು ಬಂಡವಾಳಶಾಹಿ ಮತ್ತು ಇಂಗ್ಲಿಷ್ ಸಾಮ್ರಾಜ್ಯಶಾಹಿಯನ್ನು ಅಂತರ್ಗತವಾಗಿಸಿಕೊಂಡಿರುವ ಜಾಗತೀಕರಣವು ಪಡೆಯುತ್ತಿರುವ ಸೂಕ್ಷ್ಮ ಮತ್ತು ವಾಮನ




ರೂಪವಾಗಿದೆ. ಇದರಿಂದ ಸ್ಥಳೀಯ ಭಾಷೆ ಮತ್ತು ಶಿಕ್ಷಣವೇ ಅಲ್ಲದೆ ದೇಶೀಯ ಸ್ವಾಯತ್ತತೆ, ಸಾಂಸ್ಕೃತಿಕ ಅನನ್ಯತೆ ಮತ್ತು ರಾಜಕೀಯ ಸಾರ್ವಭೌಮತೆಗಳು ಮೂಲೆಗುಂಪಾಗುವ ಅಪಾಯವಿದೆ. ಆದ್ದರಿಂದ ಎರಡು ಭಾಷಾ ಮಾಧ್ಯಮಗಳನ್ನು ಉಳಿಸಿಕೊಂಡು, ಅವುಗಳಲ್ಲಿ ಒಂದಾದ ಮಾತೃಭಾಷಾ ಮಾಧ್ಯಮದ ಯಾವ ತರಗತಿಯಿಂದ ಇಂಗ್ಲಿಷನ್ನು ಒಂದು ಪಠ್ಯಭಾಗವಾಗಿ ಕಲಿಸಬೇಕು ಎನ್ನುವುದು ಅತ್ಯಂತ ಗೊಂದಲಮಯವಾದ ವಿಚಾರವಾಗಿದೆ. ಆದ್ದರಿಂದ ಜಗತ್ತಿನ ಶಿಕ್ಷಣ ತಜ್ಞರ ಒಮ್ಮತವಾಗಿರುವ ಮಾತೃಭಾಷಾ ಮಾಧ್ಯಮದ ಶಿಕ್ಷಣವೇ ನಾಡಿನ ಎಲ್ಲ ವರ್ಗದ ಮಕ್ಕಳಿಗೆ ಕಡ್ಡಾಯವಾಗಿ ಸಿಗುವಂತಾಗಬೇಕು. ಅದಾದ ನಂತರದಲ್ಲಿಯಷ್ಟೇ ಎರಡನೇ ಪತ್ರಿಕೆಯ ಸ್ಥಾನದಲ್ಲಿ ಯಾವ ಭಾಷೆಗಳಿರಬೇಕು, ಅವುಗಳನ್ನು ಯಾವ ತರಗತಿಯಿಂದ ಕಲಿಸಬೇಕು ಎಂಬ ಪ್ರಶ್ನೆಗಳು ಪ್ರಸ್ತುತವಾಗಬೇಕು.

ಇಂತಹ ತಳಮೂಲದ ಸಮಾನತೆಯ ಸಾಕಾರಕ್ಕಾಗಿ ಮೊದಲ ಹಂತದಲ್ಲಿ ಮಾತೃಭಾಷಾ ಮಾಧ್ಯಮದ ಪ್ರಾಥಮಿಕ ಶಿಕ್ಷಣವು ಸಾರ್ವತ್ರಿಕವಾಗಿ ಅನುಷ್ಠಾನಗೊಳ್ಳಬೇಕು. ಇದು ಮಾತ್ರ ಸಂವಿಧಾನವನ್ನು ಕ್ರಿಯಾತ್ಮಕವಾಗಿ ಗೌರವಿಸುವ ಶಿಕ್ಷಣದ ಪ್ರಜಾಪ್ರಭುತ್ವೀಕರಣವಾಗುತ್ತದೆ.

ಬೆಂಗಳೂರು **ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**

## ಆಗಸ್ಟ್ ಸಂಚಿಕೆ

ಈ ಸಾರಿಯ 'ಹೊಸತು'ನಲ್ಲಿ ಚಿಂತನಾರ್ಹವಾದ ಪತ್ರಗಳಿವೆ; ಜಿ. ರಾಮಕೃಷ್ಣರವರು ಬರೆದಿರುವ ಸೊಗಸಾದ ಸಂಪಾದಕೀಯ ಮಾತುಗಳಿವೆ; ಬಿಸಿ ಏರುತ್ತಿರುವ ಪ್ರಸ್ತುತ ವಿಷಯ – ಭಾಷೆಯ ಬಗ್ಗೆ ಸಮಾಜಶಾಸ್ತ್ರಜ್ಞರ ವಿಶ್ಲೇಷಣೆಯಿದೆ; ನಮ್ಮನ್ನಗಲಿದ ಹಿರಿಯ ಕೆ. ವಿ. ಸುಬ್ಬಣ್ಣ ಅವರನ್ನು ಕುರಿತದ್ದು, 'ಸಭಾಪರ್ವ...'ದ ಬಗ್ಗೆ, ಸೂಫೀ ಚಿಂತನೆಗಳು, ಜಿಟಿಎನ್‌ರ ವಿಜ್ಞಾನಿಗಳನ್ನು ಕುರಿತ ಲೇಖನಗಳೆಲ್ಲ ಚೆನ್ನಾಗಿವೆ; ಕನ್ನಡ ಚಿತ್ರರಂಗದ ಸಮಸ್ಯೆಯನ್ನು ಮತ್ತಷ್ಟು ವಿಸ್ತೃತವಾಗಿ ವಿಚಾರಮಾಡುವ ಅವಶ್ಯಕತೆಯನ್ನು ಮಾನಸಯ್ಯನವರ ಲೇಖನದಿಂದ ತಿಳಿಯಬಹುದಾಗಿದೆ.

'ಹೊಸತು' ಹೊಸ ವಿಚಾರಗಳಿಗೆ ದಾರಿಮಾಡಿಕೊಡುತ್ತ, ಆರೋಗ್ಯಕರ ಆಲೋಚನೆಗಳತ್ತ ಕರೆದೊಯ್ಯುವ ಒಂದು ಸಾಂಸ್ಕೃತಿಕ ಪತ್ರಿಕೆಯಾಗಿದೆ.

ಬೆಂಗಳೂರು **ಎಚ್. ಜಿ. ಸೋಮಶೇಖರ ರಾವ್**

ಬ್ಯಾಂಗನ್ನಡ! ಓದಿ ನಿಜವಾಗಿಯೂ ಬೆಂಗಳೂರಲ್ಲಿ ಕನ್ನಡಿಗರನ್ನು ಬ್ಯಾಟರಿ ಹಾಕಿಕೊಂಡು ಹುಡುಕುವ ಕಾಲ ಬಂದಿದೆ. ಕಾರಣ ಇಂದಿನ ರಾಜಕೀಯ ಪರಿಸ್ಥಿತಿಯಿಂದ ನಾವು ಕನ್ನಡಿಗರೆಂದು ಹೇಳಿಕೊಳ್ಳಲು ನಾಚಿಕೆಯಾಗುವಂತೆ ಆಗುತ್ತಿದೆ. ಚವರಿ ಮಾರೋ ದುಗ್ಗಿ ಕತೆ ತುಂಬಾ ಅರ್ಥಗರ್ಭಿತ ಹಾಗೂ ನೈಜ ಅನುಭವದಿಂದ ಗ್ರಾಮೀಣ ಸೊಗಡು ತುಂಬಿದ ಕತೆಯಾಗಿದೆ. ನಿಜವಾದ ವಿಷಯ ಹೇಳಿದ್ದರಿಂದ ತಿನ್ನುವ ಅನ್ನಕ್ಕೆ ಕಲ್ಲುಬಿದ್ದಂತಾಯಿತು. ವ್ಯಾಪಾರಂ ದ್ರೋಹ ಚಿಂತನಂ ಎಂಬಂತೆ ದುಗ್ಗಿ ಮಾಡಿದ್ದರೆ ಬದುಕುತ್ತಿದ್ದಳು. ನಿಜವಾಗಿಯೂ ಬಡತನ ಎಂಬುದೊಂದು ಶಾಪವಿರಬೇಕು. 'ನವಿಲುಗರಿ' ಕವನ ವಿಭಾ ಅವರನ್ನು ನೆನಪಿಸಿತು. ಕೆ. ವಿ. ಸುಬ್ಬಣ್ಣರವರ ವಿಚಾರ ನಿಜಕ್ಕೂ ಶ್ಲಾಘನೀಯವಾದುದು. 'ಅಹಲ್ಯಾ ಶಾಪ ವಿಮೋಚನೆ' ಕೆಟ್ಟವರಿಗೊಂದು ಮಾರ್ಗದರ್ಶಕವಾಗಿದೆ, ತಿಂಗಳ 'ತಿಳಿವು' ಬಹಳ ಅರ್ಥಗರ್ಭಿತವಾಗಿದೆ.

ವಿಠಲಾಪುರ **ಅ. ಮೃತ್ಯುಂಜಯ**

ಈ ತಿಂಗಳು ಮತ್ತು ಸಂಪಾದಕೀಯ ಲೇಖನಗಳು ನಿಜಕ್ಕೂ ಮಾರ್ಮಿಕವಾಗಿ ಚಿಂತನೀಯವಾಗಿವೆ. ನೆನಪು-ನಮನದಲ್ಲಿ 'ಹೂವು ಚೆಲ್ಲಿದ ಹಾದಿಯಲ್ಲಿ ಹೊರಟುಹೋದ ಕೆ. ವಿ. ಸುಬ್ಬಣ್ಣ'ರವರ ಬಗ್ಗೆ ಬೆಳಕು ಚೆಲ್ಲಿದ ಹಾದಿಯಲ್ಲಿ ಕೆ. ಎಲ್. ಗೋಪಾಲಕೃಷ್ಣ ರಾವ್‌ರವರ ಲೇಖನ ಅಕ್ಷರ ಶ್ರದ್ಧಾಂಜಲಿ ಸಲ್ಲಿಸಿದೆ. ಗಂಭೀರ ಚಿಂತನೆಗೆ ಹಚ್ಚುವ ಲೇಖನಗಳ ಮಹಾಪೂರವನ್ನು ತಿಂಗತಿಂಗಳಿಗೂ ನೀಡುವ ಈ ಹೊಸತು ಸಂಚಿಕೆ ಓದುವುದಕ್ಕೆ ಸಂಭ್ರಮ ಸಡಗರ ನನಗೆ.

ಮೈಸೂರು **ಕಾಳೀಹುಂಡಿ ಕೆ. ವಿ. ಶಿವಕುಮಾರ್**

'ಕನ್ನಡ ಚಿತ್ರರಂಗದ ಸಮಸ್ಯೆ ದೃಷ್ಟಿಕೋನ' ಎಂಬ ಲೇಖನದಲ್ಲಿ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಅಡಿಯಲ್ಲಿ ರಚನೆಯಾಗುವ ಆರ್ಥಿಕ ನೀತಿಗಳು ಪ್ರತಿಯೊಂದು ಕ್ಷೇತ್ರದಲ್ಲಿ ಅಭದ್ರತೆಯನ್ನು ಸೃಷ್ಟಿಮಾಡುವುದರ ಬಗ್ಗೆ ಹಾಗೂ ಚಿತ್ರರಂಗದ ಸಾಮಾಜಿಕ ಹೊಣೆಗಾರಿಕೆಯನ್ನು ಮತ್ತು ಚಿತ್ರರಂಗವು ನಡೆಸುವ ಹೋರಾಟದ ಮನೋಭಾವನೆಯನ್ನು ಬದಲಾಯಿಸಿಕೊಂಡು ಎಲ್ಲಾ ಕ್ಷೇತ್ರದ ಸಮಸ್ಯೆ ಜೊತೆಯಲ್ಲಿ (ಉದಾ : ಕಾರ್ಮಿಕರ, ರೈತಾಪಿ ಯುವ ಜನಾಂಗ ಸಮಸ್ಯೆಗಳು) ಐಕ್ಯತೆ ಹೋರಾಟದಲ್ಲಿ ಹೊಂದಾಣಿಕೆ ಅನಿವಾರ್ಯತೆಯನ್ನು ತಿಳಿಸಿರುವ ಲೇಖಕರಾದ ಶ್ರೀಮಾನ್ ಆರ್. ಮಾನಸಯ್ಯನವರಿಗೆ ಧನ್ಯವಾದಗಳು

ಮೈಸೂರು **ಧರ್ಮೇಶ್**

### ಬೂಮ್‌ರ್‍ಯಾಂಗ್

ಮಹಾನ್ ವಿಜ್ಞಾನಿಗಳ ಸಮ್ಮುಖದಲ್ಲಿ ಐದು ವರ್ಷದ ಪುಟ್ಟಿ, ಅವಳ ತಾಯಿಯು ರಸಾಯನಶಾಸ್ತ್ರದಲ್ಲಿ ಪೋಸ್ಟ್ ಡಾಕ್ಟರಲ್ ಮಾಡುವ ಹಂತದಲ್ಲಿ ತೋರಿದ ಬುದ್ಧಿಮತ್ತೆ ಪ್ರದರ್ಶಿಸಿದ್ದನ್ನು ಕಂಡು ಡಾ॥ ರಾಜಮಣಿಯವರಿಗೆ ಖುಷಿಯೋ ಖುಷಿ! ಶೈಕ್ಷಣಿಕ ಕ್ಷೇತ್ರದಲ್ಲಿ ಮಹಾನ್ ಕ್ರಾಂತಿಯನ್ನು ಸಾಧಿಸಿದ ಉತ್ಸಾಹ! ನಡುರಾತ್ರಿಯಲ್ಲಿ ವನಮಾಲ ಫೋನ್ ಮೂಲಕ ತಿಳಿಸಿದ ಸುದ್ದಿಯಲ್ಲಿ ರಾಜಮಣಿಯವರಿಗೆ ಆಘಾತ ಕಾದಿತ್ತು; ಐದು ವರ್ಷದ ಪುಟ್ಟಿಗೆ ತಾಯಿಯ ಬುದ್ಧಿಮತ್ತೆ ಮಾತ್ರವಲ್ಲ, ತಾಯಿಯ ಆ ವಯಸ್ಸಿಗೆ ಸಹಜವಾದ ಭಾವನೆಗಳೂ ಬಂದಿದ್ದವು!

ಮಕ್ಕಳಿಗೆ ಒಂದನೇ ತರಗತಿಯಿಂದಲೆ, ಸಾಧ್ಯವಾದರೆ ಭ್ರೂಣಾವಸ್ಥೆಯಲ್ಲಿ, ಇಂಗ್ಲಿಷ್ ಭಾಷೆಯನ್ನು, ಪ್ರಾಥಮಿಕ ಶಾಲೆಯಲ್ಲೆ ಕಂಪ್ಯೂಟರ್ ವಿಜ್ಞಾನವನ್ನು ಅರೆದು ಕುಡಿಸಿ, 'ಸೂಪರ್‌ಬ್ರೈನ್'ಗಳನ್ನು ತಯಾರಿಸಬಯಸುವ ತಾಯಿ-ತಂದೆಯರು, 'ಶಿಕ್ಷಣ ತಜ್ಞರು' ಗಮನಿಸಬೇಕಾದ ಕೆಲವು ಸಂಗತಿಗಳು ಇಲ್ಲಿರುವಂತಿವೆ. ಮನುಷ್ಯನ ದೇಹ-ಮನಸ್ಸುಗಳನ್ನು, ಬುದ್ಧಿ-ಭಾವಗಳನ್ನು ಪೃಥಕ್ಕರಿಸಿ ವಿಶ್ಲೇಷಿಸುವ ಪ್ರಯತ್ನಗಳೆಲ್ಲ ಹೀಗೆ ದುರಂತಮಯವಾಗಬಹುದೇನೋ!

*ಬೆಂಗಳೂರು* **ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಇಂಥ ಮಾರ್ಮಿಕ ಮತ್ತು ಚಿಂತನ ಪ್ರೇರಕ ಕತೆ ಓದುತ್ತ ತನ್ಮಯತೆ ಗಳಿಸಿದಾಗ ಕೊನೆಯ ವಾಕ್ಯ ಹಠಾತ್ತನೆ ಆಘಾತ ಕಾಡಿಸಿದ ಪರಿ ಅತ್ಯಂತ ಮನೋಜ್ಞವೆನಿಸಿತು, ಮತ್ತು ಐನ್‌ಸ್ಟೈನ್ ಉಕ್ತಿಯನ್ನು ನೆನಪಿಗೆ ತಂದಿತು : ''ಗಣಿತೋಕ್ತಿ ವಾಸ್ತವತೆಯನ್ನು ಪ್ರತಿನಿಧಿಸುತ್ತಿರುವ ತನಕ ಖಚಿತವಲ್ಲ, ಖಚಿತವಾಗಿರುವ ತನಕ ಪ್ರತಿನಿಧಿಸುವುದಿಲ್ಲ.''

*ಮೈಸೂರು* **ಜಿ. ಟಿ. ನಾರಾಯಣರಾವ್**

### ಕೆ. ವಿ. ಸುಬ್ಬಣ್ಣ

ಭಾರತೀಯ ಸಂಸ್ಕೃತಿ, ಇತಿಹಾಸ, ಭಾಷೆ, ಪರಂಪರೆ, ರಂಗಕಲೆ, ಸಾಹಿತ್ಯ ಹಾಗೂ ಬೆಳೆಗಾರರಾಗಿ ಕನ್ನಡನಾಡಿನ ಒಂದು ಗ್ರಾಮವನ್ನು ಜಗತ್ತಿನ ಭೂಪಟದಲ್ಲಿ ಗುರುತಿಸುವಲ್ಲಿ ತನ್ನ ಜೀವನವನ್ನು ಮುಡಿಪಾಗಿಟ್ಟ ಕುಂಟಗೋಡು ವಿಭೂತಿ ಸುಬ್ಬಣ್ಣ ನಮ್ಮನ್ನು ಅಗಲಿರುವ ಸಮಯದಲ್ಲಿ 'ಹೊಸತು' ಸಕಾಲಿಕ ಶ್ರದ್ಧಾಂಜಲಿಯನ್ನು ಅರ್ಪಿಸಿದೆ. ಸುಮಾರು ನಲವತ್ತು ವರುಷಗಳ ಹಿಂದೆ ಗ್ರಾಮೀಣ ಪರಿಸರದಲ್ಲಿ ತನ್ನ ಕ್ರಿಯಾಶೀಲತೆಗೆ ರೂಪವನ್ನು ನೀಡುತ್ತಾ, ರಂಗಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ನೂತನ ಆಯಾಮವನ್ನು ನಿರ್ಮಿಸಿ ಎಲೆ ಅಡಿಕೆ ಜಗಿಯುತ್ತ ನೀನಾಸಂ ಸಂಸ್ಥೆಯ ಸಮಗ್ರ ಚಟುವಟಿಕೆಗಳನ್ನು, ಅಕ್ಷರ ಪ್ರಕಾಶನವನ್ನು, ಗಾಂಧೀಜಿ ಜೀವನ ಕ್ರಮವನ್ನು, ಚಲನಚಿತ್ರ ರಸಗ್ರಹಣ ಶಿಬಿರಗಳನ್ನು, ಪರಿಸರ ಸಂರಕ್ಷಣೆ ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವ್ಯಕ್ತಿಗಿಂತ ಮಿಗಿಲಾಗಿ ಸಂಸ್ಥೆಯಾಗಿ ಬೆಳೆದ ಸುಬ್ಬಣ್ಣ ಪ್ರಶಸ್ತಿ ಗೌರವಾದರಗಳಿಂದ ಮಿಗಿಲಾಗಿ ನಿಂತು ಬಾಳಿದವರು. ನಿಂತ ನೆಲ ನಮ್ಮದು, ಆದರೆ, ಕುಡಿಯುವ ನೀರು, ಸೇವಿಸುವ ಗಾಳಿ ಹಾಗೂ ನೋಡುವ ಬೆಳಕು ಜಗತ್ತಿಗೆ ಸೇರಿರುವುದರಿಂದ ನಾವು ವಿಶ್ವ ಮಾನವರು ಎಂದ ಸುಬ್ಬಣ್ಣ ಹುಡುಕಾಟದಲ್ಲಿ ಹೊಸ ಚಿಂತನೆಯನ್ನು ಅರಿಯಲು ಪ್ರಯತ್ನಿಸಿ, ಭಾರತೀಯತೆ ಎಂದರೆ ಪುನರುತ್ಥಾನವಲ್ಲ, ಅದು ಬದುಕಿನ ಸಹಜತೆಯ ಅರ್ಥಪೂರ್ಣತೆ ಎಂದು ತಿಳಿಸಿದವರು.

*ಬೆಂಗಳೂರು* **ನರೇಂದ್ರ ಸಿರಕಜೆ**

### ಕೆ. ವಿ. ಸುಬ್ಬಣ್ಣ ಏಕೈಕ ಪರಮಗುರು

ಆರೇಳು ವರ್ಷಗಳ ಹಿಂದೆ ಸಾಗರದ ಪುರಸಭಾ ಸಭಾಂಗಣದಲ್ಲಿ ಒಂದು ಕಾರ್ಯಕ್ರಮ. ಕೆ. ವಿ. ಸುಬ್ಬಣ್ಣನ ಸಮಾಜವಾದೀ ಗೆಳೆಯರೊಬ್ಬರ ಕುಟುಂಬದವರು ಅಲ್ಲಿದ್ದರು. ಆ ಕುಟುಂಬದ ಹೆಣ್ಣುಮಗಳೊಬ್ಬಳು ಕಾರ್ಯಕ್ರಮ ಮುಗಿದನಂತರ ಸುಬ್ಬಣ್ಣನೊಡನೆ ಮಾತಾಡುತ್ತ, ಅಲ್ಲೇ ಇದ್ದ ತನ್ನ ತಮ್ಮಂದಿರ ಕುರಿತು ''ಇವರಿಗೆಲ್ಲಾ ಸ್ವಲ್ಪ ಬುದ್ಧಿ ಹೇಳಿ ಸುಬ್ಬಣ್ಣ'' – ಅಂದಳು. ''ನಾನೇನು ಹೇಳೋದಿರುತ್ತೆ, ಅವರಿಗೇ ಎಲ್ಲಾ ತಿಳೀತಾ ಹೋಗುತ್ತೆ'' – ಸುಬ್ಬಣ್ಣ ಹೇಳಿದ. ೨೬ ನವೆಂಬರ್ ೨೦೦೪ರಂದು ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಆ್ಯಂಡ್ ಎಕನಾಮಿಕ್ ಛೇಂಜ್ ಸಂಸ್ಥೆಯಲ್ಲಿ ಸಮುದಾಯ ಮತ್ತು ಜನತಂತ್ರ ಎಂಬ ವಿಷಯವಾಗಿ ಮಾತಾಡುತ್ತ ಕೊನೆಯಲ್ಲಿ ಸುಬ್ಬಣ್ಣ ''ನನ್ನ ಬದುಕಿನ ಉದ್ದದಲ್ಲಿ ಏನಾದರೂ ಕಲಿತಿದ್ದರೆ ಅದು ಈ ಸಮುದಾಯದಿಂದ, ಅದೇ ನನ್ನ ಏಕೈಕ ಪರಮಗುರು ಎಂಬ ನನ್ನ ಋಣವನ್ನು ಇಲ್ಲಿ ಹೇಳಿಕೊಳ್ಳುತ್ತೇನೆ'' – ಎಂದಿರುವನು. ಆ ಹೆಣ್ಣುಮಗಳಿಗೆ ಹೇಳಿದ ಮಾತು, ಇಲ್ಲಿ ಇನ್ನೂ ಸ್ಪಷ್ಟವಾಗಿ ಕಂಡಿದೆ. ಸಮುದಾಯವೇ ಕಲಿಸುತ್ತದೆ ಎಂಬುದು ಆತನ ಗಟ್ಟಿ ನಂಬಿಕೆ.

'ಸಂಘಟನೆ' ಹಿಂಸೆಯ ಬಹುದೊಡ್ಡ ಆಕರವಾಗಿರುವುದನ್ನು ಕೀರ್ತಿನಾಥ ಕುರ್ತಕೋಟಿ ಗುರುತಿಸಿರುವುದನ್ನು ನೂರಕ್ಕೆ ನೂರು ಒಪ್ಪಿಯೂ ''ಸಂಘಟನೆ ಹಿಂಸೆಯ ದೊಡ್ಡ ಮೂಲ ಎಂಬುದು ಎಷ್ಟು ನಿಜ ವಾಸ್ತವವೋ ಹಾಗೇ ಅದಕ್ಕೆ ವಿರುದ್ಧವಾದದ್ದೂ ವಾಸ್ತವವೇ'' – ಅನ್ನುತ್ತಾನೆ. ಹೀಗೆ ಯಾವುದೇ ಒಂದು ಅಭಿಪ್ರಾಯದ ಹಿಂದೆ ಮುಂದೆ ಸುಬ್ಬಣ್ಣನ ಮನಸ್ಸು ಹುಡುಕುತ್ತದೆ. ಹೂರಣ ತೆಗೆಯುತ್ತದೆ.

ಭಾರತ ಶ್ರೀಮಂತ ದೇಶ, ಭಾರತೀಯರು ಬಡವರು ಎಂಬ ಮಾತು ಸವಕಲು ನಾಣ್ಯವಾಗಿದ್ದ ಕಾಲದಲ್ಲಿ ಈ ಮಾತನ್ನೇ ಇಟ್ಟುಕೊಂಡು ಸುಬ್ಬಣ್ಣ ಹೀಗೆ ಕೇಳಿದ್ದರು – ಶ್ರೀಮಂತ ದೇಶದೊಳಗಿರುವ ನಾವೇಕೆ ಬಡವರು ಎಂದು ನಮಗೆ ನಾವು ಕೇಳಿಕೊಳ್ಳೋದಿಲ್ಲ? – ಹೀಗೆ ಎದುರಿಗಿದ್ದವನ ಮಾತನ್ನು ತಿರುಗಿಸಿ ತನಗೆ ತಾನೇ ಕೇಳಿಕೊಳ್ಳುವುದು ಸುಬ್ಬಣ್ಣನ ವಿಶಿಷ್ಟ ಗುಣ.

ಪ್ರಜಾಪ್ರಭುತ್ವದಲ್ಲಿ ಹೇಗೆ ಬದುಕಬೇಕೆಂಬುದಕ್ಕೆ ಸುಬ್ಬಣ್ಣ ಒಳ್ಳೆಯ ಉದಾಹರಣೆ. ಪ್ರಜೆಯ ಹಕ್ಕು ಜವಾಬ್ದಾರಿಗಳನ್ನು ತನ್ನ ಜೀವನದುದ್ದಕ್ಕೂ ತೋರಿದ್ದಾನೆ. ಗಾಂಧೀಜಿ, ಲೋಹಿಯಾರ ಚಿಂತನೆಗಳಿಂದ ಪಕ್ವಗೊಂಡಿದ್ದ ಸುಬ್ಬಣ್ಣ ತನ್ನ ಪರಮಗುರುವನ್ನು ಸಮುದಾಯದಲ್ಲಿ ಕಾಣುತ್ತಾ ಬಂದಿದ್ದಾನೆ.

''ಆಧುನಿಕ ತಂತ್ರಜ್ಞಾನದಿಂದ ಜನಪದ ಪ್ರಕಾರಗಳನ್ನು ದಾಖಲಿಸುವುದು, ಅಧ್ಯಯನ ಮಾಡುವುದು ಮಹತ್ವದ್ದೆಂದು ನಮ್ಮ ಯುವಕರು ಭಾವಿಸಿದ್ದಾರೆ. ಸತ್ತು ಹೋದದ್ದೆಲ್ಲವನ್ನೂ ಹೆರಕಿ, ದಾಖಲಿಸಿ ತಂದು ಮನೆಯೆತ್ತರ ರಾಶಿ ಪೇರಿಸಿಟ್ಟು ಯಾವ ಸೌಭಾಗ್ಯ ಸಾಧಿಸುತ್ತೀರಿ? ತಾಯಿಯ ಪ್ರೀತಿ ಸಹಜವಾದದ್ದೇ; ಆದರೆ ಸತ್ತ ತಾಯಿಯ ಹೆಣವನ್ನು ಮನೆಯಲ್ಲಿ ಕಾಪಾಡಿಟ್ಟುಕೊಳ್ಳುತ್ತೀರಾ?'' – ಎಂದು ರಂಗಭೂಮಿ ಮತ್ತು ಸಮುದಾಯ ಲೇಖನದಲ್ಲಿ ಸುಬ್ಬಣ್ಣ ಸಿಟ್ಟಿನಿಂದ ಕೇಳುತ್ತಾನೆ.

''ನಮ್ಮ ರಂಗಭೂಮಿ ನಮ್ಮ ಸಮುದಾಯಿಕತೆಯ ತಾಯಿಬೇರುಗಳನ್ನು ಹುಡುಕಿಕೊಂಡು ಅವುಗಳಿಂದ ತಕ್ಕ ಪೋಷಣೆಯನ್ನು ಪಡೆದುಕೊಳ್ಳುವ ತನಕ ಖಂಡಿತವಾಗಿ ಪ್ರಜಾತಂತ್ರಾತ್ಮಕ ಜೀವನ ಮತ್ತು ಸಂಸ್ಕೃತಿಗಳು ಮುಂದಿನ ಮೇಲುಮೆಟ್ಟಿಲಿಗೆ ಏರಿ ಅರಳಿಕೊಳ್ಳಲಾರವು'' – ಎಂದು ಹೇಳುವ ಮೂಲಕ ಸಮುದಾಯವೇ ಅಂತಿಮವೆನ್ನುವ ತನ್ನ ನಿಲುವನ್ನು ದಾಖಲಿಸಿದ್ದಾನೆ. ಸಮುದಾಯದ ಭಾವಗಳನ್ನು ಅರ್ಥಮಾಡಿಕೊಳ್ಳದೆ ಕೇವಲ ದಾಖಲೆ ಮಾಡುತ್ತಿರುವವರನ್ನು ಛೇಡಿಸಿದ್ದಾನೆ. ಇದು ಸುಬ್ಬಣ್ಣನ ಅಸಲೀ ಗುಣ.

ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ ತುರ್ತುಪರಿಸ್ಥಿತಿ (೧೯೭೫-೭೭) ಬಂದಿತ್ತು, ನಂತರದಲ್ಲಿ ಎದುರಾದ ಚುನಾವಣಾ ಸಂದರ್ಭದಲ್ಲಿ 'ಮತ' ಎಂಬ ಪುಸ್ತಕ ಪ್ರಕಟಿಸಿದ ಸುಬ್ಬಣ್ಣ ಉಚಿತವಾಗಿ ಜನಸಮುದಾಯಕ್ಕೆ ಹಂಚಿದ್ದು ನೆನಪಿಗೆ ಬರುತ್ತಿದೆ. ನಾಡಿನ ಬರಹಗಾರರು, ಚಿಂತಕರು ಯಾವ ಪಕ್ಷಕ್ಕೆ ಮತ ನೀಡುವುದರಿಂದ ಪ್ರಜಾಪ್ರಭುತ್ವ ಉಳಿದೀತು ಎಂಬ ಅಭಿಪ್ರಾಯಕ್ಕೆ ಬಂದಿದ್ದ ಪುಸ್ತಕ ಅದು. ಚಿಂತಕರಿಗೆ ಪ್ರಶ್ನೆಗಳನ್ನು ಕಳಿಸಿ ಉತ್ತರ ಪಡೆದು ಪ್ರಕಟಿಸಿದ್ದ. ಸಮುದಾಯ ಒಟ್ಟಾರೆಯಾಗಿ ಒಂದು ನಿಲುವು ತಾಳಲು ಆ ಪುಸ್ತಕ ಸಹಕಾರಿಯಾಗಿತ್ತು.

ಯಾವುದೇ ಸಾಮಾಜಿಕ ಬಿಕ್ಕಟ್ಟಿನ ಸಂದರ್ಭದಲ್ಲಿ ಪತ್ರಿಕೆಗಳ ಸಂಪಾದಕರಿಗೆ ಪತ್ರ ಬರೆಯುವ ಮೂಲಕ ಜಾಗೃತಿ ಉಂಟುಮಾಡುತ್ತಿದ್ದ. ಅವನ ಎಲ್ಲಾ ಚಟುವಟಿಕೆಗಳ ಹಿಂದೆ ಸಮುದಾಯವೇ ತನ್ನ ಪರಮಗುರು ಎಂಬ ನಿಲುವು ದೃಢವಾಗಿ ಇದ್ದುದನ್ನು ನಾವೀಗ ಗುರುತಿಸಬಹುದು.

ಸುಬ್ಬಣ್ಣನ ಮರಣದ ವಾರ್ತೆ ಬಂದಾಗ ಅವನೇ ಬರೆದ ಸಮುದಾಯ ಮತ್ತು ಜನತಂತ್ರ ಲೇಖನ ಕೈಯಲ್ಲಿತ್ತು. ಸಮುದಾಯವೆಂಬ ಪರಮಗುರುವಿಗೆ ನಮಸ್ಕಾರ ಹೇಳಿ ನಮ್ಮನ್ನಗಲಿದ. – ಹೀಗೆ ಹೇಳಿ ಸತ್ಯ ಕಾಣಿಸಿ ನಮಗೆಲ್ಲಾ ಗುರು ಆಗಿದ್ದ ಅವನ ಪಾರ್ಥಿವ ಶರೀರಕ್ಕೆ ಅಂತಿಮ ನಮಸ್ಕಾರ ಹೇಳುವ ದೌರ್ಭಾಗ್ಯ ಇಷ್ಟು ಬೇಗ ಒದಗಿಬರುತ್ತದೆ ಎಂದು ತಿಳಿದಿರಲಿಲ್ಲ.

*ಕೆಳದಿ* **ಬಂದಗದ್ದೆ ರಾಧಾಕೃಷ್ಣ**

### ಮಹಿಳಾ ಮೀಸಲಾತಿ

ಪಾರ್ಲಿಮೆಂಟ್ ಮತ್ತು ಶಾಸನಸಭೆಗಳಲ್ಲಿ ಮಹಿಳಾ ಪ್ರಾತಿನಿಧ್ಯವನ್ನು ಕುರಿತು 'ಹೊಸತು' ಈವರೆಗೆ ಗಂಭೀರವಾದ ಚರ್ಚೆಯನ್ನು ಆರಂಭಿಸದಿರುವುದು ಆಶ್ಚರ್ಯವೆನಿಸುತ್ತದೆ. ಈಗ ಕೆಲವು ವರ್ಷಗಳಿಂದ ಮಹಿಳೆಯರಿಗೆ ಮೂರನೆಯ ಒಂದು ಭಾಗದಷ್ಟು ಸ್ಥಾನಗಳನ್ನು ಕಾದಿರಿಸುವುದರ ವಿರುದ್ಧವಾಗಿ ದೊಡ್ಡ ರಾಜಕೀಯ ಪಕ್ಷಗಳು ಕಾಲದಿಂದ ಕಾಲಕ್ಕೆ ಪಟ್ಟುಗಳನ್ನು ಬದಲಿಸುತ್ತಾ ಬಂದಿರುವುದು ಮೋಜಿನ ಸಂಗತಿಯಾಗಿದೆ. ಅಧಿಕಾರದಲ್ಲಿದ್ದಾಗ ಮಸೂದೆಯನ್ನು ಅಂಗೀಕರಿಸಲು ಯತ್ನವನ್ನು ಮಾಡದಿದ್ದ ಅಡ್ವಾನಿಯವರ ಪಕ್ಷ ಈಗ ಅದನ್ನು ಬೆಂಬಲಿಸಬೇಕೆಂದು ಬಾಯುಪಚಾರದ ಮಾತನ್ನಾಡುತ್ತಿದೆ. ಹಿಂದೆ ಉಮಾ ಭಾರತಿ, ಸುಷ್ಮಾ ಸ್ವರಾಜ್ ಮುಂತಾದವರು ಮೀಸಲಾತಿಯಲ್ಲಿ ಹಿಂದುಳಿದವರಿಗೆ ಒಳ ಮೀಸಲಾತಿ ಬೇಕೆಂದು ಲಾಲು ಮತ್ತು ಮುಲಾಯಂ ಜೊತೆ ಅಪಸ್ವರವೆತ್ತಿದ್ದರು. ಅಧಿಕಾರದಲ್ಲಿಲ್ಲದಿರುವಾಗ ಇವರಿಗೆಲ್ಲಾ ಮಹಿಳೆಯರ ಬಗ್ಗೆ ಎಲ್ಲಿಲ್ಲದ ಆದರ ಉಕ್ಕುತ್ತದೆ. ನಮ್ಮ ರಾಜ್ಯದಲ್ಲಿ ಮಾಜಿ ಶಾಸಕಿ ಪ್ರಮೀಳಾ ನೇಸರ್ಗಿಯವರ ನಾಯಕತ್ವದಲ್ಲಿ ಮಹಿಳಾ ಮೀಸಲಾತಿಯ ಪರವಾದ ಆಂದೋಳನದ ಮೊದಲ ಹಂತದಲ್ಲಿ ಆಯ್ದ ಮಹಿಳಾ ಮಣಿಗಳು ದೆಹಲಿಗೆ ತೆರಳಿ ಪ್ರಧಾನಿ ಮತ್ತು ಅಧ್ಯಕ್ಷರನ್ನು ಭೇಟಿಯಾಗುವ ಕಾರ್ಯಕ್ರಮವಿದೆ. ಪ್ರಮೀಳಾ ಅವರನ್ನು ಬೇರೆ ಪಕ್ಷಗಳವರು ಹಾಗೂ ಕೆಲವು ಸಂಸ್ಥೆಗಳು ಬೆಂಬಲಿಸುತ್ತಿರುವುದು ಪ್ರಕಟವಾಗಿದೆ. ಆಕೆಯನ್ನು ಹಿಂಬಾಲಿಸುವ ಮುನ್ನ ಈ ಮಹಿಳಾ ಕಾಳಜಿಯುಳ್ಳವರು ಒಂದು ಪ್ರಶ್ನೆ ಕೇಳಬೇಕಾಗಿತ್ತು: ''ಅಂದು ಒಳ ಮೀಸಲಾತಿ ಇಲ್ಲದೆ ಮಸೂದೆಯ ಅಂಗೀಕಾರ ಅಸಾಧ್ಯವೆನ್ನುತ್ತಿದ್ದ ನೀವು ಈಗ ಅದರ ಅಗತ್ಯವನ್ನು ಕೈಬಿಟ್ಟದ್ದೇಕೆ ಮತ್ತು ಅಂದು ಆಂದೋಲನದಲ್ಲಿ ಆಸಕ್ತಿ ತೋರದಿದ್ದವರು ಇಂದು ತೋರುತ್ತಿರುವುದರ ಮರ್ಮವೇನು?'' ನಮಗೆ ಮೀಸಲಾತಿ ಬೇಕು, ಒಳ ಮೀಸಲಾತಿಯ ಗುಮ್ಮನನ್ನು ಮುಂದುಮಾಡಿ ಅದನ್ನು ಮುಂದೂಡುವುದು ಬೇಡ. ಆದರೆ ಶ್ರೀಮತಿ ಪ್ರಮೀಳಾ ಅವರ ಪಕ್ಷದ ನಿಜವಾದ ನಿಲುವು ಅದಕ್ಕೆ ಸಮರ್ಥನೆ ನೀಡುವುದಿಲ್ಲ, ಆಂದೋಲನ ಸರಿ, ಆದರೆ ಅದಕ್ಕೆ ದೆಹಲಿ ಪ್ರವಾಸ ಏಕೆ?

*ಬೆಂಗಳೂರು* **ಚರ್ಚಿಕಾ**

# ಪ್ರಶಾಂತಮುಖಿ



# ಶಾಂತಾದೇವಿ ಮಾಳವಾಡ

ಕನ್ನಡ ಲೇಖಕಿಯರಲ್ಲಿ ಪ್ರಮುಖರೆನಿಸಿದ್ದ ಶ್ರೀಮತಿ ಶಾಂತಾದೇವಿ ಮಾಳವಾಡ ಅವರು ಇತ್ತೀಚೆಗೆ ನಿಧನರಾದದ್ದು ಸಾರಸ್ವತ ಲೋಕದಲ್ಲಿ ಗಮನಾರ್ಹವಾದ ಕೊರತೆಯನ್ನುಂಟುಮಾಡಿದೆ. ನಾಲ್ಕು-ಐದು ದಶಕಗಳಿಗೂ ಹೆಚ್ಚಾಗಿ ಸಾಹಿತ್ಯ ಕೃಷಿ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಗಂಭೀರವಾಗಿ ಕ್ರಿಯಾಶೀಲರಾಗಿದ್ದ ಶ್ರೀಮತಿ ಶಾಂತಾದೇವಿ ಅವರಿಗೆ 'ಹೊಸತು' ತನ್ನ ಗೌರವವನ್ನು ಸೂಚಿಸುತ್ತದೆ.

ಚಿತ್ರ-ಲೇಖನ
ಡಾ॥ ಎಚ್. ಚಂದ್ರಶೇಖರ

**ಹು**ಟ್ಟಿದ್ದು ಸಂಪ್ರದಾಯಸ್ಥ ಕುಟುಂಬದಲ್ಲಿ, ಬಾಲ್ಯದಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡು ಅಜ್ಜಿಯ ಮಮತೆಯ ಮಡಿಲಲ್ಲಿ ಬೆಳೆದು, ಓದಿದ್ದು ಕೇವಲ ಎಂಟನೇ ತರಗತಿಯವರೆಗೆ ಮಾತ್ರ, ಆದರೆ ಸೃಷ್ಟಿಸಿದ್ದು ವಿಪುಲ ಹಾಗೂ ವೈವಿಧ್ಯಮಯ ಸಾಹಿತ್ಯ. ಇಂಥ ಅಚ್ಚರಿ ಪಡುವಂತಹ ಸಾಧನೆ ಮಾಡಿದಂತಹ ಶಾಂತಾದೇವಿ ಮಾಳವಾಡರು ಆಗಸ್ಟ್ ಏಳರಂದು ನಮ್ಮನ್ನಗಲಿದರು.

೧೯೨೨ರಲ್ಲಿ ಬೆಳಗಾಂವಿಯಲ್ಲಿ ಜನಿಸಿದ ದಾನಮ್ಮ ೧೯೩೭ರಲ್ಲಿ ಅಂದಿನ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಪ್ರೊ. ಸ. ಸ. ಮಾಳವಾಡರ ಜೀವನ ಸಂಗಾತಿಯಾಗಿ ಶಾಂತಾದೇವಿಯಾದರು. ಮುಂದೆ ಸ್ವಂತ ಪರಿಶ್ರಮ ಮತ್ತು ಸ್ವಯಂ ಪ್ರತಿಭೆಯಿಂದ ಹಾಗೂ ಪ್ರೊ. ಮಾಳವಾಡರ ಪ್ರೋತ್ಸಾಹದಿಂದಾಗಿ ಶ್ರೇಷ್ಠ ಸಾಹಿತಿಯಾಗಿ ರೂಪಗೊಂಡರು. ಅವರು ಸಾಹಿತ್ಯ ಲೋಕವನ್ನು ಪ್ರವೇಶಿಸಿದ್ದು ೧೯೪೩ರಲ್ಲಿ ಕತೆಗಾರ್ತಿಯಾಗಿ 'ಮೊಗ್ಗೆಯ ಮಾಲೆ' ಎಂಬ ಕಥಾ ಸಂಕಲನದ ಮೂಲಕ. ಅಲ್ಲಿಂದ ೨೦೦೦ದ ವರೆಗೆ ಸತತ ಅಧ್ಯಯನ ಮತ್ತು ಬರವಣಿಗೆಯನ್ನು ಮುಂದುವರೆಸಿ ಸುಮಾರು ೪೦ ಕೃತಿಗಳನ್ನು ರಚಿಸಿದ್ದಾರೆ. ಕತೆ, ಕಾದಂಬರಿ, ಪ್ರವಾಸ ಸಾಹಿತ್ಯ, ವೈಚಾರಿಕ ಸಾಹಿತ್ಯ, ಜಾನಪದ ಸಾಹಿತ್ಯ, ವಚನ ಸಾಹಿತ್ಯ, ಮಹಿಳಾ ಸಾಹಿತ್ಯ, ಮಕ್ಕಳ ಸಾಹಿತ್ಯ ಇತ್ಯಾದಿಯಾಗಿ ಇವರ ಸಾಹಿತ್ಯದ ಹರವು ಹರಿದಿದೆ.

**ಸ್ತ್ರೀವಾದಿ ಸಾಹಿತಿ**

ಭಾರತೀಯ ಸಾಂಸ್ಕೃತಿಕ ಚೌಕಟ್ಟಿನೊಳಗೆ ಸ್ತ್ರೀ ವಿಮೋಚನೆ ಮತ್ತು ಸ್ತ್ರೀಯರ ಸ್ವತಂತ್ರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ನಂಬಿಕೆಯನ್ನಿಟ್ಟುಕೊಂಡ ಶಾಂತಕ್ಕನವರು 'ಮೊಗ್ಗೆಯ ಮಾಲೆ' ಮತ್ತು 'ಕುಂಕುಮ ಬಲ' ಕಥಾ ಸಂಕಲನಗಳಲ್ಲಿ ಹಲವು ಉತ್ತಮ ಕತೆಗಳನ್ನು ರಚಿಸಿದರು. ಅಕ್ಕಮಹಾದೇವಿಯ ವಚನಗಳ ಹಿನ್ನೆಲೆಯಲ್ಲಿ ಕಾಲ್ಪನಿಕ ಕಥಾಗುಚ್ಛವನ್ನು 'ಅಕ್ಕನ ಭಾವ ಸೌರಭ'ದ ಮೂಲಕ ನೀಡಿದ ಕತೆಗಾರ್ತಿಯು ತಮ್ಮ ವಚನ ಸಾಹಿತ್ಯದ ಆಳವಾದ ಅಧ್ಯಯನ ಮತ್ತು ಕಲಾವಂತಿಕೆಯನ್ನು ಮೆರೆದರು.

'ಬಸವ ಪ್ರಕಾಶ', 'ದಾನದಾಸೋಹಿ ದಾನಮ್ಮ' 'ಶೂರರಾಣಿ ಕೆಳದಿಯ ಚೆನ್ನಮ್ಮ' ಈ ಮೂರು ಕಾದಂಬರಿಗಳು ಇವರು ಕನ್ನಡ ಕಾದಂಬರಿ ಲೋಕಕ್ಕೆ ನೀಡಿದ ಅತ್ಯಂತ ಮೌಲಿಕ ಕೃತಿಗಳು. ಅವರಿಂದ ರಚಿತವಾದ ಕಲಾತ್ಮಕ ಕಾದಂಬರಿಗಳಿವು. ಅದರಲ್ಲಿಯೂ ಸುಮಾರು ೬೦೦ ಪುಟಗಳ ವ್ಯಾಪ್ತಿಯ 'ಶೂರರಾಣಿ ಚೆನ್ನಮ್ಮ' ಕಾದಂಬರಿ ಹಲವಾರು ಪ್ರಶಸ್ತಿಗಳನ್ನು ಗಳಿಸಿತು. ಒಂದೆರಡು ವಿಚಾರ ಸಂಕಿರಣಗಳ ವಸ್ತುವಾದ ಈ ಕಾದಂಬರಿ 'ಅನುಪಮಾ ನಿರಂಜನ' ಪ್ರಶಸ್ತಿಯನ್ನು ಗಳಿಸಿತು. ಈ ಕಾದಂಬರಿಯ ರಚನೆಯ ಹಿಂದೆ ಲೇಖಕಿಯರ ಆಳವಾದ ಅಧ್ಯಯನ ಮತ್ತು ಐತಿಹಾಸಿಕ ಪ್ರಜ್ಞೆ ಕೆಲಸ ಮಾಡಿದೆ ಎಂಬುದನ್ನು ಪ್ರತಿಪುಟದಲ್ಲಿ ಓದುಗನು ಗುರ್ತಿಸಬಹುದು.

'ಕನ್ನಡ ತಾಯಿ' (೧೯೫೬) ಕೃತಿಯಲ್ಲಿ ದಾನ ಚಿಂತಾಮಣಿ ಅತ್ತಿಮಬ್ಬೆ, ಬೆಳವಡಿಯ ಮಲ್ಲಮ್ಮ, ಕಂತಿ, ಸಂಚಿಯ ಹೊನ್ನಮ್ಮ, ಅಕ್ಕಮಹಾದೇವಿ, ಅಕ್ಕನಾಗಮ್ಮ ಇವರ ಜೀವನ ಚಿತ್ರಗಳನ್ನು ಬಿಡಿಸಿದ್ದಾರೆ, 'ಭಾರತದ ಮಾನಸಪುತ್ರಿಯರು' (೧೯೮೨) ಎಂಬ ಕೃತಿಯಲ್ಲಿ ಹುಟ್ಟಿನಿಂದ ವಿದೇಶಿಯರಾದರೂ ಭಾರತೀಯ ಸಾಂಸ್ಕೃತಿಕ ಸಂಪನ್ನತೆಯಿಂದ ಆಕರ್ಷಿತರಾದ ಐವರು ವಿದೇಶೀ ಮಹಿಳೆಯರ ಜೀವನ ಚಿತ್ರಗಳನ್ನು ಕಟ್ಟಿಕೊಟ್ಟಿದ್ದಾರೆ.

**ಮಹಿಳೆಯರಿಗೆ ಉಪಯುಕ್ತ ಸಾಹಿತ್ಯ**

ಮಹಿಳಾ ಪ್ರಧಾನ ಸಾಹಿತ್ಯದಲ್ಲಿ ಹೆಚ್ಚಿನ ಒಲವಿದ್ದ ಶಾಂತಕ್ಕನವರು ಸಾಮಾಜಿಕ ಹಾಗೂ ವ್ಯಕ್ತಿಯ ಬೆಳವಣಿಗೆಯಲ್ಲಿ ಮಹಿಳೆಯರಿಗೆ ಉಪಯುಕ್ತವಾಗುವ ವಿಶಿಷ್ಟ ಕೃತಿಗಳನ್ನು ಸಹ ರಚಿಸಿದರು. ಅವರು ರಚಿಸಿದ 'ರಸಪಾಕ' ಎಂಟು ಆವೃತ್ತಿಗಳನ್ನು ಕಂಡಿದೆಯೆಂದರೆ ಅದರ ಜನಪ್ರಿಯತೆ ಮತ್ತು ಉಪಯುಕ್ತತೆಯ ಅರಿವಾದೀತು. 'ಮಹಿಳೆಯರ ಅಲಂಕಾರ' (೧೯೬೧) ಎಂಬುದೊಂದು ಸಂಶೋಧನಾ ಕೃತಿ ಹಲವಾರು ವಿದ್ವಾಂಸರ ಪ್ರಶಂಸೆಗೆ ಪಾತ್ರವಾಯಿತು. 'ಸೊಬಗಿನ ಮನೆ', 'ವಧುವಿಗೆ ಉಡುಗೊರೆ', 'ಮಹಿಳಾಚೇತನ', 'ಕುಟುಂಬ' ಎಂಬ ಕೃತಿಗಳು ಈ ವರ್ಗಕ್ಕೆ ಸೇರಿದ ವಿಶಿಷ್ಟ ಕೃತಿಗಳು.

'ಬಸವಯುಗದ ಶಿವಶರಣೆಯರು', 'ಎಣ್ಣೆ ಹೊಳೆಯ ನಂದಾದೀಪ', 'ಗಂಗಾಂಬಿಕೆ' ಮುಂತಾದವು ಶಾಂತಕ್ಕನವರ ವಚನ ಸಾಹಿತ್ಯದ ಆಳವಾದ ಅಧ್ಯಯನದ ಆಧಾರದ ಮೇಲೆ ಮೂಡಿಬಂದ ಜೀವನ ಚರಿತ್ರೆಗಳು ಮತ್ತು ಕಾದಂಬರಿಗಳು.

**ವೈಚಾರಿಕ ಸಾಹಿತ್ಯ**

ಸೃಜನಶೀಲ ಕೃತಿ ರಚನೆಗಳಲ್ಲಿ ಪಳಗಿದ ಶಾಂತಕ್ಕನವರು ಅಷ್ಟೇ ಗುಣಮಟ್ಟದ ವೈಚಾರಿಕ ಮತ್ತು ವಿಮರ್ಶಾ ಸಾಹಿತ್ಯವನ್ನು ರಚಿಸಿದ್ದಾರೆ. 'ಸಮುಚ್ಚಯ', 'ಮಹಿಳಾಚೇತನ', 'ಸಾರ್ವಜನಿಕ ರಂಗದಲ್ಲಿ ಮಹಿಳೆ' ಇವು ಈ ವರ್ಗಕ್ಕೆ ಸೇರಿದ ಕೃತಿಗಳು. 'ಶ್ರೀಗಿರಿಯಿಂದ ಹಿಮಗಿರಿಯವರೆಗೆ' ಇವರು ರಚಿಸಿದ ಉತ್ತಮ ಪ್ರವಾಸ ಕಥನ.

**ಸಂಸ್ಥೆಯಾಗಿ ಬೆಳಗಿದವರು**

ಶಾಂತಕ್ಕನವರು ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಪಾಲ್ಗೊಂಡಿದ್ದರು. ಸಾಹಿತಿಯಾಗಿ ಮತ್ತು ಸಂಸ್ಥೆಯಾಗಿ ಬೆಳೆದು ಸಮಾಜಕ್ಕೆ ಹಲವು ರೀತಿಯಲ್ಲಿ ಇವರು ಸೇವೆ ಸಲ್ಲಿಸಿದ್ದಾರೆ. ಇವರ

೧೧ನೇ ಪುಟಕ್ಕೆ

*೩ನೇ ಪುಟದಿಂದ (ಈ ತಿಂಗಳು)*

ಬಿದ್ದಿದ್ದುದು ಖಂಡನೀಯ. ನ್ಯಾಯಾಲಯದ ತೀರ್ಪಿನ ನಂತರ ಈಗ ಎಲ್ಲಿಲ್ಲದ ಗಡಿಬಿಡಿ ಪ್ರದರ್ಶಿಸುತ್ತಿರುವ ಮಂದಿ ಇನ್ನು ಮುಂದಾದರೂ ನ್ಯಾಯಾಲಯದ ಲಕ್ಷಣಗಳನ್ನು ಗಮನಿಸಿ ಅಜಾಗರೂಕತೆಯನ್ನು ದೂರ ಮಾಡುತ್ತಾರೆಂದು ಆಶಿಸಬೇಕಾಗಿದೆ. ನಮ್ಮ ನ್ಯಾಯಾಲಯವು ಜನರಿಂದ ದೂರವಾಗುತ್ತಿದೆಯೋ ಅಥವಾ ಖಾಸಗಿ ಹಕ್ಕುಗಳ ರಕ್ಷಣೆಯನ್ನು ಸಂವಿಧಾನದ ಚೌಕಟ್ಟಿನಲ್ಲಿ ವಿಸ್ತಾರಗೊಳಿಸುತ್ತಿದೆಯೋ ವಿಮರ್ಶಿಸಬೇಕಾದ ಕರ್ತವ್ಯವು ಪಾರ್ಲಿಮೆಂಟಿನದು. ಮೂಲತಃ ಒಂದು ಪ್ರಶ್ನೆಯಿದೆ : ಯಾವುದಾದರೂ ಖಾಸಗಿ ಶಿಕ್ಷಣ ಸಂಸ್ಥೆಯು ಸರ್ಕಾರದ ಸಹಾಯವನ್ನು ಕಿಂಚಿತ್ತೂ ಪಡೆಯದೆ ಬೆಳೆದಿರುವುದಕ್ಕೆ ನಿದರ್ಶನಗಳು ಉಂಟೆ ? ಬೆಂಗಳೂರಿನ ಸೆಂಟ್ ಜಾನ್ಸ್ ಮೆಡಿಕಲ್ ಕಾಲೇಜಿನ ಒಂದು ಉದಾಹರಣೆಯನ್ನು ನೋಡುವುದಾದರೆ, ಆ ಕಾಲೇಜಿಗಾಗಿ ಸರ್ಕಾರವು ರೈತರಿಂದ ಜಮೀನನ್ನು ಸ್ವಾಧೀನಪಡಿಸಿಕೊಂಡಿತು. ಇದನ್ನು ಅನುದಾನವೆಂದು ನ್ಯಾಯಾಲಯವು ಪರಿಗಣಿಸದಿರಬಹುದು. ಆದರೆ ಸರ್ಕಾರವು ಆ ಕಾಲೇಜಿಗೆ ಹಲವು ಕೋಟಿಗಳ ದಾನ ಮಾಡಿದ್ದಂತೂ ನಿಜ. ರೈತರು ನಿರ್ಗತಿಕರಾದ್ದು ವಸ್ತುಸ್ಥಿತಿ. ಆದರೆ ಆ ಕಾಲೇಜು ''ಅನುದಾನರಹಿತ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆ'' ಎಂಬ ಹಣೆಪಟ್ಟಿ ಧರಿಸಿ ಸ್ವೇಚ್ಛೆಯಿಂದ ವರ್ತಿಸುತ್ತದೆ, ಸರ್ಕಾರವು ನಿಗದಿಗೊಳಿಸುವ ಮೀಸಲಾತಿಯನ್ನು ತುಚ್ಛೀಕರಿಸುತ್ತದೆ. ಈಗ ನ್ಯಾಯಾಲಯದ ಮುದ್ರೆಯೂ ಅದಕ್ಕೆ ಬಿದ್ದಿದೆ. ಇಂತಹ ನೂರಾರು ವೃತ್ತಿಪರ ಶಿಕ್ಷಣ ಸಂಸ್ಥೆಗಳು ನಮ್ಮ ದೇಶದಲ್ಲಿವೆ. ಅವು ಇನ್ನು ಮುಂದೆ ವಿದ್ಯಾರ್ಥಿಗಳನ್ನು ದಾಖಲಿಸಿಕೊಳ್ಳುವಾಗ ಸರ್ಕಾರದ ಪಾಲುಗಾರಿಕೆಯನ್ನು ಎಳ್ಳಷ್ಟೂ ಮಾನ್ಯ ಮಾಡಬೇಕಾಗಿಲ್ಲ. ಮೀಸಲಾತಿಯಂತೂ ದೂರವೇ ಉಳಿಯಿತು. ಹಾಗಿದ್ದರೆ ಪ್ರವೇಶ ಯಾರಿಗೆ ? ನ್ಯಾಯಾಲಯವು ಅದಕ್ಕೆ ಉತ್ತರ ನೀಡದಿದ್ದರೂ ನಮಗೆ ಉತ್ತರ ಗೊತ್ತಿದೆ: ಅದು ಹಣವಂತರಿಗೆ ಮಾತ್ರ ಲಭ್ಯವಾಗುತ್ತದೆ. ಹಾಗೆ ಪ್ರವೇಶ ದೊರಕಿಸಿಕೊಂಡವರೇ ಅಧಿಕಾರದಲ್ಲಿ ಸುಭದ್ರವಾಗಿ ಕೋಟೆ ಕಟ್ಟಿಕೊಳ್ಳುತ್ತಾರೆ, ಆಳುವ ವರ್ಗದ ಬೆನ್ನೆಲುಬಾಗುತ್ತಾರೆ. ಇದು ನಮ್ಮ ಸಂವಿಧಾನದ ಆಶಯವೆಂದಾದರೆ ಪಾರ್ಲಿಮೆಂಟು ಅದನ್ನು ಸೂಕ್ತವಾಗಿ ತಿದ್ದಬೇಕು, ನ್ಯಾಯಾಲಯದ ಕರ್ಕಶ ಪರಿಣಾಮಗಳನ್ನು ತಡೆಹಿಡಿಯಬೇಕು, ಜನಪರವಾದ ನೀತಿಗಳನ್ನು ಪುಷ್ಟೀಕರಿಸಬೇಕು. ''ನ್ಯಾಯಾಲಯದ ಮುಂದೆ ಕರ್ನಾಟಕದ ಸರ್ಕಾರವು ಸೂಕ್ತವಾಗಿ ವಾದ ಮಂಡಿಸಲಿಲ್ಲ'' ಎಂದು ಹೇಳಿರುವ ಭಾರತೀಯ ಜನತಾ ಪಕ್ಷವು ನಿರ್ಮಮವಾಗಿ ಆತ್ಮಾವಲೋಕನ ಮಾಡಿಕೊಂಡರೆ ಟಿ.ಎಂ.ಎ. ಪೈ ತೀರ್ಪಿನ ಹಿನ್ನೆಲೆಯಲ್ಲಿ ವಾಜಪೇಯಿ ಸರ್ಕಾರ ನಿದ್ರಾವೃತವಾಗಿತ್ತೆಂಬುದು ತಿಳಿಯುತ್ತದೆ. ಸರ್ಕಾರದಿಂದ ಅನುದಾನ ಪಡೆಯದಿದ್ದವರಿಗೆ ಸಾಮಾಜಿಕ ಜವಾಬ್ದಾರಿ ಯಾವುದೂ ಇಲ್ಲವೆಂಬ ನ್ಯಾಯಾಲಯದ ಇಂಗಿತವು ಪ್ರಶ್ನಾರ್ಹವಾಗಿದೆ. ಒಬ್ಬ ವರ್ತಕ ಅಥವಾ ಉದ್ಯಮಿ ಸರ್ಕಾರದ ಅನುದಾನ ಪಡೆಯದಿರುವುದರಿಂದ ಅವನು ಮಾರುಕಟ್ಟೆಯಲ್ಲಿ ಮನಬಂದಂತೆ ವರ್ತಿಸಬಹುದೆ ? ಅವನನ್ನು ನಿರ್ಬಂಧಿಸುವ ಸಾಮಾಜಿಕ ಕಟ್ಟಳೆಗಳೇನೂ ಇಲ್ಲವೇ ? ಹಾಗಾದರೆ, ವೃತ್ತಿಪರ ಶಿಕ್ಷಣ ನೀಡುವ ವ್ಯಾಪಾರಿ ಸಂಸ್ಥೆಗೆ ಸಾಮಾಜಿಕ ಜವಾಬ್ದಾರಿಯಿಂದ ಪೂರ್ಣ ವಿಮುಕ್ತಿ ಹೇಗೆ ತಾನೆ ಸಾಧ್ಯ ? ಕ್ಯಾಪಿಟೇಶನ್ ಶುಲ್ಕ ಕೂಡದೆಂದು ಹೇಳಿರುವ ನ್ಯಾಯಾಲಯವು ಅದನ್ನು ಇಮ್ಮಡಿಗೊಳಿಸುವ ಪ್ರಕ್ರಿಯೆಗೆ ಅಡಿಪಾಯ ಹಾಕಿದೆ, ವ್ಯಾಪಾರವು ಲಾಭದಾಯಕವಾಗುವಂತೆ ಮಾಡಿದೆ. ಈ ಸಂಸ್ಥೆಗಳು ನಿಗದಿಗೊಳಿಸುವ ಶುಲ್ಕ ತೆರಲಾಗದವರೇ ಹೆಚ್ಚಾದಾಗ ಇವು ಕಲ್ಯಾಣ ಮಂಟಪಗಳಾಗಿ ಮಾರ್ಪಾಟು ಹೊಂದಬೇಕಾದೀತು ! ''ಯಾವ ಜನ ವಿಭಾಗಕ್ಕೆ ಶಿಕ್ಷಣ'' ಎಂಬ ಪ್ರಶ್ನೆಯೇ ಅಪ್ರಸ್ತುತವೆಂದು ನ್ಯಾಯಾಲಯವು ಭಾವಿಸಿದ್ದರೆ ಜನಪ್ರತಿನಿಧಿಗಳಿರುವ ಪಾರ್ಲಿಮೆಂಟು ಅದಕ್ಕೆ ಸರಿಯಾದ ಉತ್ತರವನ್ನು ನೀಡಲು ಶಾಸನ ಮಾಡಬೇಕು. ಸಹಸ್ರ ನ್ಯೂನತೆಗಳಿಂದ ತುಂಬಿರುವ ಖಾಸಗಿ ವೃತ್ತಿಪರ ಕಾಲೇಜುಗಳನ್ನು ಹದ್ದುಬಸ್ತಿನಲ್ಲಿಡಲಾಗದಂತಹ ರೀತಿಯಲ್ಲಿ ವಿಶ್ವವಿದ್ಯಾನಿಲಯಗಳ ಮಸೂದೆಯನ್ನು ತಂದ ಸರ್ಕಾರಗಳೆಲ್ಲಾ ಇಂದು ಅಪರಾಧಿ ಸ್ಥಾನದಲ್ಲಿವೆ. ಜನರು ದಂಗೆ ಏಳಕೂಡದೆಂದು ಯಾವ ನ್ಯಾಯಾಲಯವಾಗಲಿ ಪಾರ್ಲಿಮೆಂಟಾಗಲಿ ವಿಧಿಸಲು ಸಾಧ್ಯವಿಲ್ಲ. ಆದರೆ ಅದು ಬೇಡವೆಂದಿದ್ದರೆ, ಸಾಮಾಜಿಕ ಅಗತ್ಯಗಳ ನಿರ್ವಹಣೆಗೆ ಸೂಕ್ತವಾಗಿ ಸ್ಪಂದಿಸಬೇಕಾದ ಅಗತ್ಯವಿದೆ. ಶಿಕ್ಷಣ ವ್ಯವಸ್ಥೆಯನ್ನು ಹಾಳುಗೆಡವಿ ಜನರಿಂದ ದೂರಕ್ಕೆ ಕೊಂಡೊಯ್ಯುವುದು ಒಂದು ರೀತಿಯಲ್ಲಿ ಶೈಕ್ಷಣಿಕ ದಂಗೆಗೆ ಪ್ರಚೋದನೆ ನೀಡಿದಂತೆಯೇ ಆಗುತ್ತದೆ.

* * *

ಮಾನ್ಯ ಶ್ರೀ ಹೊ. ವೆ. ಶೇಷಾದ್ರಿಯವರು ಈ ವರ್ಷದ ಸ್ವಾತಂತ್ರ್ಯೋತ್ಸವದ ಮುನ್ನಾದಿನ ಗತಿಸಿದ್ದನ್ನು ಒಂದು ಚರಿತ್ರೆಯ ವ್ಯಂಗ್ಯವೆಂದು ಯಾರೂ ವ್ಯಾಖ್ಯಾನಿಸಬಾರದು. ಅವರು ನಂಬಿದ್ದ ತತ್ವಗಳಿಗೆ ಸ್ಥಿರವಾಗಿ ಬದ್ಧರಾಗಿದ್ದುದು ಶೇಷಾದ್ರಿಯವರ ಹಿರಿಮೆ. ಅವರಿಗೆ ಯೋಗ್ಯ ಗೌರವ ತೋರುವುದರಲ್ಲಿ 'ಹೊಸತು' ಹಿಂದುಳಿಯುವುದಿಲ್ಲ. ಅವರ ನಿಧನದ ಸಂದರ್ಭದಲ್ಲಿ ನೆರೆದಿದ್ದ ನಾಯಕಗಣ ಭಾರತೀಯ ಜನತಾ ಪಕ್ಷದ ಆಂತರಿಕ ಮುಗ್ಗಟ್ಟುಗಳನ್ನು ಚರ್ಚಿಸಲಿಲ್ಲವಾದರೂ ಅಧ್ಯಕ್ಷ ಅದ್ವಾನಿಯವರನ್ನು ಕಟುವಾಗಿ ಟೀಕಿಸುತ್ತಿದ್ದವರಿಗೆ ಒಂದು ಹೊಸ ದಿಕ್ಕಿನ ಅನುಭವ ಆಗಿರಬೇಕೆಂಬ ಊಹೆ ನಿರಾಧಾರವಾದುದಲ್ಲ. ಶೇಷಾದ್ರಿಯವರ ವರ್ಚಸ್ಸಿನಿಂದಾಗಿ ಮುರಳಿ ಮನೋಹರ ಜೋಶಿಯವರ ಮೂಲಕ ಬೆಂಗಳೂರಿನ ಒಂದು ಯೋಗಶಿಕ್ಷಣ ಕೇಂದ್ರಕ್ಕೆ ವಿಶ್ವವಿದ್ಯಾನಿಲಯದ ಸ್ಥಾನಮಾನ ಸಿಕ್ಕಿದ್ದಿತೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಆರೆಸ್ಸೆಸ್‌ನ ಹಿರಿಯ ಚಿಂತಕರಾಗಿದ್ದ ಶ್ರೀ ಶೇಷಾದ್ರಿಯವರ ಸಮಗ್ರ ಕೃತಿಗಳ ಒಂದು ಸಂಕಲನವನ್ನು ಅರವತ್ತು ವರ್ಷಗಳ ಕಾಲ ಅವರು ಪೋಷಿಸಿದ ಅವರದೇ ಸಂಸ್ಥೆಯು ಹೊರತರುತ್ತದೆಂದು ಆಶಿಸಲಾಗಿದೆ.

* * *

ಈ ತಿಂಗಳ ಒಂದು ಹೇಯ ವಿದ್ಯಮಾನವೆಂದರೆ ನಮ್ಮ ಮಾಧ್ಯಮಗಳು ಪ್ಯಾಲಿಸ್ಟೈನಿನ ಗಾಜಾ ಪಟ್ಟಿಯಿಂದ ಇಸ್ರೇಲಿನ ಪ್ರಜೆಗಳನ್ನು ಹಿಂದಕ್ಕೆ ಕರೆಸಿಕೊಳ್ಳುವ ಘಟನೆಯನ್ನು ವಿಚಿತ್ರವಾಗಿ ಬಿಂಬಿಸಿದ್ದು. ೧೯೬೭ರ ಯುದ್ಧದಲ್ಲಿ ಇಸ್ರೇಲ್ ಆಕ್ರಮಿಸಿಕೊಂಡಿದ್ದ ಪ್ರದೇಶ ಇದು. ಅಲ್ಲಿ ವಸತಿಗಳನ್ನು ನಿರ್ಮಿಸಿದ್ದು ಒಂದು ಮಹತ್ತರ ತಪ್ಪು. ಈಗ ಜನರನ್ನು ಅಲ್ಲಿಂದ ನಿರ್ಗಮಿಸಬೇಕೆಂದು ಹೇಳಿದರೆ ಸಹಜವಾಗಿಯೇ ರೋಷವು ಉಗ್ರಸ್ವರೂಪ ತಾಳುತ್ತದೆ. ಹಾಗೆ ಒಲ್ಲದ ಮನಸ್ಸಿನ ಇಸ್ರೇಲಿ ಪ್ರಜೆಗಳ ಸ್ಥಿತಿಯನ್ನು ದಾರುಣವೋ ಎಂಬಂತೆ ನಮ್ಮ ಮಾಧ್ಯಮದ ಕೆಲವು ವಿಭಾಗಗಳು ಚಿತ್ರಿಸಿವೆ. ಅಮೆರಿಕಾ-ಬ್ರಿಟನ್ ಪ್ರಭುಗಳು ಅವರ ಮಾಧ್ಯಮಗಳಲ್ಲಿ ಬಿಂಬಿಸಿದ್ದನ್ನು ನಮ್ಮ ಈ ಮಾಧ್ಯಮ ಮರ್ಕಟಗಳು ಅಚ್ಚೊತ್ತಿಸಿವೆ. ಇವಕ್ಕೆ ಸ್ವಂತಿಕೆಯೂ ಇಲ್ಲ, ಚರಿತ್ರೆಯ ಪ್ರಜ್ಞೆಯೂ ಇಲ್ಲ. ನಲವತ್ತು ವರ್ಷಗಳ ಹಿಂದೆ ಇದೇ ಗಾಜಾ ಪ್ರದೇಶದಿಂದ ಹೊರದೂಡಲ್ಪಟ್ಟ ಪ್ಯಾಲಿಸ್ಟೈನಿನ ಸಹಸ್ರಾರು ಕುಟುಂಬಗಳು ನಿರ್ವಸಿತರಾಗಿ, ತಮ್ಮದೆಂಬ ರಾಷ್ಟ್ರವೂ ಇಲ್ಲದೆ, ಎಲ್ಲೆಲ್ಲೋ ಕಾರ್ಪಣ್ಯದಿಂದ ದಿನಗಳನ್ನು ತಳ್ಳುತ್ತಿದ್ದರು. ಅವರ ದಾರುಣ ಸನ್ನಿವೇಶಗಳನ್ನು ನಮ್ಮ ಮಾಧ್ಯಮಗಳು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಅವರ ತಾಣಕ್ಕೆ ಅವರು ಹಿಂದಿರುಗಿದರೆ ದುರಾಕ್ರಮಣ ಮಾಡಿದ್ದ ಇಸ್ರೇಲಿನ ಬಗ್ಗೆ ಇವಕ್ಕೆ ತವಕ, ಚಿಂತೆ, ಸಹಾನುಭೂತಿ. ಅದಕ್ಕೇ ಹೇಳಿದ್ದು, ಇವು ಕೆಲವು ಮಾಧ್ಯಮ 'ಮರ್ಕಟ'ಗಳು ಎಂದು. ಈಗಲೂ ಇಸ್ರೇಲ್ ತನ್ನ ಪ್ರಜೆಗಳನ್ನು ಹಿಂದಕ್ಕೆ ಬರಮಾಡಿಕೊಂಡು ಪ್ಯಾಲಿಸ್ಟೈನಿನ ಸಾರ್ವಭೌಮತ್ವಕ್ಕೆ ಎಡೆ ಮಾಡಿಕೊಡುತ್ತದೆಯೇ ಎಂಬುದನ್ನು ಕಾದು ನೋಡಬೇಕು. ಅದು ಸಿದ್ಧಿಸಿದಾಗ ಮಾತ್ರವೇ ಶಾಂತಿಯ ವಾತಾವರಣ ಸಾಧ್ಯ.

* * *

ಬಂಗ್ಲಾದೇಶದ ಮುಜೀಬುರ್ ರಹಮಾನರ ಹತ್ಯೆಯಲ್ಲಿ ಅಮೆರಿಕಾದ ಬೇಹುಗಾರಿಕಾ ಸಂಸ್ಥೆ ಸಿ.ಐ.ಎ. ಕೈವಾಡವಿತ್ತೆಂಬುದನ್ನು ಈಗ ಯೂರೋಪಿನ ಮಾಧ್ಯಮಗಳಲ್ಲಿ ಖಚಿತಪಡಿಸಲಾಗುತ್ತಿದೆ. ಅವಿವೇಕವು ಎಷ್ಟು ಸಾಂದ್ರವೆಂಬುದಕ್ಕೆ ಇದೊಂದು ನಿದರ್ಶನ. ಸಿಐಎಯ ಕೈವಾಡದ ಬಗ್ಗೆ ಭಾರತದಲ್ಲಿ ಎಂದೂ ಅನುಮಾನವಿರಲಿಲ್ಲ. ಬೆಂಗಳೂರಿನ ನಗರ ಸಾರಿಗೆ ನಿಲ್ದಾಣವಿರುವೆಡೆ ಅಂದಿನ ದಿನಗಳಲ್ಲಿ ಕಾಂಗ್ರೆಸ್ ಪಕ್ಷದ ಕಚೇರಿಯಿತ್ತು. ಆ ಪಕ್ಷದ ಆಗಿನ ಉಪಾಧ್ಯಕ್ಷ ಎಲ್.ಟಿ. ಕಾರ್ಲೆ ಅಧ್ಯಕ್ಷತೆಯಲ್ಲಿ ಯುವ ಕಾಂಗ್ರೆಸ್ ಸದಸ್ಯರನ್ನುದ್ದೇಶಿಸಿ ಮಾತನಾಡುವ ಸಂದರ್ಭ ಪ್ರಸ್ತುತ ಲೇಖಕನಿಗಿತ್ತು. ಇನ್ನೇನು ಉಪನ್ಯಾಸ ಆರಂಭವಾಗಬೇಕು, ಅಷ್ಟರಲ್ಲಿ ಮುಜೀಬ್ ಹತ್ಯೆಯ ವಾರ್ತೆಯನ್ನು ಒಬ್ಬ ಕಾಂಗ್ರೆಸ್ಸಿಗ ತಿಳಿಸಿದ. ಅದೇ ಕ್ಷಣದಲ್ಲಿ ಈ ಲೇಖಕ ಸಿಐಎ ಕೈವಾಡವಿದೆಂದು ಉಪನ್ಯಾಸದಲ್ಲಿ ಹೇಳಿ, ಯುವ ಕಾಂಗ್ರೆಸ್ಸಿಗರಿಗೆ ಇಡೀ ಜಾಲವನ್ನು ವಿವರಿಸಿದ. ಅಧ್ಯಕ್ಷ ಕಾರ್ಲೆ ಸಿಟ್ಟಿಗೆದ್ದರು, ಅಮೆರಿಕಾ ಬಗ್ಗೆ ಹಾಗೆ ಸಲೀಸಾಗಿ ಮಾತನಾಡಕೂಡದೆಂದು ಅಬ್ಬರಿಸಿದರು. ಅವರ ಅಮೆರಿಕಾ ನಿಷ್ಠೆಯನ್ನು ಪ್ರಸ್ತುತ ಲೇಖಕ ತೀವ್ರವಾಗಿ ಆಕ್ಷೇಪಿಸಿದ, ಲೇವಡಿ ಮಾಡಿದ ಮತ್ತು ಯುವ ಕಾಂಗ್ರೆಸ್ಸಿಗರೂ ಅದರಲ್ಲಿ ಪಾಲ್ಗೊಳ್ಳುವಂತೆ ಮಾಡಿದ. ಹೀಗಿರುವಾಗ ಇದೇನೋ ಅಚ್ಚರಿ ಎಂಬಂತೆ ಯೂರೋಪಿನಲ್ಲಿ ಗುಲ್ಲೆಬ್ಬಿಸಲಾಗಿರುವುದು ಕುಚೋದ್ಯವೆನಿಸುತ್ತದೆ. ಅದೆಷ್ಟು ದೇಶಗಳನ್ನು ಹೀಗೆ ಅಮೆರಿಕಾ ಹಾಳುಮಾಡಿದೆ ! ಆದರೂ ಆ ಪಾತಕಿಯೊಡನೆ ಸರಸವಾಡಲು ವಾಜಪೇಯಿ- ಮನಮೋಹನ ಸಿಂಗ್ ಸರ್ಕಾರಗಳು ಹಾತೊರೆದಿವೆ. ನಮ್ಮ ಜನರ ಇತಿಹಾಸ ಪ್ರಜ್ಞೆ ಇದರಿಂದ ಕರಕಲಾಗುವುದು ಬೇಡ.

ತಾನು ಬಯಸುವ ಮತ್ತು ತನ್ನ ಲಾಭಕೋರತನಕ್ಕೆ ಅನುವಾಗುವ ಪದ್ಧತಿಯನ್ನು ಪ್ರಜಾಪ್ರಭುತ್ವವೆಂದು ಕರೆದು, ಅದನ್ನು ಬೇರೆ ದೇಶಗಳಲ್ಲಿ ಅಂಕುರಿಸುವಂತೆ ಮಾಡುವ ಅಮೆರಿಕಾದ ಹುನ್ನಾರವು ಮೂಲಭೂತವಾಗಿ ಇಂದಿನ ಜಗತ್ತಿನ ಎಲ್ಲ ಘರ್ಷಣೆ

ಮತ್ತು ಹಿಂಸೆಗಳಿಗೆ ಕಾರಣವಾಗಿದೆ. ಇರಾಕಿನ ಸಂಪತ್ತು ದೋಚಲು ಈಗ ಅಲ್ಲಿ 'ಪ್ರಜಾಪ್ರಭುತ್ವ'ದ ಸ್ಥಾಪನೆಯಾಗುತ್ತಿದೆಯಲ್ಲಾ ಹಾಗೆ. ಈ ಕಾಕದೃಷ್ಟಿಯಲ್ಲಿ (ಕಾಗೆಗೆ ಒಂದೇ ಕಣ್ಣು) ಇಂದಿನ ವೆನಿಝೂಲಾದಲ್ಲಿ ಪ್ರಜಾಪ್ರಭುತ್ವವಿಲ್ಲ. ಶವೇಜ್ ಚುನಾಯಿತ ಅಧ್ಯಕ್ಷನಾದರೂ ಆತನನ್ನು ಕೆಳಗಿಳಿಸಿ ತನ್ನ ಭಂಟರನ್ನು ಅಧಿಕಾರಕ್ಕೆ ತರುವ ಸಂಚು ಅಮೆರಿಕಾದ್ದು. ಅದಕ್ಕಾಗಿ ಸಿಐಎ ಕೋಟಿಗಟ್ಟಲೆ ಹಣವನ್ನು ಖರ್ಚು ಮಾಡುತ್ತಿದೆ. ಅದೇನೂ ನಷ್ಟದ ಬಾಬ್ತು ಅಲ್ಲ; ಏಕೆಂದರೆ, ನಾಳೆ ಅಲ್ಲಿನ ತೈಲವನ್ನು ಧಾರಾಳವಾಗಿ ಹರಿಸಿಕೊಂಡು ಮೀಯಬಹುದು. ಈಚಿನ ತಿಂಗಳುಗಳಲ್ಲಿ ವೆನಿಝೂಲಾ ಕಲಾಶ್ನಿಕೋವ್ ಬಂದೂಕುಗಳನ್ನು ಆಮದು ಮಾಡಿಕೊಂಡಿದೆ. ತನ್ನ ಸೈನ್ಯಕ್ಕೆ ಇವೇ ಭಾರೀ ಆಯುಧಗಳು! ಪರಮಾಣು ಬಾಂಬ್‌ಗಳ ರಾಶಿಯನ್ನು ಹೊಂದಿರುವ ಅಮೆರಿಕಾ ಪ್ರಕಾರ ವೆನಿಝೂಲಾ ಹೀಗೆ ಆಯುಧಗಳನ್ನು ತರಿಸಿಕೊಳ್ಳಕೂಡದಂತೆ. ತಾನು ಎಷ್ಟು ದೇಶಗಳಿಗೆ ಶಸಾಸ್ತ್ರ ಮಾರಾಟ ಮಾಡುತ್ತದೆಂದು ಅಮೆರಿಕಾಕ್ಕೆ ತಿಳಿಯದೇನು? ಅಮೆರಿಕಾದ ಆಕ್ಷೇಪ ಏನೆಂದರೆ ಆಮದು ಮಾಡಿಕೊಂಡ ಆಯುಧಗಳನ್ನು ವೆನಿಝೂಲಾ ಕೊಲಂಬಿಯಾದ ಆತಂಕಕಾರಿಗಳಿಗೆ ಸರಬರಾಜು ಮಾಡುತ್ತದೆಂದು. ಇದಕ್ಕೆ ಪುರಾವೆಯೇನೂ ಇಲ್ಲ. 'ಕಳ್ಳನ ಮನಸ್ಸು ಹುಳ್ಳಹುಳ್ಳಗೆ' ಎಂಬುದಕ್ಕೆ ಇನ್ನೊಂದು ನಿದರ್ಶನ ಇದು. ಒಟ್ಟಿನಲ್ಲಿ ಅಮೆರಿಕಾದ ಭೀಕರ ಪಾತಕ ಕೃತ್ಯಗಳಿಗೆ ಕೊನೆ ಮೊದಲಿಲ್ಲ.

ಇದನ್ನು ರಷ್ಯಾ ಕೂಡ ಈಚೆಗೆ ಚೆನ್ನಾಗಿ ಮನಗಾಣುತ್ತಿದೆ. ಗೋರ್ಬಚೇವ್ ಸಾರಥ್ಯದಲ್ಲಿ ಅಮೆರಿಕಾದ ಡಾಲರುಗಳು ಸೋವಿಯೆತ್ ಒಕ್ಕೂಟವನ್ನು ನುಂಗಿ ನೀರು ಕುಡಿದದ್ದು ಜ್ಞಾಪಕವಿದೆಯಲ್ಲವೆ? ಈಗ ಪುತಿನ್‌ಗೆ ಜ್ಞಾನೋದಯವಾಗುತ್ತಿದೆ, ರಷ್ಯಾದಲ್ಲಿ ಸರ್ಕಾರೇತರ-ಸಾರ್ವಜನಿಕ-ಸಾಂಸ್ಕೃತಿಕ ಸಂಸ್ಥೆಗಳೆಂದು ಕರೆದುಕೊಳ್ಳುವ ಸಹಸ್ರಾರು ಬಣಗಳು ಅಮೆರಿಕಾದಿಂದ ಹೇರಳವಾಗಿ ಹಣ ಪಡೆದು ಕೃತ್ರಿಮ ಯೋಜನೆಗಳಲ್ಲಿ ತೊಡಗಿವೆ ಎಂದು. ಅವುಗಳ ಪ್ರಧಾನ ಉದ್ದೇಶವು ರಷ್ಯಾದ ರಾಜಕೀಯ ಮತ್ತು ಆರ್ಥಿಕತೆಯನ್ನು ಬುಡಮೇಲು ಮಾಡುವುದಾಗಿದೆ. ಅದಕ್ಕೆ ಬೇಕಾದ ನೂರಾರು ಸಂರಚನೆಗಳು ತಲೆಯೆತ್ತಿವೆ, ಜನಗಳಿಗೆ ಮಂಕುಬೂದಿ ಎರಚಿವೆ. ಆದ್ದರಿಂದ ವಿದೇಶಿ ಹಣ ಪಡೆಯುವ ಈ ಸಂಸ್ಥೆಗಳನ್ನು ನಿಯಂತ್ರಿಸಬೇಕೆಂದು ಪುತಿನ್ ಹೊಸದೊಂದು ಕಾನೂನು ರೂಪಿಸುತ್ತಿದ್ದಾನೆ ಮತ್ತು ಈ ಸರ್ಕಾರೇತರ ಸಂಸ್ಥೆಗಳು ಆಕಾಶ ಕಳಚಿ ಬಿದ್ದಿತೆಂದು ಬೊಬ್ಬೆ ಎಬ್ಬಿಸುತ್ತಿವೆ. ಭಾರತದ ಜನ ಮತ್ತು ಸರ್ಕಾರ ಇದರಿಂದ ಒಂದು ಸೂಕ್ಷ್ಮ ಪಾಠ ಕಲಿಯಬೇಕಾಗಿದೆ. ಈ ಸಂದರ್ಭದಲ್ಲಿ ಇನ್ನೊಂದು ವಿಚಾರ : ಕಳೆದ ಒಂದು ದಶಕದಲ್ಲಿ ರಷ್ಯಾ ಮೂಲದ ಹತ್ತಾರು ಆಟಗಾರ್ತಿಯರು ಟೆನಿಸ್ ತಾರೆಯರಾಗಿ ಶೋಭಿಸುತ್ತಿದ್ದಾರಲ್ಲವೇ? ಶರಪೋವಾ, ದಿಮೆಂತ್ಯೇವಾ, ಇತ್ಯಾದಿ 'ವಾ'ಗಳೆಲ್ಲಾ ನೆಲೆಸಿರುವುದು ಅಮೆರಿಕಾದಲ್ಲಿ. ಗೋರ್ಬಚೇವ್ ಕಾಲದಲ್ಲಿ ಸಾರ್ವಜನಿಕ ಉದ್ದಿಮೆಗಳನ್ನು ಹಾಗೂ ಸಾಮೂಹಿಕ ಕೃಷಿಕ್ಷೇತ್ರಗಳನ್ನು ಬಿಡಿಗಾಸಿಗೆ ಕೊಂಡ ಮಾಫಿಯಾ ಪ್ರಭೃತಿಗಳ ವಂಶಗಳವರು ಇವರೆಲ್ಲಾ. ವಾಸ, ತರಬೇತು, ಆಟ, ಪಂದ್ಯ ಎಲ್ಲಕ್ಕೂ ಇವರಿಗೆ ಅಮೆರಿಕಾ ಬೇಕು; ಆದರೆ ಮೂಲಧನ ರಷ್ಯಾದ ಲೂಟಿಯದ್ದು. ಪಾಪ, ನಮ್ಮ ಹಾಕಿ ಮತ್ತು ಕ್ರಿಕೆಟ್ ಪಟುಗಳಿಗೆ ಈ ಹಿನ್ನೆಲೆ ಇಲ್ಲ. ಆದ್ದರಿಂದ ಎಲ್ಲದರಲ್ಲೂ ಸೋಲುವ ವೈಶಿಷ್ಟ್ಯ ಇವರದಾಗಿದೆ.

ಒಬ್ಬ ಮಹಿಳಾ ಅಧಿಕಾರಿಯ ಪೃಷ್ಠವನ್ನು ಜಿಗುಟಿದರೂ ಜೈಲಿಗೆ ಹೋಗಬೇಕಾಗಿ ಬರದ ಪೊಲೀಸ್ ವರಿಷ್ಠ ನಮ್ಮ ಹಾಕಿ ಫೆಡರೇಶನ್ನಿನ ಮಾಲಿಕನಂತೆ ವರ್ತಿಸುತ್ತಾನೆ. ಅವನ ಮತ್ತು ಅವನ ಬಾಲಬಡುಕರ ಬೆಂಬಲವಿಲ್ಲದೆ ಯಾವ ಒಳ್ಳೆಯ ಆಟಗಾರನೂ ನಮ್ಮ ತಂಡದಲ್ಲಿ ಸೇರಲಾರ; ಇರುವ ಆಟಗಾರರಿಗೂ ಕಿರುಕುಳ. ಇನ್ನು ಅವರು ಪಂದ್ಯಗಳನ್ನು ಗೆಲ್ಲುವುದೆಂತು? ಕ್ರಿಕೆಟ್ಟಿನದು ಬೇರೆಯೇ ಕತೆ. ಅದು ಕ್ರಿಕೆಟ್ ಕಂಟ್ರೋಲ್ ಬೋರ್ಡಿನ ತಂಡವೇ ವಿನಾ ಭಾರತದ ತಂಡವಲ್ಲವೆಂದು ಸ್ವತಃ ಬಿಸಿಸಿಐ ನ್ಯಾಯಾಲಯದಲ್ಲಿ ಹೇಳಿದೆ. ಆ ಬೋರ್ಡ್ ತಂಡದ ಆಟಗಾರರಿಗೆ ಹೋಟೆಲು ಉದ್ಯಮದ ಗೀಳು ಹೆಚ್ಚುತ್ತಿದೆ. ಜೊತೆಗೆ ಬಿಳಿಚರ್ಮದ ತರಬೇತುದಾರನಿಲ್ಲದೆ ಮೋಕ್ಷವಿಲ್ಲವೆಂದು ತೀರ್ಮಾನಿಸಿ ಬೋರ್ಡ್ ಆಸ್ಟ್ರೇಲಿಯಾದ ಒಬ್ಬ ಮಹಾತ್ಮನನ್ನು ಕರೆತಂದಿದೆ. ಕೋಟಿಗಟ್ಟಲೆ ಹಣ ಕೊಳೆಯುತ್ತಿರುವ ಬೋರ್ಡಿನ ತೆವಲುಗಳಿಗೆ ಪಾರವೆಲ್ಲಿ! ಈ ಅಸಹ್ಯವಾದ ಅಕ್ರಮಗಳಿಗೆ ಆಗರವಾದ ಕ್ರಿಕೆಟ್ ಬೋರ್ಡಿನ ತಂಡ ಸೋಲುತ್ತಿದ್ದರೆ ಬೋರ್ಡಿನ ಹಣ ಮಾತ್ರ ದ್ವಿಗುಣವಾಗುತ್ತಿರುತ್ತದೆ. ನ್ಯಾಯಾಲಯದ ರಕ್ಷಣೆಯನ್ನೂ ಪಡೆದಿರುವ ಈ ಬೋರ್ಡು ತನ್ನ ತಂಡವನ್ನು ಅಂತರರಾಷ್ಟ್ರೀಯ ಕ್ರಿಕೆಟ್ಟಿನಲ್ಲಿ ಬೋರ್ಡಿಗೂ ಇಲ್ಲದಂತೆ ಮಾಡಿಬಿಡುತ್ತದೆ!

* * *

ಸೌದಿ ಅರೇಬಿಯಾದ ಹೊಸ ದೊರೆ ಉದಾರವಾದಿಯೆಂದು ಮಿಥ್ಯಾ ಪ್ರಚಾರ ನಡೆಯುತ್ತಿದೆ. ಅವನ ಔದಾರ್ಯ ಎಷ್ಟು ವಿಶಾಲವೆಂಬುದನ್ನು ಅಲ್ಲಿಯ ಮಹಿಳೆಯರು ತೀರ್ಮಾನಿಸುತ್ತಾರೆ. ಅವರ ಸ್ಥಿತಿಯನ್ನು ಕಂಡೂ ಕಾಣದಂತೆ ಹೊಂಚುಹಾಕುವ ಅಮೆರಿಕಾ ಎಂಬ ಬೆಕ್ಕಿಗೆ ಕಣ್ಣಿಲ್ಲ. ಆದರೆ ಇರಾನಿನ ಪರಮಾಣು ಸಂಶೋಧನಾ ಕಾರ್ಯವನ್ನು ಮಾತ್ರ ಬಿರುಗಣ್ಣಿನಿಂದ ನೋಡುತ್ತಾ ಆಕ್ರಮಣಕ್ಕೆ ದಿನಗಳನ್ನು ಅಮೆರಿಕಾದ ಅಧ್ಯಕ್ಷ ಎಣಿಸುತ್ತಿದ್ದಾನೆ. ಅಫ್ಘಾನಿಸ್ತಾನ ಮತ್ತು ಇರಾಕ್ ಆಯಿತು; ಇನ್ನು ಇರಾನ್, ವೆನಿಝೂಲಾ, ಬ್ರೆಜಿಲ್ ಮುಂತಾದವುಗಳ ಸರದಿ. ಕೋಫಿ ಅನ್ನಾನ್ ಎಂಬ ವಿಶ್ವಸಂಸ್ಥೆಯ ನಾಯಕ ಮಾತ್ರ ಮೂಕನಾಗಿದ್ದಾನೆ.

---

೮ನೇ ಪುಟದಿಂದ *(ಶಾಂತಾದೇವಿ ಮಾಳವಾಡ)*

ಸೇವಾವ್ಯಾಪ್ತಿಯು ಧಾರವಾಡದ ಅಕ್ಕನ ಬಳಗದಿಂದ ಆರಂಭಗೊಂಡು ದಿಲ್ಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯವರೆಗೆ ಹಬ್ಬಿಕೊಂಡಿತ್ತು. ಇವರು ಸ್ಥಾಪಿಸಿದ ಅಥವಾ ಸಂಪರ್ಕ ಹೊಂದಿದ ಸಾಮಾಜಿಕ ಸಂಸ್ಥೆಗಳ ಪಟ್ಟಿ ತುಂಬಾ ದೊಡ್ಡದು. ಆದ್ದರಿಂದ ಇವರು ಸಂಸ್ಥೆಯಾಗಿ ಬೆಳೆದರು ಎಂದು ಹೇಳಿದರೆ ಸರಿಯಾದೀತು.

ಇಂಥ ಪ್ರತಿಭಾವಂತ ತಾಯಿಯನ್ನು ಹುಡುಕಿಕೊಂಡು ಬಂದ ಪ್ರಶಸ್ತಿಗಳಿಗೆ ಲೆಕ್ಕವಿಲ್ಲ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸಾವಿತ್ರಮ್ಮ-ದೇಜಗೌ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸರಕಾರದ ಅತ್ತಿಮಬ್ಬೆ ಪ್ರಶಸ್ತಿ - ಇವು ಪ್ರಮುಖ ಪ್ರಶಸ್ತಿಗಳು. ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಅಧ್ಯಕ್ಷತೆಯ ಪದವಿಯು ೧೯೯೩ರಲ್ಲಿ ಇವರಲ್ಲಿಗೆ ಬಂತು. ೧೯೯೯ರಲ್ಲಿ ಬೆಳಗಾಂವಿಯಲ್ಲಿ ನಡೆದ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಇವರು ವಹಿಸಿದ್ದರು. ಜೂನ್ ೨೦೦೦ದಲ್ಲಿ ಬಾಗಲಕೋಟೆಯಲ್ಲಿ ನಡೆದ ೬೮ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯು ಇವರ ಸಾಹಿತ್ಯ ಸೇವೆಗೆ ಸಂದ ಶ್ರೇಷ್ಠ ಗೌರವ. ಈ ಅಧ್ಯಕ್ಷತೆಯನ್ನು ಪಡೆದ ಎರಡನೆಯ ಮಹಿಳಾ ಸಾಹಿತಿ ಶಾಂತಕ್ಕನವರು. ಪ್ರತಿ ಪ್ರಶಸ್ತಿ ಬಂದಾಗಲೂ ಸಮ್ಮೇಳನದ ಅಧ್ಯಕ್ಷತೆ ಬಂದಾಗಲೂ, ಶಾಂತಕ್ಕನವರು ತಮ್ಮ ಪತಿ ನೀಡಿದ ಪ್ರೋತ್ಸಾಹ, ಬೆಂಬಲ ಮತ್ತು ಮಾರ್ಗದರ್ಶನವನ್ನು ನೆನೆಯುತ್ತಿದ್ದರು. ಇದು ಈ ದಂಪತಿಗಳ ಪರಸ್ಪರ ಸಂಗಾತಿತನಕ್ಕೆ ಸಾಕ್ಷಿ!

**ಸೌಮ್ಯ ನಿಷ್ಠುರ ಸಂಗಮ**

ಇಷ್ಟು ದೊಡ್ಡ ಸಾಧನೆ ಸಿದ್ಧಿಗಳನ್ನು ಪಡೆದ ಶಾಂತಕ್ಕನವರು ತುಂಬಾ ವಿನಯಶೀಲರು, ಸರಳರು ಹಾಗೂ ಮುಗ್ಧರು. ಜೀವನದಲ್ಲಿ ಸ. ಸ. ಮಾಳವಾಡರಂಥ ಘನ ವಿದ್ವಾಂಸರ ಪತ್ನಿಯಾಗಿ, ಕನ್ನಡ ಸಾರಸ್ವತ ಲೋಕದ ದಿಗ್ಗಜರಾದ ಗೋಕಾಕ, ಬೇಂದ್ರೆ, ಶಂಬಾ ಜೋಶಿ, ಕಣವಿ, ಎನ್ಕೆ ಮುಂತಾದವರ ನೇರ ಆತ್ಮೀಯ ಪರಿಚಯವಿದ್ದ ಶಾಂತಕ್ಕನವರು ನನ್ನಂಥ ಕಿರಿಯನೊಂದಿಗೂ ಅಂತಃಕರಣದಿಂದ ಮಾತನಾಡುತ್ತಿದ್ದರು. ನಾನು ಅವರ ಭಾವಚಿತ್ರ ತೆಗೆಯಲು ಮೊದಲ ಬಾರಿ ಮನೆಗೆ ಹೋದಾಗ (೧೯೯೮) ಅಪರಿಚಿತನಾಗಿ ಹೋದೆ, ಹೊರಬರುವಾಗ ಅವರ 'ಸೋದರ'ನಾದೆ. ನಾನು ಭಾವಚಿತ್ರ ತೆಗೆಯಲು ನನ್ನೊಡನೆ ತುಂಬಾ ಸರಳವಾಗಿ ಸಹಕರಿಸಿದರು. ನಾನು ಅಂದು ತೆಗೆದದ್ದು ಎರಡೇ ಎರಡು ಸ್ನ್ಯಾಪುಗಳು. ಆ ಎರಡೂ ಚಿತ್ರಗಳಲ್ಲಿ ಅವರ ವ್ಯಕ್ತಿತ್ವವನ್ನು ಸೆರೆಹಿಡಿಯಲು ಸಾಧ್ಯವಾಯಿತು. ಯಾಕೆಂದರೆ ಅವರು ಒಳಹೊರಗು ಒರಣವಾಗಿದ್ದರು. ಕೊನೆಯಲ್ಲಿ ಡಾ॥ ಕಣವಿ ಅವರ 'ಅರವತ್ತರೊಸಗೆಯಲಿ' ಎಂಬ ಕವನದ ಎರಡು ನುಡಿಗಳನ್ನು ಉದಾಹರಿಸಿದರೆ ಅವರ ವ್ಯಕ್ತಿತ್ವ ದರ್ಶನವಾಗುತ್ತದೆ.

ಹೊರಗಿನಂತೆಯೇ ಒಳಗು ಒರಣ, ಸಮೀಕರಣ
ಮಿಡಿವ ಅಂತಃಕರಣದಾವರಣವು,
ಸೌಮ್ಯ-ನಿಷ್ಠುರ-ನಿಗಮ ದಾಂಪತ್ಯವು.
ಮೆಲ್ಲನಡೆ, ಮೆಲ್ಲನುಡಿ. ಮುಗ್ಧ ನಗೆ ಮಲ್ಲಿಗೆಯು
ಎಳ್ಳು-ಬೆಲ್ಲದ ಸ್ನಿಗ್ಧ ಸಹ ಚಿಂತನೆ
ಅನುಕಂಪ ಕಂಪೊಗೆವ ಸಂಪಿಗೆ ತೆನೆ.

ಡಾ॥ ಎಚ್. ಚಂದ್ರಶೇಖರ
ಎಮ್.ಐ.ಜಿ. ೬೭, ಕೆ. ಎಚ್. ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು-೭೯



# ತೀ. ನಂ. ಶ್ರೀ. ನಿಷ್ಕಲಂಕ ವಿದ್ವತ್ತಿನ ಒಂದು ಹಿರಿಯ ವ್ಯಕ್ತಿತ್ವ

ಅಭಿರುಚಿ, ಅಧ್ಯಯನ, ಬರೆಹ, ಜೀವನ, ಎಲ್ಲದರಲ್ಲೂ ಶಿಖರಪ್ರಾಯರಾಗಿ ಬಾಳಿಹೋದ ವಿದ್ವಾಂಸರು ಎಲ್ಲ ಕಾಲದಲ್ಲೂ ಕೆಲವರಾದರೂ ಇರುತ್ತಾರೆ. ಮಹಾ ಮೇಧಾವಿಯಾಗಿದ್ದರೂ ಹಣ, ಅಧಿಕಾರ, ಪ್ರಸಿದ್ಧಿ ಯಾವುದಕ್ಕೂ ಹಂಬಲಿಸದೆ ಬಂದದ್ದರಲ್ಲೇ ಬಾಳನ್ನು ಶುದ್ಧವಾಗಿ ರೂಢಿಸಿಕೊಳ್ಳುವ, ಸತ್ಯ ಪ್ರಾಮಾಣಿಕತೆಗಳನ್ನೇ ಬಾಳಿನ ಮಾನದಂಡವಾಗಿ ಮಾಡಿಕೊಂಡ ಅಂಥ ಜನ ಯಾವುದೇ ಸಮಾಜದ ಒಂದು ಭಾಗ್ಯ. ಪ್ರೊ॥ ತೀ.ನಂ. ಶ್ರೀಕಂಠಯ್ಯ ಅಂಥ ಒಂದು ದೊಡ್ಡ ಜೀವ.

ಶ್ರೀಕಂಠಯ್ಯನವರು ಜನಿಸಿದ್ದು ೧೯೦೬ರಲ್ಲಿ, ತುಮಕೂರು ಜಿಲ್ಲೆಯ ತೀರ್ಥಪುರದಲ್ಲಿ. ಅವರ ತಂದೆ ನಂಜುಂಡಯ್ಯ. ತಾಯಿ ಭಾಗೀರಥಮ್ಮ. ಪ್ರೌಢಶಾಲೆಯ ವರೆಗೆ ಓದು ಮುಗಿಸಿದ ತೀನಂಶ್ರೀ ಬಿ.ಎ. ಓದಲು ಮೈಸೂರಿನ ಮಹಾರಾಜ ಕಾಲೇಜಿಗೆ ಬಂದರು. ಬಿ.ಎ. ತರಗತಿಯಲ್ಲಿ ಸಂಸ್ಕೃತ, ಇಂಗ್ಲಿಷ್, ಕನ್ನಡ ಮೂರು ಭಾಷೆಗಳನ್ನೂ ಅಧ್ಯಯನ ಮಾಡಿ ಎಲ್ಲದರಲ್ಲೂ ಚಿನ್ನದ ಪದಕಗಳನ್ನು ಗಿಟ್ಟಿಸಿದರು. ಉಳಿದಂತೆ ಪಡೆದ ಪದಕಗಳೂ ಸೇರಿ ಆ ಕಾಲಕ್ಕೆ ಆರೇಳು ಚಿನ್ನದ ಪದಕ ಗೆದ್ದವರು ಅವರೊಬ್ಬರೇ. ನಂತರ ಸಿವಿಲ್ ಸರ್ವಿಸ್ ಪರೀಕ್ಷೆಗೆ ಕೂತು ಅದರಲ್ಲೂ ಮೂರನೇ ರ್‍ಯಾಂಕ್ ಪಡೆದರು. ಕೂಡಲೇ ಅಮಲ್ದಾರರಾಗಿ ಅವರ ನೇಮಕವಾಯಿತು.

ಆ ದಿನಗಳಲ್ಲಿ ಅಮಲ್ದಾರಿಕೆಯೆಂದರೆ ಭಾರೀ ಹುದ್ದೆ; ಮುಂದೆ ಇನ್ನೂ ದೊಡ್ಡ ದೊಡ್ಡ ಹುದ್ದೆಗಳ ಬಾಗಿಲು ತೆರೆಯುವ ಕೀಲಿಕೈ. ಅಂಥದು ಸಿಗುವುದು ಪೂರ್ವಪುಣ್ಯವೆಂದೇ ಜನರ ನಂಬಿಕೆ. ಆದರೆ ಶ್ರೀಕಂಠಯ್ಯನವರು ಬಂಧು ಮಿತ್ರರನ್ನೆಲ್ಲ ಚಕಿತಗೊಳಿಸುವಂಥ ಒಂದು ತೀರ್ಮಾನ ತೆಗೆದುಕೊಂಡುಬಿಟ್ಟರು. ಗುರುಗಳಾಗಿದ್ದ ಕನ್ನಡ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರ ಸಲಹೆಯ ಮೇರೆಗೆ ಅಮಲ್ದಾರ್ ಹುದ್ದೆಯನ್ನು ಬಿಟ್ಟು ಕಾಲೇಜು ಮೇಷ್ಟರ ಕೆಲಸಕ್ಕೆ ಸೇರಿಬಿಟ್ಟರು ! ಅವರ ಈ ತೀರ್ಮಾನ ಬಹಳ ಜನಕ್ಕೆ ಆಗ ಹಾಸ್ಯಾಸ್ಪದ ನಿರ್ಣಯವಾಗಿ ಕಂಡಿರಬೇಕು. ಆದರೆ ವೆಂಕಣ್ಣಯ್ಯನವರ ವಿಚಾರವೇ ಬೇರೆಯಾಗಿತ್ತು. ಅಷ್ಟೊಂದು ಮೇಧಾವಿಯಾದ ವ್ಯಕ್ತಿ ವಿಶ್ವವಿದ್ಯಾನಿಲಯದಲ್ಲಿ ನಿಂತು ಸಾವಿರಾರು ಜ್ಞಾನದ ಹಣತೆ ಹಚ್ಚಬೇಕೇ ಹೊರತು ಬರೀ ಹಣ ಅಧಿಕಾರ ದರ್ಪ ದೌಲತ್ತುಗಳ ಅಬ್ಬರದ ಲೌಕಿಕದಲ್ಲಿ ತನ್ನನ್ನು ತಾನೇ ಕಳೆದುಕೊಂಡು ಬಿಡಬಾರದು. ಹಾಗೆ ಮಾಡುವುದೆಂದರೆ 'ಹೊಳೆಯಲ್ಲಿ ಹುಣಿಸೆ ತೊಳೆದಂತೆ' ಕಲಿತದ್ದೆಲ್ಲ ಎಂದು ಅವರ ಮತ. ಗುರುವಿನ ಅಭಿಪ್ರಾಯ ಶಿಷ್ಯನಿಗೂ ಸರಿಯೆನ್ನಿಸಿತು. ಅಲ್ಲಿಗೆ ಎಲ್ಲ ಆಮಿಷ ಮುಗಿಯಿತು !

ತೀನಂಶ್ರೀ ಸಿವಿಲ್ ಸರ್ವೀಸ್ ಪರೀಕ್ಷೆಗೆ ಕೂತಿದ್ದಾಗ ನಡೆದ ಘಟನೆ ಇದು. ಪರೀಕ್ಷೆಯ ಕೊನೆಯ ಅಂಗವಾಗಿ ವೈವಾ (ಮೌಖಿಕ) ಪರೀಕ್ಷೆ ಇತ್ತು. ಪರೀಕ್ಷೆ ಆರಂಭವಾಯಿತು. ತೀನಂಶ್ರೀ ಸರದಿ ಬಂತು. ಒಳಗೆ ಹೋದರೆ ಪರೀಕ್ಷಕರಾಗಿ ಉಳಿದ ಕೆಲವರ ಜೊತೆ ಆರ್. ನರಸಿಂಹಾಚಾರ್ಯರೂ ಕೂತಿದ್ದಾರೆ! ಆರ್. ನರಸಿಂಹಾಚಾರ್ಯರು ಹಳಗನ್ನಡ ಸಾಹಿತ್ಯಕ್ಕೆ ದೊಡ್ಡ ರೀತಿಯಲ್ಲಿ ಸೇವೆ ಸಲ್ಲಿಸಿದವರು; ಕನ್ನಡ ಕವಿಚರಿತೆಯ ಸಂಪುಟಗಳನ್ನು ಬರೆದವರು. ತೀನಂಶ್ರೀ ತಲೆಮಾರಿನವರಿಗೆ ಗುರುಪ್ರಾಯರಾದವರು.

ವೈವಾ ಶುರುವಾಯಿತು. ತೀನಂಶ್ರೀ ಎಲ್ಲ ಪ್ರಶ್ನೆಗಳಿಗೂ ತಪ್ಪದೆ ಸಮರ್ಥವಾಗಿ ಉತ್ತರಿಸುತ್ತಿದ್ದಾರೆ. ಸಮಯ ಮುಗಿಯಿತು. ಥಟ್ಟನೆ ನರಸಿಂಹಾಚಾರ್ಯರು ಒಬ್ಬ ಕವಿಯ ಹೆಸರನ್ನು ಹೇಳಿ ''ಇವನ ಬಗ್ಗೆ ನಿಮಗೇನು ಗೊತ್ತಿದೆ ?'' ಎಂದು ಕೇಳಿದರು. ತೀನಂಶ್ರೀ ಅವಾಕ್ಕಾದರು. ಎಷ್ಟೆಲ್ಲ ಅಭ್ಯಾಸ ಮಾಡಿದ್ದಾಗಿದೆ. ಆದರೆ ಅವನ ಹೆಸರು ಬಿಟ್ಟು ಬೇರೇನೂ ನೆನಪಿನಲ್ಲಿ ಇಲ್ಲ. ಯತ್ನಿಸಿ ಸೋತ ತೀನಂಶ್ರೀ ವಿನಯವಾಗಿ ಹೇಳಿದರು – ''ಸರ್, ಈ ಕವಿಯ ಬಗ್ಗೆ ನನಗೆ ಏನೂ ಗೊತ್ತಿಲ್ಲ.''

ನಗುಮುಖ ಮಾಡಿಕೊಂಡ ನರಸಿಂಹಾಚಾರ್ಯರು ''ಚಿಂತೆಯಿಲ್ಲ, ಹೋಗಿಬನ್ನಿ'' ಎಂದರು. ವೈವಾ ಮುಗಿಯಿತು. ಶ್ರೀಕಂಠಯ್ಯನವರು ಮನೆಗೆ ಧಾವಿಸಿ ಬಂದರು. ಕವಿಚರಿತೆ ಬರೆದ ಮಹಾವಿದ್ವಾಂಸನ ಎದುರಿನಲ್ಲಿಯೇ ಕವಿಯೊಬ್ಬನ ಬಗ್ಗೆ ನನಗೆ ಏನೂ ಗೊತ್ತಿಲ್ಲ ಅನ್ನುವಂತಾಯಿತಲ್ಲ ಎಂಬ ಅಸಮಾಧಾನ ಮನಸ್ಸನ್ನು ಸುಡುತ್ತಿದೆ. ಮನೆಯಲ್ಲಿದ್ದ ಕವಿಚರಿತೆ ಎತ್ತಿಕೊಂಡು ಸಂಬಂಧಿಸಿದ ಪುಟ ತಿರುವಿ ನೋಡಿದರು. ಕವಿಯ ಹೆಸರಿನ ಕೆಳಗೆ ಹೀಗೆ ಅಚ್ಚಾಗಿತ್ತು: 'ಈ ಕವಿಯ ಬಗ್ಗೆ ನಮಗೆ ಏನೂ ತಿಳಿದುಬಂದಿಲ್ಲ.'

ತೀನಂಶ್ರೀ ಒಬ್ಬ ಶ್ರೇಷ್ಠ ಅಧ್ಯಾಪಕರು. ಮಾದರಿ ಎಂದರೂ ಸರಿಯೆ. ಪೂರ್ವಸಿದ್ಧತೆಯಿಲ್ಲದೆ ಅವರು ಎಂದೂ ತರಗತಿಗೆ ಬರುತ್ತಿರಲಿಲ್ಲ. ಅಧ್ಯಾಪಕ ಎಂಥ ಮೇಧಾವಿಯೇ ಇರಲಿ ಸಿದ್ಧತೆ ಮಾಡಿಕೊಳ್ಳದೆ ಪಾಠ ಹೇಳುವುದು ವಿದ್ಯಾರ್ಥಿಗಳನ್ನು ಅವಮಾನಿಸಿದಂತೆ, ಅದೊಂದು ಸರಸ್ವತೀದ್ರೋಹ ಎಂದು ಅವರ ಭಾವನೆ. ''ಮುಂದೆ ನೀವೂ ಅಧ್ಯಾಪಕರಾಗಬಹುದು; ಈ ಮಾತು ನೆನಪಿರಲಿ'' ಎಂದು ಅವರು ನಮಗೆಲ್ಲ ಹೇಳುತ್ತಿದ್ದುದುಂಟು. ಪಾಠದ ವಿಷಯವನ್ನು ಅದರ ಸ್ಥೂಲ ವಿವರಗಳ ಸಹಿತ ಅವರು ಮನಸ್ಸಿಗೆ ಖಚಿತ ಮಾಡಿಕೊಂಡಿರುತ್ತಿದ್ದರು. ಹಾಗೆಂದೇ ಅವರ ಉಪನ್ಯಾಸದಲ್ಲಿ ಎಂದೂ ಅರ್ಥಸಂದಿಗ್ಧತೆ ಇರುತ್ತಿರಲಿಲ್ಲ. ಹಾಗೆ ನೋಡಿದರೆ ಅರ್ಥವ್ಯಕ್ತಿ ಅವರ ವಾಗ್ಮಿತೆಯ ಒಂದು ಮುಖ್ಯ ಲಕ್ಷಣವಾಗಿತ್ತು. ಕಾವ್ಯಮೀಮಾಂಸೆ ಇರಲಿ, ಭಾಷಾಶಾಸ್ತ್ರ ಇರಲಿ ಅವರ ತರಗತಿ ಎಂದೂ ನೀರಸವಾದದ್ದಿಲ್ಲ. ಮಾತನಾಡುವಾಗ ಪ್ರತಿ ವಿಷಯಕ್ಕೆ ಒಂದು ಸೊಗಸಾದ ನಿದರ್ಶನ, ಅದು ಅವರಿಗೆ ಅಲ್ಲಿಯೇ ಸ್ಫುರಿಸಿತೆಂಬಂಥ ಸಹಜತೆಯಲ್ಲಿ ಹಾಯುತ್ತಿತ್ತು. ಜಗತ್ತಿನ ಹಿರಿಯ ಲೇಖಕರಾದ ವಾಲ್ಮೀಕಿ, ಕಾಳಿದಾಸ, ಭಾಸ, ಅಶ್ವಘೋಷ, ಹಾಲರಾಜ, ಅಮರು, ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಕೀಟ್ಸ್, ಪಂಪ, ರನ್ನ, ಕುಮಾರವ್ಯಾಸ, ಕುವೆಂಪು, ಬೇಂದ್ರೆ, ಪುತಿನ – ಹೀಗೆ ಸಂಸ್ಕೃತ, ಇಂಗ್ಲಿಷ್, ಹಳಗನ್ನಡ ಹೊಸಗನ್ನಡ ಕವಿಗಳಿಂದ ಅವರು ರುಚಿಕಟ್ಟಾದ ಕಾವ್ಯಭಾಗಗಳನ್ನು ಮಂಡಿಸುತ್ತ ವಿದ್ಯಾರ್ಥಿಗಳ ಜ್ಞಾನವನ್ನು ರುಚಿಶುದ್ಧಿಯನ್ನು ಬೆಳೆಸುತ್ತಿದ್ದರು; ಅವರು ಹಾಯಬೇಕಾದ ಕ್ಷೇತ್ರಗಳನ್ನೂ ಹತ್ತಬೇಕಾದ ಶಿಖರಗಳನ್ನೂ ಸೂಚಿಸುತ್ತಿದ್ದರು. ಅವರ ಹಲವು ಉಪನ್ಯಾಸಗಳು ತುಂಬ ರಸಭರಿತವಾಗಿರುತ್ತಿದ್ದವು. ಹಾಲುಕೀರು ತನ್ನಷ್ಟಕ್ಕೆ ತಾನೇ ರುಚಿಯಾದದ್ದು; ಅಂಥದರಲ್ಲಿ ಗುಟುಕಿಗೊಮ್ಮೆ ಕರಿದ ಗೋಡಂಬಿ ದ್ರಾಕ್ಷಿಗಳು ಸಿಗುವಂತಿದ್ದರೆ ಹೇಗಿರಬೇಡ !

ಒಮ್ಮೆ ತೀನಂಶ್ರೀ ಎಂ.ಎ. ತರಗತಿಗೆ ಪಾಠ ಹೇಳುತ್ತಿದ್ದಾರೆ. ತಾವು ಮಾಡಿಕೊಂಡಿದ್ದ ಟಿಪ್ಪಣಿಗಳ ಕಡೆ ನೋಡಲು ಕೊಂಚ ತಲೆಬಾಗಿದ್ದಾರೆ. ಒಬ್ಬ ವಿದ್ಯಾರ್ಥಿ (ಎಚ್. ವಿ. ಶ್ರೀನಿವಾಸ ಶರ್ಮ) ಕಿಸಕ್ಕನೆ ನಕ್ಕ. ಪಕ್ಕದಲ್ಲಿ ಕೂತಿದ್ದ ಅ.ರಾ.ಮಿತ್ರನಿಗೆ ಏನೋ ತೋರಿಸಿದ. ಅದನ್ನು ಉಳಿದವರೂ ನೋಡಿದರು. ಎಲ್ಲರ ಮುಖದಲ್ಲೂ ನಗು. ತೀನಂಶ್ರೀ ತಲೆ ಎತ್ತಿದಾಗ ಇಡೀ ತರಗತಿಯೇ ನಗುಮುಖವಾಗಿದೆ. ಅವರಿಗೆ ಆಶ್ಚರ್ಯ, ಕುತೂಹಲ. ''ಯಾಕೆ ನಗುತ್ತಿದ್ದೀರಿ ?'' ಎಂದು ಕೇಳಿದರು – ಯಾರಿಗೂ ಹೇಳುವ ಧೈರ್ಯವಿಲ್ಲ. ''ಏನಿದು, ಏನೋ ಹಾಸ್ಯ ಪ್ರಸಂಗ ನಡೆದಿದೆ. ನೀವು ನಗಬಹುದು.

ಡಾ॥ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ನನಗೆ ಹೇಳಬಾರದೆ? ನನಗೂ ನಗಲು ಅವಕಾಶ ಕೊಡಿ'' ಎಂದರು. ಶರ್ಮ ಕೆಟ್ಟಧೈರ್ಯದಿಂದ ''ಏನಿಲ್ಲ ಸಾರ್, ನೀವು ತಲೆ ತಗ್ಗಿಸಿದ್ದಿರಲ್ಲ, ಆಗ ಮೇಲೆ ತಿರುಗುತ್ತಿರೋ ಫ್ಯಾನಿನ ಚಿತ್ರ ನಿಮ್ಮ ತಲೆಯಲ್ಲಿ ತುಂಬ ಚೆನ್ನಾಗಿ ಕಾಣಿಸುತ್ತಿತ್ತು. ತಮಾಷೆ ಎನಿಸಿತು. ನಗು ಬಂತು ಸಾರ್'' ಎಂದ. ನಮಗೆಲ್ಲ ಗಾಬರಿ! ಈ ತಲೆಹರಟೆ ಶರ್ಮ ಹೇಳುತ್ತಿರುವುದೇನು? ನಿಮ್ಮ ತಲೆ ಬೋಳು ಅಂತ ತಾನೆ! ಭಾಷಾಶಾಸ್ತ್ರದ ತರಗತಿಯಲ್ಲಿ ಗಂಭೀರವಾಗಿ ಪಾಠ ಕೇಳೋದು ಬಿಟ್ಟು ಇಂಥ ಕಮಂಗಿ ಕೆಲಸ ಮಾಡುವುದೆ? ಈಗ ಇವನ ಕಪಿಚೇಷ್ಟೆಗೆ ತಕ್ಕ ಪೂಜೆ ಆಗುತ್ತೆ ಅನ್ನಿಸಿತು ನಮಗೆ. ಒಂದು ಸೆಕೆಂಡು ಎಲ್ಲರ ಮುಖ ಗಂಭೀರ. ಆದರೆ ಶರ್ಮನ ಮಾತಿನ ಅರ್ಥ ಹೊಳೆಯಿತೋ ಇಲ್ಲವೋ ತೀನಂಶ್ರೀ ಹೋ ಅಂತ ಜೋರಾಗಿ ನಗಲು ಪ್ರಾರಂಭಿಸಿದರು. ತಲೆ ಮುಟ್ಟಿ ಮುಟ್ಟಿ ನೋಡಿಕೊಂಡು ನಕ್ಕರು. ಇಡೀ ತರಗತಿಯೇ ನಗುವಿನಲ್ಲಿ ಮುಳುಗಿಹೋಯಿತು!

ತೀನಂಶ್ರೀ ತುಂಬ ಗಂಭೀರ ಸ್ವಭಾವದವರು. ಆದರೆ ಸಂದರ್ಭಗಳಲ್ಲಿ ಅಷ್ಟೇ ವಿನೋದಶೀಲರು. ತಮ್ಮನ್ನೇ ಗೇಲಿಗೆ ಸಿಗಿಸಿಕೊಂಡು ನಗಬಲ್ಲ ಮುಳ್ಳಿಲ್ಲದ ವಿನೋದ ಅವರದ್ದು. ಒಮ್ಮೆ ಭಾಷಾಶಾಸ್ತ್ರದ ತರಗತಿ ನಡೆಯುತ್ತಿದೆ. ಒಂದು ಭಾಷೆ ಮಾತನಾಡುವ ಜನ ಬೇರೆ ಭಾಷೆಯೊಂದನ್ನು ಕಲಿತು ಬಳಸುವಾಗ ಆ ಭಾಷೆಯ ವರ್ಣಗಳ ಉಚ್ಚಾರಣೆಯಲ್ಲಿ ಎಷ್ಟೊಂದು ತಪ್ಪಾಗುತ್ತದೆ ಎನ್ನುವುದನ್ನು ತೀನಂಶ್ರೀ ಹೇಳುತ್ತಿದ್ದಾರೆ. ''ಇಂಗ್ಲಿಷಿನ V ಎಂಬ ಅಕ್ಷರ ತೆಗೆದುಕೊಳ್ಳಿ. ನಾವು ಅದನ್ನು ನಮ್ಮ 'ವ'ಕಾರಕ್ಕೆ ಪೂರ್ತಿ ಸಮ ಎನ್ನುವಂತೆ ಉಚ್ಚರಿಸುತ್ತೇವೆ, ಅದು ತಪ್ಪು. ಅದನ್ನು ಹೇಳುವಾಗ ಮೇಲಿನ ಹಲ್ಲು ಕೆಳತುಟಿಗೆ ಕೊಂಚ ತಾಗಬೇಕು. F ಎಂಬ ಅಕ್ಷರ ಉಚ್ಚರಿಸುವಾಗ ಮಾಡುವ ರೀತಿಯಲ್ಲಿ. ನಿದರ್ಶನಕ್ಕೆ 'ಲವ್' ಎಂಬ ಪದ ನೋಡಿ. ಅದನ್ನು ಹೇಗೋ ಹೇಳುವುದಲ್ಲ, ತುಟಿಕಚ್ಚಿ ಹೇಳಬೇಕು'' ಎಂದರು. ತರಗತಿಯಲ್ಲಿ 'ಆಹಾ' 'ಓಹೋ' ಎಂಬ ಉದ್ಗಾರ, ಗುಸು ಗುಸು, ನಗು ಇತ್ಯಾದಿ! ತಮ್ಮ ಅರಿವಿಲ್ಲದೆಯೇ ತಮ್ಮ ಮಾತಿಗೆ ಮೂಡಿದ ಹೊಸ ಅರ್ಥ ಕೂಡಲೇ ತೀನಂಶ್ರೀ ಅವರಿಗೆ ಹೊಳೆದುಹೋಯಿತು. ಅವರು ನಗುತ್ತಾ ''ಚೆನ್ನಾಯಿತು ಚೆನ್ನಾಯಿತು. ಇದು ಭಾಷಾ ಶಾಸ್ತ್ರದ ತರಗತಿ. ಕಾವ್ಯಮೀಮಾಂಸೆಯದಲ್ಲ. ಇಲ್ಲಿ ಮಾತಿಗೆ ಧ್ವನಿ ಹುಡುಕುತ್ತಾರಾ? 'ನ ಸರ್ವತ್ರ ಧ್ವನಿರಾಗಿಣಾ ಭವಿತವ್ಯಂ' (ಎಲ್ಲ ಕಡೆ ಧ್ವನಿ ಹುಡುಕಬಾರದು) ಅಂತ ಅಭಿನವ ಗುಪ್ತ ಹೇಳಿಲ್ಲವೆ? ಎಲ್ಲ ಆಗಲೇ ಮರೆತು ಹೋಯಿತೆ?'' ಅಂತ ತಮಾಷೆಯಾಗಿ ತಮ್ಮನ್ನು ಸಮರ್ಥಿಸಿಕೊಂಡರು. ಆದರೂ ಶಿಷ್ಯರ ಧ್ವನಿಗ್ರಹಣ ಸಾಮರ್ಥ್ಯವನ್ನು ಅವರು ಮೆಚ್ಚಿಕೊಂಡದ್ದು ಅವರ ನಗುಮುಖದಲ್ಲಿ ಎದ್ದು ಕಾಣುತ್ತಿತ್ತು!

ಕಾವ್ಯಮೀಮಾಂಸೆಯ ಮತ್ತೊಂದು ತರಗತಿ. ಗುರುಗಳು ಮೀಮಾಂಸಕಾರ ಮಮ್ಮಟನ ಬಗ್ಗೆ ಹೇಳುತ್ತ 'ಸದ್ಯೋಮುಂಡಿತ ಮತ್ತಹೂಣ ಚಬುಕ ಪ್ರಸ್ಪರ್ಧಿನಾ ರಂಗಿತಂ' ಎಂಬ ಅವನ ವಾಕ್ಯವನ್ನು ಉದ್ಧರಿಸಿದರು. ಕೊಂಚ ಹಳದಿ ಕೆಂಪುಮಿಶ್ರಿತವಾದ ಆ ಕಿತ್ತಳೆಹಣ್ಣು ಆಗತಾನೆ ಮುಖಕ್ಷೌರ ಮಾಡಿದ್ದ, ಮದಿಸಿದ ಹೂಣನ ಕೆನ್ನೆಯೊಡನೆ ಸ್ಪರ್ಧಿಸುತ್ತಿತ್ತು ಎನ್ನುವುದು ಆ ಮಾತಿನ ಅರ್ಥ. ತೀನಂಶ್ರೀ ಅದನ್ನು ವಿವರಿಸಲು ಹೋದಾಗ ನಮಗೆಲ್ಲ ನಗು. ಅದಕ್ಕೆ ವಿವರಣೆ ಯಾಕೆ ಬೇಕು? ಮದಿಸಿದ ಹೂಣನ ಕೆನ್ನೆಯನ್ನು ನಾವು ಕಷ್ಟಪಟ್ಟು ಕಲ್ಪಿಸಿಕೊಳ್ಳಬೇಕಾದ ಅಗತ್ಯವೇ ಇರಲಿಲ್ಲ. ಗುರುಗಳೇ ಎದುರಿಗಿದ್ದರು! ವಸ್ತು ಎದುರಿಗೆ ಇರುತ್ತ ವ್ಯಾಖ್ಯಾನ ಯಾಕೆ ಬೇಕು? ಇಂಥ ಸಂದರ್ಭಗಳಲ್ಲಿ ನಾವು ನಕ್ಕಾಗ ತೀನಂಶ್ರೀ ಅನಪೇಕ್ಷಿತವಲ್ಲದ ಒಂದು ಬಗೆಯ ಮುಜುಗರ ಪೇಚುಗಳಿಗೆ ಸಿಕ್ಕಂತೆ ತೋರುತ್ತಿದ್ದರು. ಶೃಂಗಾರ ರಸದ ಯಾವುದಾದರೊಂದು ಭಾಗವನ್ನು ಹೇಳಬೇಕಾಗಿ ಬಂದರೆ ''ಇದು ಪ್ರೌಢವಾದ ತರಗತಿ. ಏನನ್ನೂ ಗಂಭೀರವಾಗಿ ಸ್ವೀಕರಿಸಬಲ್ಲ ವಿದ್ಯಾರ್ಥಿಗಳು ನೀವು. ಇದನ್ನು ಇಲ್ಲಿ ಹೇಳಬಹುದು''. ಅಂತೆಲ್ಲ ಮುನ್ನುಡಿ ಹಾಕಿ ಆ ಭಾಗವನ್ನು ವಿವರಿಸುತ್ತಿದ್ದರು. ಈ ಪೀಠಿಕೆ ಶುರುವಾದೊಡನೆ ನಮಗೆ ಗೊತ್ತು, ಈಗ ಏನೋ ಸ್ವಾರಸ್ಯವಾದದ್ದು ಹೊರಡುತ್ತದೆ ಅಂತ. ನಾವೆಲ್ಲ ಸುಳ್ಳೇ ಮುಖವನ್ನು ಗಂಭೀರವಾಗಿಸಿಕೊಂಡು ಅರವತ್ತು ವರ್ಷದವರ ಮರ್ಯಾದೆಯ ಕಳೆಯನ್ನು ಮುಖದಲ್ಲಿ ಮೂಡಿಸಿಕೊಂಡು ಕೂರುತ್ತಿದ್ದೆವು. ಹಾಗೂ ನಮ್ಮ ನಟನೆ ಒಂದೊಂದು ಸಲ ಬಯಲಾಗಿಬಿಡುತ್ತಿತ್ತು!

ಒಮ್ಮೆ ತೀನಂಶ್ರೀ ಬೇಂದ್ರೆಯವರ ಶಾಸ್ತ್ರ ಲೇಖನವೊಂದನ್ನು ಟೀಕಿಸುತ್ತ ''ಬೇಂದ್ರೆ ಶಾಸ್ತ್ರ ವಿಷಯದ ಚರ್ಚೆಗೂ ತುಂಬ ಊಹೆ ಕಲ್ಪನೆ ಬಳಸುತ್ತಾರೆ, ಜೊತೆಗೆ ವಿಚಿತ್ರ ತರ್ಕ ಬೆಳೆಸುತ್ತಾರೆ. ಕೇಳುತ್ತ ಕೂತರೆ ನಿಮ್ಮನ್ನು ಒಪ್ಪಿಸಿಯೂ ಬಿಡುತ್ತಾರೆ. ಎಷ್ಟೇ ಆಗಲಿ ಅವರು ಕವಿ. ಕವಿಗಳು ಶಾಸ್ತ್ರಾಧೀನರೆ? ಶಾಸ್ತ್ರವನ್ನೇ ಸೃಷ್ಟಿಸುವವರು'' ಎಂದು ವಿನೋದವಾಗಿ ಹೇಳುತ್ತಲೇ ಅವರು ಬೇಂದ್ರೆಯವರ ವ್ಯಾಖ್ಯಾನವನ್ನು ಬದಿಗೆ ಸರಿಸಿದರು. ಆಗ ಅವರು ಬೇಂದ್ರೆ ಬಗ್ಗೆ ಹೇಳಿದ ಮಾತು ಒಂದು ವಿನೋದದ ಪ್ರಸಂಗದಲ್ಲೇ ಆದರೂ ನೂರಕ್ಕೆ ನೂರು ನನ್ನ ಅನುಭವಕ್ಕೆ ಬಂತು.

ಬೇಂದ್ರೆ ಮಹಾರಾಜ ಕಾಲೇಜಿಗೆ ವಿಶೇಷ ಉಪನ್ಯಾಸಗಳ ಸಲುವಾಗಿ ಬಂದಿದ್ದರು. ತೀನಂಶ್ರೀ ಮನೆಯಲ್ಲೇ ಅವರ ವಾಸ್ತವ್ಯ. ಹಿಂದಿನ ದಿನ ನಾನು ಸಿಕ್ಕಾಗ ಶ್ರೀಕಂಠಯ್ಯನವರು ''ಭಟ್ಟ, ನಾಳೆ ಬೇಂದ್ರೆ ಬರುತ್ತಾರೆ. ಎರಡು ದಿನ ಇರುತ್ತಾರೆ. ನೀವೂ ಬಂದು ಜೊತೆಗೆ ಸ್ವಲ್ಪ ಕಾಲ ಕಳೆಯಿರಿ. ಬೇಂದ್ರೆ ಅದ್ಭುತ ವ್ಯಕ್ತಿ. ಅವರನ್ನು ಹತ್ತಿರದಿಂದ ಕಾಣಬೇಕು'' ಎಂದರು. ಆಗ ನಾನು ಅವರ ಮನೆಯಲ್ಲಿ ವಾರಾನ್ನ ಮಾಡಿಕೊಂಡಿದ್ದ ವಿದ್ಯಾರ್ಥಿ. ನಾನು ಬಹಳ ಖುಷಿಯಿಂದಲೇ ''ಆಗಲಿ ಸಾರ್'' ಅಂತ ಹೇಳಿ ಮಾರನೇ ದಿನ ಮಧ್ಯಾಹ್ನ ಅವರಲ್ಲಿಗೆ ಹೋದೆ.

ಮೂರ್ತಿರಾಯರು, ತೀನಂಶ್ರೀ, ನಂ. ಶಿವರಾಮ ಶಾಸ್ತ್ರೀ (?) ಕುಳಿತು ಬೇಂದ್ರೆ ಜೊತೆ ಹರಟೆಕೊಚ್ಚುತ್ತಿದ್ದರು. ನಾನೂ ಅವರ ಬಳಿ ಹೋಗಿ ಕೂತೆ. ಗುರುಗಳು ನನ್ನನ್ನು ಬೇಂದ್ರೆಗೆ ಪರಿಚಯಿಸಿದರು. ''ಈತನಿಗೆ ಕಾವ್ಯದಲ್ಲಿ ವಿಶೇಷ ಆಸಕ್ತಿ'' ಎಂದೂ ಸೇರಿಸಿದರು. ಬೇಂದ್ರೆ ವಿನೋದವಾಗಿ ''ಹುಡುಗಾ, ನಿನಗೆ ಕಾವ್ಯದಲ್ಲಿ ಆಸಕ್ತಿ ಈಗಲೂ ಉಳಿದಿದೆಯೋ ಅಥವಾ (ತೀನಂಶ್ರೀಯವರನ್ನು ತಮ್ಮ ಕೈಕೋಲಿನಿಂದ ತೋರಿಸುತ್ತ) ಈತನ ಭಾಷಾಶಾಸ್ತ್ರದ ಮಹಾಗ್ನಿಯಲ್ಲಿ ಎಲ್ಲ ದಗ್ಧವಾಗಿ ಹೋಯಿತೋ?'' ಎಂದು ನಕ್ಕರು. ನಾನು ''ಎಲ್ಲಾದರೂ ಉಂಟೆ. ಅವರು ಕಾವ್ಯಮೀಮಾಂಸೆ ಬರೆದವರು. ಕಾವ್ಯದಲ್ಲಿ ನನಗಿದ್ದ ರುಚಿಯನ್ನು ಬೆಳೆಸಿದವರು'' ಎಂದು ಮಾತು ಜೋಡಿಸಿದೆ. ಬೇಂದ್ರೆ ''ಏನೋಪ್ಪ, ನನಗೆ ನಂಬಿಕೆಯಿಲ್ಲ. ಕಾವ್ಯ ಇರಲಿ, ಈತನ ಶಾಸ್ತ್ರಜ್ಞಾನ ಕೂಡ ನನಗೆ ಅನುಮಾನದ್ದಾಗಿ ಕಾಣುತ್ತದೆ. ನೀನೇ ನೋಡು. ಕನ್ನಡ ಒಂದು ದ್ರಾವಿಡ ಭಾಷೆ, ತಮಿಳಿಗಿಂತ ಕೊಂಚ ನಂತರ ಬಂದದ್ದು. ಹೀಗೆ ಏನೇನೋ ಈತನ ತರ್ಕ – ಅದು ಎಲ್ಲಾದರೂ ಸಾಧ್ಯವೆ? ಕನ್ನಡ ಎಲ್ಲ ಭಾಷೆ ಗಳಿಗಿಂತ ಮೊದಲು ಹುಟ್ಟಿದ್ದಲ್ಲವೆ? ಜಗತ್ತಿನ ಮೊದಲ ಭಾಷೆಯೇ ಕನ್ನಡ'' ಎಂದರು! ನಾನು ಅವಾಕ್ಕಾಗಿ ಗುರುಗಳ ಕಡೆ ನೋಡಿದೆ. ಅವರು ನಗುತ್ತ ''ಗಾಬರಿಯಾಗಬೇಡಿ. ಅದಕ್ಕೆ ಸಮರ್ಥನೆ ಕೊಡಿ ಅನ್ನಿ. ಅದನ್ನೂ ಕೊಡುತ್ತಾರೆ. ಆಗಲೇ ಆಕಾಶ ಮಿಂಚತೊಡಗಿದೆ!'' ಎಂದರು. ಬೇಂದ್ರೆ ''ಓಹೋ ಇಷ್ಟು ಸರಳ ಸತ್ಯಕ್ಕೆ ಸಮರ್ಥನೆ ಬೇರೆ ಬೇಕಾ? ಆಯಿತು. ಈಗ ನೋಡಿ. ಕನ್ನಡದ ಯಾವುದೇ ಮುಖ್ಯವಾದ ಪದ ತೆಗೆದುಕೊಳ್ಳಿ. ಅದು ಕಕಾರದಿಂದಲೇ ಆರಂಭವಾಗುತ್ತೆ. ಆರಂಭದ ಭಾಷೆ ಕನ್ನಡವೇ ಅನ್ನೋದಕ್ಕೆ ಅದಕ್ಕಿಂತ ಬೇರೆ ಆಧಾರ ಯಾಕೆ ಬೇಕು?'' ಅಂದುಬಿಟ್ಟರು! ಮೂರ್ತಿರಾಯರು ನಗುತ್ತ ''ಎಲ್ಲಿ ಒಂದಿಷ್ಟು ಉದಾಹರಣೆ ಕೊಡಿಯಪ್ಪ'' ಎಂದರು. ಬೇಂದ್ರೆ ಕೈಯಿಂದ ತಮ್ಮ ಮೈಯ ಒಂದೊಂದು ಅಂಗ ಮುಟ್ಟಿ ತೋರಿಸುತ್ತ ''ನೋಡಿ ಇದು ಕತ್ತು, ಹೌದೆ? ಇದು ಕಂಠ, ಇದು ಕಣ್ಣು, ಇದು ಕಿವಿ, ಇದು ಕೂದಲು, ಇಗೋ ಇದು ಕೈ, ಇದು ಕಾಲು, ಇದು ಕೆನ್ನೆ. ಸಾಕೇ?'' ಎಂದರು. ಮೂರ್ತಿರಾಯರು ಬೇಂದ್ರೆಯವರ ಉಪಾಯ ತಿಳಿದು ಅವರನ್ನು ಕೆಡವಲು ತಮ್ಮ ಸೊಂಟದ ಕಡೆ ಬೆರಳು ಮಾಡಿ ''ಇದು?'' ಅಂತ ಕೇಳಿದರು. ಬೇಂದ್ರೆ ಈಗ ಸಿಕ್ಕಿಬಿದ್ದರು

> ಅಭಿರುಚಿ, ಅಧ್ಯಯನ, ಬರೆಹ, ಜೀವನ, ಎಲ್ಲದರಲ್ಲೂ ಶಿಖರಪ್ರಾಯರಾಗಿ ಬಾಳಿಹೋದ ವಿದ್ವಾಂಸರು ಎಲ್ಲ ಕಾಲದಲ್ಲೂ ಕೆಲವರಾದರೂ ಇರುತ್ತಾರೆ. ಮಹಾ ಮೇಧಾವಿಯಾಗಿದ್ದರೂ ಹಣ, ಅಧಿಕಾರ, ಪ್ರಸಿದ್ಧಿ ಯಾವುದಕ್ಕೂ ಹಂಬಲಿಸದೆ ಬಂದದ್ದರಲ್ಲೇ ಬಾಳನ್ನು ಶುದ್ಧವಾಗಿ ರೂಢಿಸಿಕೊಳ್ಳುವ, ಸತ್ಯ ಪ್ರಾಮಾಣಿಕತೆಗಳನ್ನೇ ಬಾಳಿನ ಮಾನದಂಡವಾಗಿ ಮಾಡಿಕೊಂಡ ಅಂಥ ಜನ ಯಾವುದೇ ಸಮಾಜದ ಒಂದು ಭಾಗ್ಯ. ಪ್ರೊ|| ತೀ.ನಂ.ಶ್ರೀಕಂಠಯ್ಯ ಅಂಥ ಒಂದು ದೊಡ್ಡ ಜೀವ.

ಅಂತ ನಾವು ಅಂದುಕೊಳ್ಳುತ್ತಿರುವಂತೆಯೇ ಅವರು ತಮ್ಮ ಕೈಕೋಲಿನ ತುದಿಯಿಂದ ಮೂರ್ತಿರಾಯರ ಸೊಂಟ ಚುಚ್ಚುತ್ತ "ಅದು ಕಟ ತಾನೆ" ಅಂದರು! ಕೂಡಲೆ ಮೂರ್ತಿರಾಯರು ಬೇಂದ್ರೆಯವರ ಪಂಚೆ ಕಡೆ ಬೆರಳು ಮಾಡಿದರು. "ಅದು ಕಚ್ಚೆಪಂಚೆ" ಎಂಬ ಉತ್ತರ ಬಂತು! ಮೂರ್ತಿರಾಯರು ತಮ್ಮ ಲುಂಗಿ ಕಡೆ ತೋರಿಸುತ್ತ "ಇದಕ್ಕೇನು ಹೇಳುತ್ತೀರಪ್ಪಾ?" ಎಂದರೆ ಬೇಂದ್ರೆ ಎಷ್ಟೂ ತಡವರಿಸದೆ "ಕೊಳವಿಪಂಚೆ" ಎಂದುಬಿಟ್ಟರು! ಅಷ್ಟು ಹೊತ್ತಿಗೆ ಕಾಫಿ ಬಂತು. ಬೇಂದ್ರೆ ಅದನ್ನು ತೆಗೆದುಕೊಳ್ಳುತ್ತ "ಇಗೋ ಇದು ಕಪ್ಪು, ಇದು ಕಾಫಿ, ಇದರ ರುಚಿ ಕಹಿ" ಎಂದರು. ನಮಗೆಲ್ಲ ಹಿಡಿಸಲಾರದ ನಗು. ತೀನಂಶ್ರೀ ಮೂರ್ತಿರಾಯರನ್ನು ತಡೆಯುತ್ತ "ಯಾಕಪ್ಪ ಸುಮ್ಮನೆ ಆಯಾಸ ಮಾಡಿಕೊಳ್ಳುತ್ತೀರಿ? ಅವರ ಹತ್ತಿರ ವಾದಮಾಡಿ ಸರಸ್ವತಿ ಗೆದ್ದಾಳೆ?" ಎಂದರು. ಕಾಫಿ ಕುಡಿದ ಬೇಂದ್ರೆ ಕೋಲು ತಿರುವುತ್ತ ಯಾಕೋ ಜಗಲಿಗೆ ಹೋದರು. ತೀನಂಶ್ರೀ ನನ್ನ ಕಡೆ ತಿರುಗಿ "ನೋಡಿದಿರಾ ಬೇಂದ್ರೆಯನ್ನು? ಶಾಸ್ತ್ರದ ಭರ್ತ್ಸನೆ ಹೇಗಿದೆ? ಹೀಗೆ ವಿನೋದವಾಗಿ ಮಾತನಾಡುವಾಗಲೂ ಅವರು ಕವಿ ಎನ್ನುವುದು ಎಷ್ಟು ಚೆನ್ನಾಗಿ ವ್ಯಕ್ತವಾಗುತ್ತೆ! ಅವರು ಮಾತನ್ನು ಹೇಗೆ ಜಗಿಯುತ್ತಾರೆ, ಬಗೆಯುತ್ತಾರೆ, ತರ್ಕವನ್ನು ಹೇಗೆ ನೆಗೆಯುತ್ತಾರೆ – ಅದೂ ತರ್ಕದ ತೋರಿಕೆಯಲ್ಲೇ! ಈ ಬೇಂದ್ರೆ ನಮ್ಮ ಕಾಲದ ಒಂದು ಅದ್ಭುತ" ಎಂದರು.

ತೀನಂಶ್ರೀಯವರ ಬರವಣಿಗೆ ಪ್ರಮಾಣದಲ್ಲಿ ಮಿತವಾದದ್ದು. ಆದರೆ ದೊಡ್ಡ ಆಕಾಶದ ಪ್ರತಿಬಿಂಬ ಪುಟ್ಟಕೊಳದೆದೆಯಲ್ಲಿ ಪ್ರತಿಫಲಿಸುವಂತೆ ಅವರ ವಿದ್ವತ್ತು ಪ್ರತಿಭೆಗಳು ಅಷ್ಟರಲ್ಲೇ ಢಾಳವಾಗಿ ಕಾಣುತ್ತವೆ. ಅವರ ಬರಹಗಳಲ್ಲಿ ಮುಖ್ಯವಾದುದೆಂದರೆ ಭಾರತೀಯ ಕಾವ್ಯ ಮೀಮಾಂಸೆ, ಕಾವ್ಯಸಮೀಕ್ಷೆ, ಸಮಾಲೋಕನ, ಪಂಪ, ಒಲುಮೆ, ನಂಟರು, ರಾಕ್ಷಸನ ಮುದ್ರಿಕೆ ಮತ್ತು ಬಿಡಿಮುತ್ತು. ಗದಾಯುದ್ಧ ಮತ್ತು ನಂಬಿಯಣ್ಣನ ರಗಳೆ ಎಂಬ ಎರಡು ಪ್ರಾಚೀನ ಕಾವ್ಯಗಳನ್ನು ಅವರು ಅತ್ಯುತ್ಕೃಷ್ಟ ರೀತಿಯಲ್ಲಿ ಸಂಗ್ರಹಿಸಿ ಸಂಪಾದಿಸಿದ್ದಾರೆ. ಶಾಲಾ ಮಕ್ಕಳಿಗಾಗಿ ಅವರು ಬರೆದ ಕನ್ನಡ ಮಾಧ್ಯಮ ವ್ಯಾಕರಣ ಕೂಡ ಹಲವಾರು ಬಾರಿ ಮುದ್ರಣಗೊಂಡ, ಹೊಸಗನ್ನಡದ ಒಂದು ಸರಳ ಅಧಿಕೃತ ವ್ಯಾಕರಣ.

ಒಲುಮೆ ಕನ್ನಡದ ಮೊದಲ ಪ್ರೇಮ ಕವನಗಳ ಸಂಗ್ರಹ. ಅಷ್ಟಕ್ಕೇ ಅದಕ್ಕೆ ಒಂದು ಐತಿಹಾಸಿಕ ಮಹತ್ವವಿದೆ. ಅಮರುಶತಕ, ಗಾಥಾಸಪ್ತಶತಿಗಳಂಥ ಪ್ರಾಚೀನ ಭಾರತೀಯ ಶೃಂಗಾರ ಕೃತಿಗಳಿಂದ ಪ್ರೇರಣೆ ಪಡೆದು ಸೃಷ್ಟಿಯಾದ ಕೃತಿ ಅದು. ಈಗಲೂ ನಮ್ಮ ಮನಸ್ಸನ್ನು ಹಿಡಿದು ನಿಲ್ಲಿಸಬಲ್ಲ ಕೆಲವು ಉಜ್ವಲ ಶೃಂಗಾರ ಚಿತ್ರಗಳು ಅದರಲ್ಲಿವೆ. "ಒಲುಮೆಯದು ಶುಚಿಯಾದ ವಾಣಿ ಹಿತವಾದ ರೀತಿ" ಎಂದು ಪ್ರೇಮ ಕವನಗಳಿಗೆ ಹೆಸರಾದ ಕೆ. ಎಸ್. ನರಸಿಂಹಸ್ವಾಮಿಯವರೇ ಅದನ್ನು ಪ್ರಶಂಸಿಸಿದ್ದಾರೆ.

## ಗುಲ್ ಮೋಹರ್

ಧಗ-ಧಗ
ಬಿರು ಬಿಸಿಲೆಂಬ
ಕಟು ವಾಸ್ತವದಿ
ಕೆಂಪಾಗಿ ನಗುವ
ನೀನು ಸುಂದರ
ಸ್ವಪ್ನಗೊಂಚಲು !!



ಶೋಭಾ ಪ್ರಮೋದ್
ಮಹಾಲಕ್ಷ್ಮಿ ಏಜೆನ್ಸೀಸ್, ಮಾಣ್‌ಗಾಂವ್ ಅಂಚೆ
ಮಹಾರಾಷ್ಟ್ರ - ೪೦೨೧೦೪

ಅವರ 'ರಾಕ್ಷಸನ ಮುದ್ರಿಕೆ' ವಿಶಾಖದತ್ತ ಬರೆದ ಮುದ್ರಾರಾಕ್ಷಸ ಎಂಬ ಪ್ರಾಚೀನ ಸಂಸ್ಕೃತ ನಾಟಕದ ರೂಪಾಂತರ. ನಾಟಕದ ಆಶಯ ತುಂಬ ಚುರುಕಾಗಿ, ಮೊನೆಯಾಗಿ ಹೊಮ್ಮುವಂತೆ ಮಾಡಲು ತೀನಂ ಅಲ್ಲಲ್ಲಿ ಕೊಂಚ ಸ್ವಾತಂತ್ರ್ಯ ವಹಿಸಿದ್ದಾರೆ. 'ಬಿಡಿಮುತ್ತು' ಸಂಸ್ಕೃತದ ೨೧೫ ಮುಕ್ತಕಗಳ ನೇರ, ಅಪ್ಪಟ ಅನುವಾದ. ನಾಲ್ಕು ಅಥವಾ ಎಂಟು ಸಾಲುಗಳ ಒಂದೊಂದು ಮುಕ್ತಕವೂ ತನಗೆ ತಾನೆ ಒಂದು ಸ್ವತಂತ್ರ ಕವನದಂತಿದೆ. "ಎರಡಿಂಚಿನ ದಂತಖಂಡದ ಮೇಲೆ ಸೂಕ್ಷ್ಮಾಕಾರದಲ್ಲಿ ಸೊಗಸಾಗಿ ಚಿತ್ರಿಸಿದ ಒಂದು ವರ್ಣಚಿತ್ರದಂತಿದೆ." ಈ ಎರಡೂ ತೀನಂಶ್ರೀಯವರ ಭಾಷಾಂತರ ಶಕ್ತಿಗೆ ಪ್ರಜ್ವಲವಾದ ಸಾಕ್ಷಿಗಳು ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

'ನಂಟರು' ವಿಶಿಷ್ಟವಾದ ಪ್ರಬಂಧಗಳ ಸಂಕಲನ. ಲಲಿತಪ್ರಬಂಧ, ಗಂಭೀರ ಪ್ರಬಂಧ, ಪ್ರವಾಸಿಗನ ಪತ್ರ – ಇಂಥ ಬಗೆಬಗೆ ಬರೆಹ ಇಲ್ಲಿವೆ. ಬಹುಶ್ರುತನೊಬ್ಬನ ವಿದ್ವತ್ತು ಸೃಜನಶೀಲ ಪ್ರತಿಭೆ ಎರಡೂ ಇಲ್ಲಿ ಸ್ನೇಹದಿಂದ ಕೈಕುಲುಕಿ ದುಡಿದಿವೆ. 'ಕಾವ್ಯಸಮೀಕ್ಷೆ' ಎಂಬ ಗ್ರಂಥ ಕಾಳಿದಾಸ, ಜನ್ನ, ಕುಮಾರವ್ಯಾಸರಂಥ ದೊಡ್ಡ ಲೇಖಕರ ಬರೆಹಗಳನ್ನು ಕುರಿತ ರಸಾತ್ಮಕ ವಿಮರ್ಶೆಗಳ ಸಂಗ್ರಹ. 'ಸಮಾಲೋಕನ'ದಲ್ಲಿ ಇಂಥ ವಿಮರ್ಶೆಗಳ ಜೊತೆಗೆ ಛಂದಸ್ಸು, ಭಾಷಾಶಾಸ್ತ್ರಗಳಿಗೆ ಸಂಬಂಧಿಸುವ ತುಂಬ ಬೆಲೆಯುಳ್ಳ ಶಾಸ್ತ್ರ ಬರೆಹಗಳು ಇವೆ. ಪಂಪ ಎಂಬ ಚಿಕ್ಕ ಹೊತ್ತಗೆಯಂತೂ ಸಾಮಾನ್ಯರಿಗೆ ಬಲ್ಲಿದರಿಗೆ ಇಬ್ಬರಿಗೂ ಪ್ರಿಯವಾಗಬಲ್ಲ, ಪ್ರೌಢಕವಿಯೊಬ್ಬನ ಸಂಕ್ಷಿಪ್ತ ವಿಮರ್ಶನ ಚಿತ್ರ.

ಭಾರತೀಯ ಕಾವ್ಯಮೀಮಾಂಸೆ ತೀನಂಶ್ರೀಯವರ ಕೃತಿ ಸಮೂಹದಲ್ಲೇ ಅತ್ಯಂತ ಉನ್ನತವಾದದ್ದು. ಅವರ ವಿದ್ವತ್ ವ್ಯಕ್ತಿತ್ವದ ಮೇಲೆ ಸದಾಕಾಲ ಪ್ರಕಾಶ ಚೆಲ್ಲುತ್ತ ನಿಂತಿರುವ ನಂದಾದೀಪ. ಸಂಸ್ಕೃತ ಕಾವ್ಯಜಿಜ್ಞಾಸುಗಳು ಒಂದೂವರೆ ಸಹಸ್ರ ವರ್ಷಗಳಷ್ಟು ಹಿಂದಿನಿಂದ ನಡೆಸಿಕೊಂಡು ಬಂದ ಕಾವ್ಯ ಚರ್ಚೆಯ ಸಾರಭೂತವಾದ ಚರಿತ್ರೆಯನ್ನು ಭಾರತೀಯ ಕಾವ್ಯಮೀಮಾಂಸೆ ನೀಡುತ್ತದೆ. ಅಲಂಕಾರ, ಗುಣ, ರೀತಿ, ಔಚಿತ್ಯ, ಧ್ವನಿ, ರಸ – ಹೀಗೆ ಸಂಸ್ಕೃತ ಕಾವ್ಯಚರ್ಚೆ ಹಾದುಬಂದ ಬೇರೆ ಬೇರೆ ಪ್ರಸ್ಥಾನಗಳನ್ನು ಇದು ಸೊಗಸಾಗಿ ಸಂಗ್ರಹವಾಗಿ ಮಂಡಿಸುತ್ತದೆ. ಜೊತೆಗೆ ಕವಿ, ಸಹೃದಯ, ಪ್ರತಿಭೆ, ಕವಿಸೃಷ್ಟಿ, ಕಾವ್ಯಪ್ರಯೋಜನ, ಇಂಥ ವಿಷಯಗಳನ್ನು ಕುರಿತು ವಿಷಯ ಭರಿತವಾದ, ಹಾಗೆಯೇ ಹೃದ್ಯವಾದ ಚರ್ಚೆ ಇದೆ. ಕಡೆಯಲ್ಲಿ ಕನ್ನಡದಲ್ಲಿ ಹಿಂದಿನಿಂದ ಬೆಳೆದು ಬಂದ ಕಾವ್ಯ ಚರ್ಚೆಗಳ ಬಗ್ಗೆಯೂ ಒಂದು ಅಧ್ಯಾಯವಿದೆ. ಇದಕ್ಕೆ ಮುನ್ನುಡಿ ಬರೆದ ಕುವೆಂಪು ಕೃತಿಯ ಘನತೆಯನ್ನು ಎತ್ತಿ ಹಿಡಿಯುತ್ತ "ಇದು ಅಂತಿಂಥ ಗ್ರಂಥವಲ್ಲ, ಒಂದು ಆಚಾರ್ಯಕೃತಿ" ಎಂದು ಕರೆದರು. ಪ್ರೊ|| ಕೀರ್ತಿನಾಥ ಕುರ್ತಕೋಟಿಯವರು ಇದನ್ನು ತೀರ ಮಹತ್ವದ ಕೃತಿ ಎಂದು ಬಣ್ಣಿಸಿದ್ದಲ್ಲದೆ "ಇಷ್ಟು ಪ್ರಮಾಣಭೂತವಾದ ಮತ್ತು ಪರಿಪೂರ್ಣವಾದ ಗ್ರಂಥ ಇಂಗ್ಲಿಷ್‌ನಲ್ಲಿ ಕೂಡ ಇಲ್ಲ" ಎಂದು ಕೈವಾರಿಸಿದರು. ಈ ಕೃತಿ ಪ್ರಕಟವಾದದ್ದು ೧೯೫೨ರಲ್ಲಿಯಾದರೂ ಇದರ ಹಸ್ತಪ್ರತಿ ಸಿದ್ಧವಾದದ್ದು ೧೯೪೨ರಲ್ಲಿಯೇ. ಆಗ ತೀನಂಶ್ರೀಯವರ ವಯಸ್ಸು ಕೇವಲ ಮೂವತ್ತಾರು!

ಇದಲ್ಲದೆ ಕನ್ನಡ ಸಾಹಿತ್ಯ ಪರಿಷತ್ತು ಕೈಗೆತ್ತಿಕೊಂಡ ಕನ್ನಡ ನಿಘಂಟಿನ ಕೆಲಸಕ್ಕೆ ತೀನಂಶ್ರೀ ತಮ್ಮ ಶಕ್ತಿಯನ್ನೆಲ್ಲ ಧಾರೆಯೆರೆದರು. ಬೊಬ್ಬೆ ಹಾಕದೆ, ಅಬ್ಬರ ಮಾಡದೆ, ಯಾವ ಸದ್ದೂ ಇಲ್ಲದೆ ಅವರು ಕನ್ನಡಕ್ಕೆ ದುಡಿದರು. ತಮ್ಮ ದುಡಿಮೆ ತಮ್ಮ ಹೆಸರಿಗೇ ಬದ್ಧವಾಗಬೇಕು, ಅದು ಜನಕ್ಕೆಲ್ಲ ತಿಳಿಯಬೇಕು ಎಂಬ ತಪ್ಪಲ್ಲದ ಸ್ವಾರ್ಥ ಸಹ ಅವರಿಗಿರಲಿಲ್ಲ.

ತೀನಂಶ್ರೀ ಅಷ್ಟು ದೊಡ್ಡ ವಿದ್ವಾಂಸರಾಗಿಯೂ ಎಲ್ಲ ಬಗೆಯ ಪ್ರಶಸ್ತಿ ಮನ್ನಣೆಗಳಿಂದ ವಂಚಿತರಾದವರು. ಅಕಾಡೆಮಿ ಪ್ರಶಸ್ತಿ, ಸಮ್ಮೇಳನಾಧ್ಯಕ್ಷತೆ, ಗೌರವ ಡಾಕ್ಟರೇಟ್ ಇಂಥ ಯಾವುವೂ ಅವರಿಗೆ ಸಂದಾಯವಾಗಲಿಲ್ಲ. ಆದರೆ ಅವರು ಎಂದೂ ಅದರ ಬಗ್ಗೆ ಯೋಚಿಸಿದವರಲ್ಲ. ಅವರ ಸ್ನೇಹಿತರು, ಶಿಷ್ಯರು, ಇತರ ಸಾಹಿತಿಗಳು ಸೇರಿ ಸಿದ್ಧಪಡಿಸಿದ 'ಶ್ರೀಕಂಠತೀರ್ಥ' ಎಂಬ ಗೌರವಗ್ರಂಥ ಕೂಡ ಅವರ ಕಾಲಾನಂತರ ೧೯೬೭ರಲ್ಲಿ ಬಂದದ್ದು. ಮುಂದೆ ಗೋಕಾಕರ ನೇತೃತ್ವದ ಪ್ರಶಸ್ತಿ ಸಮಿತಿ ಅವರ ಗ್ರಂಥಕ್ಕೆ ಮರಣೋತ್ತರ ಪಂಪ ಪ್ರಶಸ್ತಿ ನೀಡಿ ಆ ಕೊರತೆಯನ್ನೆಲ್ಲ ಪರಿಹರಿಸಿತು.

ತೀನಂಶ್ರೀಯವರ ಬಗ್ಗೆ ಮಾತನಾಡುತ್ತ ಒಮ್ಮೆ ಮಾಸ್ತಿ ಹೇಳಿದರು "ಗುಣ, ವಿದ್ಯೆ, ಬುದ್ಧಿ, ತೇಜಸ್ಸು ಇರುವ ಸುಸಂಸ್ಕೃತ ಕನ್ನಡಿಗ ಹೇಗಿರುತ್ತಾನೆ ಎಂದು ಒಮ್ಮೊಮ್ಮೆ ನಾನು ಕಲ್ಪಿಸಿಕೊಳ್ಳತೊಡಗುತ್ತೇನೆ. ಆಗ ಥಟ್ಟನೆ ನನ್ನ ಮನಸ್ಸಿನೆದುರು ಬಂದು ನಿಲ್ಲುವ ವ್ಯಕ್ತಿ ತೀ.ನಂ.ಶ್ರೀಕಂಠಯ್ಯ".

ಡಾ|| ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ
೨೨೬೩, ೨೭ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಸಂಪ್ರದಾಯಗಳು ಸ್ವಾರ್ಥಕ್ಕೋ ಪರಾರ್ಥಕ್ಕೋ ?

ಬಿ. ಎಸ್. ಶೈಲಜಾ

ಇಂಡೋನೇಷಿಯಾದ ಬಾಲಿ ದ್ವೀಪಕ್ಕೆ ಹೋಗಿದ್ದಾಗ ಹೀಗಾಯಿತು. ಅದು ಹಿಂದೂಗಳ ದ್ವೀಪ. ಕಾಲಿಟ್ಟೊಡನೆ ನನ್ನನ್ನು ಭಾರತೀಯಳೆಂದು ಗುರುತಿಸಿದ ಸ್ಥಳೀಯರು, "You Hindu, I also Hindu" ಎಂದು ಹರಕುಮುರುಕು ಇಂಗ್ಲಿಷ್‌ನಲ್ಲಿ ಹೇಳಿಕೊಂಡು ಎರಡೂ ಕೈಜೋಡಿಸಿ ನಮಸ್ಕಾರ ಮಾಡುತ್ತಿದ್ದರು. ನಾನು ಹೋಗಿದ್ದುದು ಅಂತರರಾಷ್ಟ್ರೀಯ ಗೋಷ್ಠಿಯಲ್ಲಿ ಭಾಗವಹಿಸುವುದಕ್ಕಾಗಿ. ನನಗೆ ಮಾತ್ರ ದೊರಕುತ್ತಿದ್ದ ಈ ವಿಶೇಷ ಗೌರವವನ್ನು ಕಂಡು ನನ್ನೊಡನೆ ಇದ್ದ ಇತರ ವಿದೇಶೀಯರು ವಿಸ್ಮಿತರಾಗುತ್ತಿದ್ದರು. ಗೋಷ್ಠಿಯ ವ್ಯವಸ್ಥಾಪಕರು, ಹೋಟೆಲ್‌ನ ಸಿಬ್ಬಂದಿ, ತಿರುಗಾಡಲು ಕರೆದೊಯ್ಯುತ್ತಿದ್ದ ಬಸ್ ಡ್ರೈವರ್, ಗೈಡ್, ಬೀಚ್‌ನ ಅಸಂಖ್ಯಾತ ಅಂಗಡಿಗಳ ಮಾಲೀಕರು – ಹೀಗೆ ಎಲ್ಲರೂ ನನ್ನನ್ನು ಕಂಡೊಡನೆ ಎರಡೂ ಕೈ ಜೋಡಿಸಿ ನಮಸ್ಕರಿಸುತ್ತಿದ್ದರು. ನನ್ನ ಅಭಿಮಾನಕ್ಕೆ ಎಣೆಯುಂಟೆ ?

ಗೋಷ್ಠಿಯ ಸಾಂಸ್ಕೃತಿಕ ಕಾರ್ಯಕ್ರಮಗಳ ಅಂಗವಾಗಿ ಒಂದು ಸಂಜೆ ನಮ್ಮನ್ನು ಬಸ್‌ನಲ್ಲಿ ದೂರದ ಬೆಟ್ಟವೊಂದರ ಮೇಲಿದ್ದ ಅರಮನೆಗೆ ಕರೆದೊಯ್ದರು. ಗೋಷ್ಠಿಯ ಮುಖ್ಯಸ್ಥರಿಗೆ ಬಸ್‌ನಿಂದ ಇಳಿಯುತ್ತಿದ್ದಂತೆಯೇ ಹೂವಿನ ಹಾರದ ಸ್ವಾಗತ. ಅದಾದ ನಂತರ ಸುಮಾರು ೫೦೦ ಮೀಟರ್ ಉದ್ದದ ದಾರಿಯುದ್ದಕ್ಕೂ ನಮ್ಮೆಲ್ಲರ ಮೆರವಣಿಗೆ. ಸಾಂಪ್ರದಾಯಿಕ ಉಡುಪು ಧರಿಸಿದ್ದ ಚೆಲುವೆಯರು ಕೈಯಲ್ಲಿ ದೀಪ ಹಿಡಿದು ನರ್ತಿಸುತ್ತಾ ಹಿಂದುಹಿಂದಕ್ಕೆ ಹೆಜ್ಜೆ ಹಾಕುತ್ತಾ ನಮ್ಮನ್ನು ಅರಮನೆಗೆ ಕರೆದೊಯ್ದರು. ಆ ಅರಮನೆ ಕೇವಲ ವಾಯುವಿಹಾರಕ್ಕಾಗಿ ಕಟ್ಟಿದ ಪ್ರಾಕಾರದಂತಿತ್ತು. ಅಲ್ಲಿ ನಮಗೆ ಭೋಜನ ವ್ಯವಸ್ಥೆ. ಬೇಲೂರು ದೇವಸ್ಥಾನದ ಪ್ರಾಕಾರದ ಮಧ್ಯದಲ್ಲಿ ದೇವಾಲಯದ ಬದಲು ತೋಟವೊಂದನ್ನು ಕಲ್ಪಿಸಿಕೊಳ್ಳಿ. ಇದು ಇದ್ದುದು ಹಾಗೇ. ಕಾರಂಜಿಗಳು, ಬಣ್ಣದ ದೀಪಗಳು, ಅಲ್ಲದೆ ಇಡೀ ದ್ವೀಪದ ವಿಹಂಗಮ ನೋಟವೂ ದೊರಕುತ್ತಿತ್ತು. ಇಷ್ಟರೊಳಗೆ ನನ್ನ ವೆಜಿಟೇರಿಯನ್ ಬಂಧುಗಳು (ಒಬ್ಬರು ಕೆನಡಾದವರು, ಇನ್ನೊಬ್ಬರು ಅರ್ಜೆಂಟೀನಾದವರು) ಒಂದು ಟೇಬಲ್ ಹಿಡಿದು ಕುಳಿತರು. ಇದ್ದಕ್ಕಿದ್ದಂತೆ ತಮಟೆಗಳ ದೊಡ್ಡ ಶಬ್ದ ಕೇಳಿ ಬೆಚ್ಚಿದೆವು. ಎಲ್ಲರೂ ಎದ್ದುನಿಂತರು. ''ಇಂದಿನ ವಿಶೇಷ ಅಡುಗೆ ಬರುತ್ತಿದೆ ಎದುರ್ಗೊಳ್ಳಿ'' ಎಂದು ಮೈಕಾಸುರ ಅರಚಿದ. ತಮಟೆ, ಡೋಲುಗಳು ಹತ್ತಿರವಾದವು. ಅವರ ಹಿಂದೆ ದೀಪ ಹಿಡಿದ ಚೆಲುವೆಯರು. ಅದರ ಹಿಂದೆ... ಎರಡು ಕೋಲುಗಳಿಗೆ ಕಟ್ಟಿ ನಾಲ್ಕು ಜನ ಭುಜದಮೇಲೆ ಹೊತ್ತು ತರುತ್ತಿದ್ದುದು ...ಏನದು ? ...ಮೇಕೆಯ ಮಾಂಸ.

ಹೀಗೆ ಬಾಜಾಭಜಂತ್ರಿಗಳೊಡನೆ ಆಗಮಿಸಿದ ಮೇಕೆ(ಯ ಹೆಣ) ತೋಟದ ಮಧ್ಯ ಭಾಗದಲ್ಲಿ ಅಗ್ನಿಕುಂಡದ ಮೇಲೆ ಸಿಂಗಾರವಾಗಿ ನಿಂತಿತು. ಗದ್ದಲ ಅಡಗಿತು. ಗೋಷ್ಠಿಯ ವ್ಯವಸ್ಥಾಪಕರು ''ಇದು ಅತಿ ಪ್ರಾಚೀನ ಹಿಂದೂ ಸಂಪ್ರದಾಯ; ರಾಜ ಮಹಾರಾಜರು ತಮ್ಮ ಅತಿಥಿಗಳಿಗೆ ಉಣಬಡಿಸುತ್ತಿದ್ದ ರೀತಿ'' ಎಂದು ವಿವರಿಸಿದರು. ಇದಾದ ಮೇಲೆ ಇನ್ನೊಂದೆರಡು ಭಾಷಣಗಳು. ಬಿಸಿ ಗ್ರಿಲ್ ಮೇಲೆ ಮಾಂಸ ಇಷ್ಟು ಹೊತ್ತೂ ಬೇಯುತ್ತಿತ್ತು. ಆಮೇಲೆ... ಎಲ್ಲರೂ ಚಾಕು ಹಿಡಿದು... ''ಅಟ್ಯಾಕ್ !'' ಇಷ್ಟೇ.

ಈ ಬಗೆಯ ಉಪಚಾರವನ್ನು ನಾನು ಕಂಡಿರಲಿಲ್ಲ, ಕೇಳಿರಲಿಲ್ಲ. ನನ್ನ ವೆಜಿಟೇರಿಯನ್ ಬಂಧುಗಳು ಈ ಬಗ್ಗೆ ಪ್ರಶ್ನಿಸಿದರು. ಇದೆಂಥ ಸಂಪ್ರದಾಯ ? ಮುಂದೆ ಅಲ್ಲಿ ಕಳೆದ ಮೂರು ಗಂಟೆಗಳು ಈ ಸಂಪ್ರದಾಯದ ಮೂಲವೇ ನನ್ನ ತಲೆಯನ್ನು ಕೊರೆಯುತ್ತಿತ್ತು. ತಿನ್ನಲು ನಮಗೆ ಸಿಕ್ಕಿದ್ದು ಒಣದ್ರಾಕ್ಷಿ, ಗೋಡಂಬಿ, ಹಣ್ಣುಗಳು ಇಷ್ಟೇ. ಆದ್ದರಿಂದ ಬಾಯಿಗಳಿಗೆ ಮಾತನಾಡಲು ಸಾಕಷ್ಟು ಬಿಡುವಿತ್ತು.

ಈ ವಿಚಿತ್ರ ಸಂಪ್ರದಾಯಕ್ಕೆ 'ಹಿಂದುತ್ವ' ಅಂಟಿಕೊಂಡಿದ್ದು ನನಗೆ ಅರ್ಥವಾಗದಾಯಿತು. ಅಲ್ಲಿಯ ಚರಿತ್ರೆ ತಿಳಿಸುವಂತೆ ಹಿಂದೂಗಳು ಅಲ್ಲಿ ಕಾಲಿಟ್ಟಿದ್ದು ಸುಮಾರು ೨೦೦೦ ವರ್ಷಗಳಿಗೂ ಹಿಂದೆಯೇ ಇರಬಹುದು. ಹಾಗಾದರೆ ಈ ಪದ್ಧತಿ ಅಷ್ಟು ಹಳೆಯದಿರಬಹುದೇ ? ಈ ಪ್ರಶ್ನೆ ನನ್ನನ್ನು ಕಾಡುತ್ತಲೇ ಇತ್ತು. ಬೆಂಗಳೂರಿಗೆ ಹಿಂದಿರುಗಿದ ಮೇಲೆ ಅನೇಕ ಪುಸ್ತಕಗಳನ್ನು ತಿರುವಿಹಾಕಿದೆ. ಹಿಂದೂಗಳು ಸಸ್ಯಾಹಾರಿಗಳಾದದ್ದು ಯಾವಾಗ ಎಂದು ನನ್ನ ಪ್ರಶ್ನೆ. ಅಥವಾ ಹಿಂದೂಗಳು ಮಾಂಸಾಹಾರವನ್ನು ತ್ಯಜಿಸಿದ್ದು ಯಾವಾಗ ಎಂದು ಪ್ರಶ್ನೆಯನ್ನು ಬದಲಿಸಿದರೆ ಒಳ್ಳೆಯದು. ಈ ಬಗೆಗೆ ಅನೇಕ ಚರ್ಚೆಗಳು, ಲೇಖನಗಳನ್ನು ಓದಿದೆ. ಜೈನರ ಅಹಿಂಸೆಯ ಅಂಶವನ್ನು ಒಳಗೂಡಿಸಿಕೊಳ್ಳುವ ಹಂತವಾಗಿ ಸ್ವಇಚ್ಛೆಯಿಂದ ಹಿಂದೂಗಳು ಮಾಂಸಾಹಾರವನ್ನು ತ್ಯಜಿಸಿರಬೇಕು ಎಂಬ ಅಂಶ ತಿಳಿಯಿತು. ಆದರೆ ಇಂದಿಗೂ ಹಿಂದೂಗಳೆಲ್ಲರೂ ಮಾಂಸಾಹಾರವನ್ನು ವರ್ಜಿಸಿಲ್ಲವಲ್ಲಾ!?

ಈ ಪ್ರಶ್ನೆ ಏನೇ ಇರಲಿ. ಪ್ರಾಣಿಯನ್ನು ತಿನ್ನುವುದಕ್ಕಾಗಿ ಕೊಲ್ಲುವ ಘಟನೆಯನ್ನು ಹೀಗೆ ಸಂಪ್ರದಾಯದ ಹೆಸರಿನಲ್ಲಿ ವೈಭವೀಕರಿಸಬೇಕೇಕೆ ? ಈ ಪ್ರಶ್ನೆ ಇಂದಿಗೂ ಅನ್ವಯ. ಕಾಳಿ ಮಾತೆಗಾಗಿ ಅಥವಾ ಮಾರಮ್ಮನಿಗಾಗಿ ಬಲಿಯಾಗುವ ಪ್ರಾಣಿಗಳು ಸಹಸ್ರಗಟ್ಟಲೆ ಇವೆ. ಹಾಗೆ ಬಲಿಕೊಡುವುದನ್ನು ದೇವರ ಹೆಸರಿನಲ್ಲಿ ಸಂಪ್ರದಾಯವನ್ನಾಗಿ ಮಾಡಬೇಕೇಕೆ ? ಇಂದಿಗೆ ಇನ್ನೂರು ವರ್ಷಗಳ ಹಿಂದೆ ಇಂತಹ ಸಂಪ್ರದಾಯಗಳು ಇನ್ನೂ ಹೆಚ್ಚಾಗಿಯೇ ಇದ್ದಿರಬೇಕು. ಈಗ ನಾಗರಿಕತೆಯ ಆವರಣದಲ್ಲಿ ಬಲಿಗಳು ಕದ್ದುಮುಚ್ಚಿ ಮಾತ್ರ ನಡೆಯುತ್ತವೆ. ಪ್ರಾಣಿದಯಾ ಸಂಸ್ಥೆಗಳು, ಅಸಂಖ್ಯಾತ ಎನ್.ಜಿ.ಓ.ಗಳು ಈ ದಿಸೆಯಲ್ಲಿ ಶ್ರಮವಹಿಸಿ ಕೆಲಸಮಾಡುತ್ತಿವೆ. ಆದರೂ ನೇಪಾಳದ ರಾಜ, ರಾಣಿ ಕಲ್ಕತ್ತಾದಲ್ಲಿ ಕಾಳಿಮಾತೆಗೆ ಮೇಕೆಯನ್ನು ಬಲಿಕೊಟ್ಟಿದ್ದು ಸುಳ್ಳಲ್ಲ. ಸಂಪ್ರದಾಯ ಎಂಬ ಹೆಸರಿನಲ್ಲಿ ನಡೆಯುವ ಈ ಪ್ರಾಣಿವಧೆಗೆ ಅಂತ್ಯ ಎಂದು ?

ಅದೃಷ್ಟವಶಾತ್ ನರಬಲಿಯನ್ನು ತಡೆಹಿಡಿಯಲಾಗಿದೆಯಾದರೂ ಕದ್ದುಮುಚ್ಚಿ ನಡೆಯುವ ನರಬಲಿಗಳು – ಮುಖ್ಯವಾಗಿ ಮಕ್ಕಳದ್ದು ಮತ್ತು ಕನ್ಯೆಯರದ್ದು – ಆಗಾಗ್ಗೆ ಪತ್ರಿಕೆಗಳಲ್ಲಿ ವರದಿಯಾಗುತ್ತಿವೆ. ಅನೇಕ ವಿದ್ಯಾವಂತರೂ ಈ ಬಗೆಯ ನಂಬಿಕೆಗಳನ್ನು ಪೋಷಿಸುತ್ತಾ ಬಂದಿರುವುದು ಅವಮಾನಕರ. ಸಮಾಜದ ಪ್ರಗತಿಗೆ ಮಾರಕವಾದ ಈ ಪ್ರವೃತ್ತಿಗೆ ಅಂತ್ಯ ಕಾಣಿಸುವುದು ಹೇಗೆ ? ಈಚೆಗೊಬ್ಬರು ಹೀಗೆ ಜೀವಕ್ಕೆ ಮಾರಕವಾದ ಸಂಪ್ರದಾಯಗಳನ್ನು ನಿರ್ಮೂಲನಗೊಳಿಸಬೇಕೆಂದು ಸುಪ್ರೀಂ ಕೋರ್ಟ್‌ನಲ್ಲಿ ದಾವಾ ಹೂಡಿರುವುದು ಒಂದು ದಿಟ್ಟ ಹೆಜ್ಜೆಯಾಗಿದೆ. ಬುದ್ಧಿಮಾಂದ್ಯ ಮಕ್ಕಳನ್ನು ನೆಲದೊಳಗೆ ಐದಾರು ಗಂಟೆಗಳ ಕಾಲ ಹೂತಿಡುವುದರಿಂದ ಗುಣವಾಗುತ್ತದೆ ಎಂಬ ನಂಬಿಕೆಯ ಮೂಲದ ಸಂಪ್ರದಾಯದ ಕುರಿತೂ ಅವರು ದಾವಾ ಹೂಡಿದ್ದಾರೆ.

ನೇಪಾಳದಲ್ಲಿ ಚಿಕ್ಕ ಹೆಣ್ಣುಮಗಳನ್ನು 'ಕುಮಾರಿ' ಎಂದು ಪೂಜಿಸುವ ಸಂಪ್ರದಾಯವಿದೆ. 'ದೇವಿ' ಎಂದು ಪೂಜೆಗೊಳಗಾಗುವ ಈ ಹೆಣ್ಣುಮಕ್ಕಳ ಭವಿಷ್ಯದ ಕುರಿತು ಯಾರೂ ಚಿಂತಿಸಿದಂತಿಲ್ಲ. ಈ ಬಗ್ಗೆ ಪ್ರಕಟವಾದ ಕೆಲವು ವರದಿಗಳು ಸತ್ಯವನ್ನು ಬಹಿರಂಗಪಡಿಸಿವೆ. 'ದೇವಿ' ಎನ್ನಿಸಿಕೊಂಡ ಈ ಹುಡುಗಿಯನ್ನು ಮದುವೆಯಾಗಲು ಯಾವ ತರುಣನೂ ಮುಂದೆ ಬರುವುದಿಲ್ಲ. ಆದ್ದರಿಂದ ದೇವಿಯ ಪಟ್ಟದಿಂದ ನಿವೃತ್ತಿಯಾದೊಡನೆ ಆಕೆ ಆ ಸಮಾಜಕ್ಕೆ ಬೇಡದ ವಸ್ತುವಾಗುತ್ತಾಳೆ. ಮುಂಬಯಿಯ ಕೆಂಪು ದೀಪಗಳೇ ಅವಳಿಗೆ ದಿಕ್ಕು ತೋರಿಸುತ್ತವೆ.

ನೇಪಾಳದ ದೊರೆ ಕೊಲೆಗೀಡಾದಾಗ 'ದುರ್ದಾನ' ತೆಗೆದುಕೊಂಡ ವೃದ್ಧನೋರ್ವನ ಬಗ್ಗೆ ವರದಿ ಬಂದಿತ್ತು. ದೊರೆಯ ಭೂತವನ್ನು ಆತನ ಮೇಲೆ ಆವಾಹನೆಮಾಡಿ, ಆತನನ್ನು ಉಚ್ಚಾಟನೆಗೊಳಿಸಲಾಗಿತ್ತು. ಈ ಬಗೆಯ ಸಂಪ್ರದಾಯಗಳು ಭಾರತದಲ್ಲಿ ಕಡಿಮೆಯಾಗಿದ್ದರೂ, ಹಿಂದೆ ಇದ್ದವು ಎಂಬ ಅಂಶವನ್ನು ಇದು ಸಾರಿ ಹೇಳುತ್ತದೆ.

ಆದರೆ ಈ ಕ್ರೂರಪದ್ಧತಿ ಹಿಂದೂ ಸಮಾಜಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಬ್ಯಾಬಿಲೋನಿಯದಲ್ಲಿ ಕ್ರಿ.ಪೂ. ಏಳನೆಯ ಶತಮಾನದಲ್ಲಿ ನೂರು ನೂರು ದಿನಗಳು ಮಾತ್ರ ಆಳ್ವಿಕೆ ನಡೆಸಿದ ಎಂಟು ರಾಜರ ಬಗ್ಗೆ ದಾಖಲೆ ಇದೆ. ಚಂದ್ರಗ್ರಹಣವಾದಾಗ ಸಿಂಹಾಸನದ ಮೇಲೆ ಕುಳಿತವನಿಗೆ ಜೀವಕ್ಕೆ ಅಪಾಯ ಎಂದು ನಂಬಿದ ರಾಜವರ್ಗ ಕಂಡುಕೊಂಡ ಉಪಾಯ ಈ ಸಂಪ್ರದಾಯ. ಗ್ರಹಣಕ್ಕೆ ನೂರುದಿನಗಳ ಮುನ್ನ ರಾಜನನ್ನು ನಿವೃತ್ತಿಗೊಳಿಸಿ ಹೊಸರಾಜನನ್ನು ಪ್ರತಿಷ್ಠಾಪಿಸುವುದು. ಆತ ಯಾರೇ ಆಗಿರಬಹುದು. ಶ್ರೀಸಾಮಾನ್ಯನಾದರೆ ಅವನ ಕುಟುಂಬಕ್ಕೆ ಧನಸಹಾಯದ ಆಮಿಷವೂ ಇದ್ದಿರಬಹುದು. ಆತ ರಾಜಸಭೆಯಲ್ಲಿ ಬಾಯ್ಬಿಡುವಂತಿಲ್ಲ, ಆಡಳಿತ ನಡೆಸುವಂತಿಲ್ಲ. ಬೊಂಬೆಯಂತೆ ರಾಜನ ದಿರಿಸು ತೊಟ್ಟು ಸಿಂಹಾಸನದ ಮೇಲೆ ಕುಳಿತುಕೊಳ್ಳುವುದು ಮಾತ್ರ ಆತನ ಕರ್ತವ್ಯ. ಗ್ರಹಣದ ಕಾಲದಲ್ಲಿ ರಾಜನಿಗೆ ಅಪಾಯ ಉಂಟುಮಾಡುವ 'ಶಕ್ತಿ'ಗೆ ಈತನೇ ರಾಜ ಎಂದು ಮೋಸಮಾಡಿದ ಮೇಲೆ ಆತನ ಅವಶ್ಯಕತೆ ಇಲ್ಲ. ಮೊದಲಿನ ರಾಜ ಪುನಃ ಗದ್ದುಗೆ ಏರಬೇಕಲ್ಲಾ! ಇವನನ್ನು ಇಳಿಸುವುದು ಹೇಗೆ ? ಈ 'ಟೆಂಪೊರರಿ ರಾಜ'ರು ನೇಪಾಳದ ಕುಮಾರಿಯರಷ್ಟು ಅದೃಷ್ಟಶಾಲಿಗಳಾಗಿರಲಿಲ್ಲ. ಗದ್ದುಗೆಯಿಂದ ಸೀದಾ ಸ್ಮಶಾನಕ್ಕೆ ಅವರ ಯಾತ್ರೆ ನಡೆಯುತ್ತಿತ್ತು. ರಾಜ, ಮಂತ್ರಿಗಳಿಗೆ ಇದನ್ನು ಗುಟ್ಟಾಗಿ ನಡೆಸುವುದು ಹೇಗೆ ಎಂದು ಹೇಳಿಕೊಡಬೇಕಾಗಿರಲಿಲ್ಲ.

ನೇಪಾಳದಂತಹ ದೇಶಗಳಲ್ಲಿ ರಾಜರು ಬ್ಯಾಬಿಲೋನಿಯದ ಈ ಸಂಪ್ರದಾಯವನ್ನು ಪುನಃ ಜಾರಿಗೆ ತಂದರೂ ತರಬಹುದು. ಜೀವಕ್ಕೆ ಬೆಲೆಯಿಲ್ಲದಾಗ ಏನು ಬೇಕಾದರೂ ಸಾಧ್ಯ. ಅಲ್ಲವೇ ?

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಮೂಢನಂಬಿಕೆಗಳು V/S ವೈಜ್ಞಾನಿಕ ಮನೋಭಾವ

ಪ್ರೊ|| ಬಿ. ವಿ. ವೀರಭದ್ರಪ್ಪ

**ಆ**ಧುನಿಕ ಮಾನವನು ಬಾಹ್ಯನೋಟಕ್ಕೆ ಸುಖ ಸಂಪತ್ತುಗಳಿಂದ ಅದೆಷ್ಟೇ ತುಂಬಿ ತುಳುಕುತ್ತಿರುವಂತೆ ಕಾಣುತ್ತಿದ್ದರೂ ಆಂತರಿಕವಾಗಿ ಭಯ, ಕಾತರ ಮತ್ತು ಆತಂಕಗಳಿಂದ ಕೋಲಾಹಲಕ್ಕೀಡಾಗಿರುವುದನ್ನು ನಾವು ನೋಡಬಹುದು. ಆ ಒತ್ತಡಗಳ ಹಿನ್ನೆಲೆಯಲ್ಲಿ ಅವನ ಸಂಕಟವನ್ನು ನಿವಾರಿಸಿ ಅವನ ಅಂತರಾಳದ ಆಸೆ ಆಕಾಂಕ್ಷೆಗಳು ನೆರವೇರಬೇಕಾದರೆ ಈ ಮಾರ್ಗವನ್ನನು ಸರಿಸಬೇಕು ಎಂದು ಭರವಸೆಯನ್ನು ನೀಡುವ ಒಂದು ವ್ಯಾಪಾರಿ ಮಳಿಗೆ ಅವನಿಗೆ ಬೇಕೆನಿಸುತ್ತದೆ. ಆ ಮಳಿಗೆಯೇ ಮೂಢನಂಬಿಕೆಗಳ ಉಗ್ರಾಣ ಅಥವಾ ಅಂಧಶ್ರದ್ಧೆಗಳ ಕೇಂದ್ರ. ಸಮಾಜದಲ್ಲಿ ತಾಂಡವ ವಾಡುತ್ತಿರುವ ಎಲ್ಲ ಮೂಢನಂಬಿಕೆಗಳಿಗೆ ಆಶ್ರಯ ಧಾಮಗಳು ಧಾರ್ಮಿಕ ಸಂಸ್ಥೆಗಳೇ ಆಗಿವೆ. ಆ ಸಂಸ್ಥೆಗಳು ತಮ್ಮ ಕಚೇರಿಗಳ ಮುಖ್ಯದ್ವಾರಗಳಲ್ಲಿ ಧರ್ಮದ ವ್ಯಾಪಾರವನ್ನು ಮಾಡುತ್ತಿದ್ದರೆ ಹಿತ್ತಲ ಬಾಗಿಲುಗಳಲ್ಲಿ ಮೂಢನಂಬಿಕೆಗಳನ್ನು ಬಿಕರಿ ಮಾಡುತ್ತಿರುತ್ತವೆ. ಧರ್ಮಕ್ಕೆ ಅಗೋಚರ ಪಾರಲೌಕಿಕ ಲೇಪನವನ್ನು ಮಾಡಿದ್ದರೆ ಮೂಢನಂಬಿಕೆಗಳಿಗೆ ಲೌಕಿಕ ಫಲಾಪೇಕ್ಷೆಗಳನ್ನು ಈಡೇರಿಸುವ ಗ್ಯಾರೆಂಟಿ ಕಾರ್ಡುಗಳನ್ನು ಅಂಟಿಸ ಲಾಗಿರುತ್ತದೆ. ವರ್ತಮಾನದಲ್ಲಿ ಜೀವನೋತ್ಸಾಹದಿಂದ ಬದುಕುವ ಕ್ರಿಯಾಶೀಲ ವಿಧಾನವನ್ನು ಅನುಸರಿಸದೆ ಭವಿಷ್ಯದ ಗಗನ ಗೋಪುರಗಳಲ್ಲಿ ವಿಹರಿಸಲು ಹಂಬಲಿಸುವ ಮೂಢಮತಿಗಳು ಅಂಧ ವಿಶ್ವಾಸವನ್ನು ಬಿಕರಿ ಮಾಡುವ ಹಿತ್ತಲ ಮಳಿಗೆಗಳಿಗೆ, ಈ ವಿಜ್ಞಾನ ಯುಗ ದಲ್ಲೂ ಸಾಲುಗಟ್ಟಿ ನಡೆಯುತ್ತಿರುವುದು ಒಂದು ವೈಚಿತ್ರ್ಯ.

## ಜನನ ದಿನಾಂಕ

ಒಮ್ಮೆ ನಾನು ಬೆಂಗಳೂರಿನಲ್ಲಿದ್ದಾಗ ನನ್ನ ಸ್ನೇಹಿತರೊಬ್ಬರು ಅವರು ಕೆಲಸ ಮಾಡುತ್ತಿದ್ದ ಇಂಜಿನಿಯರಿಂಗ್ ಕಾಲೇಜಿಗೆ ನನ್ನನ್ನು ಕರೆದುಕೊಂಡುಹೋಗಿದ್ದರು. ಅವರ ಕಂಪ್ಯೂಟರ್ ವಿಭಾಗವನ್ನು ನನಗೆ ತೋರಿಸುತ್ತಾ 'ಒಂದು ನಿಮಿಷ, ನಿಮ್ಮ ಜನನ ದಿನಾಂಕ ತಿಳಿಸುವಿರಾ ?' ಎಂದರು. ನಾನು ಥಟ್ ಅಂತ ೭.೧೦.೧೯೫೫ ಎಂದೆ. ಅದು ನನ್ನ ಕಾಲೇಜು ದಾಖಲೆಗಳಲ್ಲಿ ಇದ್ದ ಜನನ ದಿನಾಂಕ. ಅವರು ಕಂಪ್ಯೂಟರ್ ಮುಂದೆ ಕುಳಿತುಕೊಂಡು ಟಕ್ ಟಕ್ ಎಂದು ಗುಂಡಿಗಳನ್ನೊತ್ತಿ ಒಂದು ಮುದ್ರಿತ ಹಾಳೆಯನ್ನು ನನ್ನ ಮುಂದೆ ಹಿಡಿದು 'ನೋಡಿ, ನಿಮ್ಮ ಜಾತಕ ರೆಡಿ, ಇದು ಅತ್ಯಂತ ಕರಾರುವಾಕ್ಕಾದುದು' ಎಂದರು. ನನ್ನ ಶಾಲೆಯಲ್ಲಿ ದಾಖಲಾದುದು ನಾನು ನಿಜವಾಗಿ ಹುಟ್ಟಿದ ದಿನಾಂಕವಾಗಿರದೆ ನನ್ನ ಹಳ್ಳಿಯ ಶಾಲಾ ಶಿಕ್ಷಕರು ಅಂದಾಜಿನ ಮೇಲೆ ಬರೆದ ದಿನಾಂಕ ಎಂದು ನನಗೆ ಚೆನ್ನಾಗಿ ತಿಳಿದಿತ್ತು. ಏಕೆಂದರೆ, ಆಗ ನಮ್ಮ ಹಳ್ಳಿಯಲ್ಲಿ ಒಂದೆರಡು ಕುಟುಂಬಗಳನ್ನು ಬಿಟ್ಟು ಉಳಿದವರಿಗೆ ಜಾತಕ ಬರೆಸುವ ಸಂಪ್ರದಾಯವಿರಲಿಲ್ಲ. ಅವರು ತಮ್ಮ ಅಥವಾ ತಮ್ಮ ಮಕ್ಕಳ ವಯಸ್ಸನ್ನು ಅಂದಾಜಿನ ಮೇಲೆ ಹೇಳುತ್ತಿದ್ದರು. ಆದ್ದರಿಂದ ಕಂಪ್ಯೂಟರ್ ಜಾತಕವನ್ನು ನೋಡುವ ಗೊಡವೆಗೇ ನಾನು ಹೋಗಲಿಲ್ಲ. ಹಳೆಯ ಮದ್ಯವನ್ನು ಹೊಸ ಬಾಟಲಿಯಲ್ಲಿ ತುಂಬಿ ಬಿಕರಿ ಮಾಡುವಂತೆ ಇಂದು ಕಂಪ್ಯೂಟರ್ ಮೂಲಕ ಜಾತಕ ಸಿದ್ಧಪಡಿಸುವ ಪದ್ಧತಿ ರೂಢಿಗೆ ಬಂದಿದೆ. ಅದನ್ನು ಒಂದು ಅದ್ಭುತ ಸಾಧನೆ ಎನ್ನಬೇಕೆ ?

ಜ್ಯೋತಿಷಶಾಸ್ತ್ರವನ್ನು ಒಂದು ವಿಜ್ಞಾನ ಎನ್ನುವಂತೆ ಕೆಲವರು ಭಾವಿಸಿ ಜ್ಯೋತಿಷಿಗಳ ಸಲಹೆಯನ್ನು ಪಡೆಯುತ್ತಾರೆ. ಈ ವಿಜ್ಞಾನಕ್ಕೆ ಆಧಾರಗಳೇನು ? ಜನನ ಕುಂಡಲಿಯ ಗ್ರಹಗತಿಗಳನ್ನು ಲೆಕ್ಕಹಾಕಿ ಭವಿಷ್ಯವನ್ನು ನುಡಿಯಲಾಗುತ್ತದೆ. ಮಗು ಹುಟ್ಟಿದ ಸಮಯ ಮತ್ತು ಸ್ಥಳದ ಆಧಾರದ ಮೇಲೆ ಜಾತಕ ಬರೆಯಲಾಗುತ್ತದೆ. ಜನನ ಸಮಯದ ಗ್ರಹಗಳ ಸ್ಥಾನಮಾನ ಮಗುವಿನ ಜೀವನದ ಭವಿಷ್ಯವನ್ನು ನಿರ್ಣಯಿಸುತ್ತದೆ ಎಂದು ನಂಬಲಾಗಿದೆ.

## ಖೋಟಾ ಗ್ರಹಗಳು

ಸ್ವಲ್ಪ ಗಮನಿಸಿ. ಜ್ಯೋತಿಷಶಾಸ್ತ್ರದಲ್ಲಿ ಹೇಳಿರುವಂತೆ ಗ್ರಹಗಳ ಸಂಖ್ಯೆ ಒಂಬತ್ತು : ಸೂರ್ಯ, ಚಂದ್ರ, ರಾಹು, ಕೇತು, ಮಂಗಳ, ಬುಧ, ಗುರು, ಶುಕ್ರ ಮತ್ತು ಶನಿ. ಇಂದಿನ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೂ ಸೂರ್ಯ ಚಂದ್ರರು ಗ್ರಹಗಳಲ್ಲ, ಸೂರ್ಯ ಒಂದು ನಕ್ಷತ್ರ ಮತ್ತು ಚಂದ್ರ ಒಂದು ಉಪಗ್ರಹ ಎಂಬುದು ತಿಳಿದಿದೆ. ಅಲ್ಲದೆ, ರಾಹು ಕೇತು ಎಂಬುವು ಇಲ್ಲವೇ ಇಲ್ಲ. ಭೂಮಿ ಸೂರ್ಯಮಂಡಲದ ಒಂದು ಗ್ರಹ ಎಂಬ ಅರಿವೇ ಜ್ಯೋತಿಷಿಗಳಿಗೆ ಇದ್ದಂತಿಲ್ಲ. ಜೊತೆಗೆ, ಇತ್ತೀಚಿನ ಶತಮಾನಗಳಲ್ಲಿ ಖಗೋಳ ವಿಜ್ಞಾನಿಗಳಿಂದ ಕಂಡುಹಿಡಿಯಲಾದ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೊ ಗ್ರಹಗಳನ್ನು ಕುರಿತು ಜ್ಯೋತಿಷಿಗಳಿಗೆ ಏನೂ ತಿಳಿಯದು.

ಹೀಗಿದ್ದರೂ ಜ್ಯೋತಿಷ ಶಾಸ್ತ್ರ ಒಂದು ವಿಜ್ಞಾನ ಎಂದು ಬೊಬ್ಬೆ ಹಾಕುತ್ತಾರೆ. ಕೇಂದ್ರ ಸರ್ಕಾರದಲ್ಲಿ ಹಿಂದೆ ಶಿಕ್ಷಣ ಸಚಿವರಾಗಿದ್ದ ಡಾ|| ಮುರಳಿ ಮನೋಹರ ಜೋಷಿ ಎಂಬುವರು ಸ್ವತಃ ಒಬ್ಬ ಭೌತವಿಜ್ಞಾನಿಯಾದರೂ, ಅವರ ವಂಶ ವಾಹಿನಿಯಲ್ಲಿ ಜ್ಯೋತಿಷದ ರಕ್ತ ಹರಿಯುತ್ತಿರಬೇಕು. ಆದ್ದರಿಂದಲೋ ಏನೋ, ಜ್ಯೋತಿಷ ಒಂದು ವಿಜ್ಞಾನ, ಅದನ್ನು ವಿಶ್ವವಿದ್ಯಾಲಯಗಳಲ್ಲಿ ಬೋಧನೆ ಮಾಡಬೇಕು ಎಂದು ಮೊಂಡು ಹಠ ಹಿಡಿದು ವಾದಿಸಿದರು. ಆದರೆ ಪ್ರಜ್ಞಾವಂತ ವಿಜ್ಞಾನಿಗಳ ಪ್ರತಿಭಟನೆಯಿಂದ ಅವರ ಆಸೆ ನೆರವೇರಲಿಲ್ಲ. ಮೂಢನಂಬಿಕೆಗಳನ್ನೇ ತಮ್ಮ ಬಂಡವಾಳವನ್ನಾಗುಳ್ಳ ತಮ್ಮ ವಂಶಸ್ಥರ ಜೀವನೋಪಾಯಕ್ಕೆ ಒಂದು ಭದ್ರ ಬುನಾದಿಯನ್ನು ಹಾಕಬೇಕೆಂಬ ಅವರ ಹಂಬಲ ಈಡೇರಲಿಲ್ಲ.



ಇನ್ನು ರಾಹುಕಾಲ, ಗುಳಿಕಾಲಗಳತ್ತ ಬರೋಣ. ರಾಹುಕಾಲದಲ್ಲಿ ಯಾವುದೇ ಶುಭ ಕಾರ್ಯವನ್ನು ಪ್ರಾರಂಭಿಸಬಾರದೆಂಬುದು ಒಂದು ಅಂಧಶ್ರದ್ಧೆಯಾಗಿದೆ. ಪ್ರಯಾಣ, ವಿವಾಹ, ಧಾರ್ಮಿಕ ಆಚರಣೆಗಳನ್ನು ಮಾಡುವ ಮುನ್ನ ರಾಹು ಕಾಲವನ್ನು ಮೊದಲು ಗಮನಿಸಲಾಗುತ್ತದೆ. ಧರ್ಮಾತೀತ ರಾಷ್ಟ್ರವಾದ ಭಾರತದಲ್ಲಿ ರಾಜಕಾರಣಿಗಳು ಯಾವುದೇ ಸಾರ್ವಜನಿಕ ಸಮಾರಂಭ ವನ್ನು ಉದ್ಘಾಟಿಸುವ ಸಮಯವನ್ನು ನಿರ್ಧರಿಸುವಾಗ ಪಂಚಾಂಗವನ್ನು ನೋಡಿಯೇ ತೀರ್ಮಾನಿಸುತ್ತಾರೆ. ಇದು ಎಷ್ಟು ಹಾಸ್ಯಾಸ್ಪದವೆಂದರೆ, ಅದು ನಿಜವಿದ್ದಲ್ಲಿ ರಾಹುಕಾಲದಲ್ಲಿ ರೈಲು, ವಿಮಾನಗಳಲ್ಲಿ ಪ್ರಯಾಣಿಸುವವರೆಲ್ಲಾ ಅಪಘಾತಕ್ಕೀಡಾಗಬೇಕಾಗಿತ್ತು. ಆದರೆ ಅಂತಹ ಅಪಘಾತಗಳಾವುವೂ

ವರದಿಯಾಗಿಲ್ಲ. ದೊಡ್ಡ ದೊಡ್ಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳಿಂದ ಸದಾ ವಿಮಾನಗಳು ಹೊರಡುತ್ತವೆ. ರಾಹುಕಾಲದಲ್ಲಿ ಹೊರಡುವ ವಿಮಾನಗಳಾವುವೂ ಅಪಘಾತಕ್ಕೀಡಾದ ವರದಿಗಳು ಬಂದಿಲ್ಲ.

**ಅಷ್ಟಗ್ರಹಕೂಟ**

ಜ್ಯೋತಿಷಿಗಳ ಭವಿಷ್ಯವಾಣಿಯನ್ನು ಒಂದು ವಿಜ್ಞಾನ ಎಂದು ಕರೆಯುವುದು ಎಷ್ಟು ಸರಿ ? ಏಕೆಂದರೆ, ಒಂದೇ ಜನ್ಮ ಕುಂಡಲಿಗೆ ಒಬ್ಬೊಬ್ಬ ಜ್ಯೋತಿಷಿ ಒಂದೊಂದು ರೀತಿಯಲ್ಲಿ ಭವಿಷ್ಯವನ್ನು ಹೇಳಿರುವ ಉದಾಹರಣೆಗಳುಂಟು. ಇಬ್ಬರು ಜ್ಯೋತಿಷಿಗಳು ಒಂದೇ ಭವಿಷ್ಯವನ್ನು ಹೇಳಲಾರರು. ಏಕೆ ? ಆದರೆ ಜ್ಯೋತಿಷಿಗಳೆಲ್ಲಾ ಒಮ್ಮೆ ಮಾತ್ರ ಒಂದೇ ಭವಿಷ್ಯವನ್ನು ನುಡಿದ ಸಂದರ್ಭ ನನಗೆ ಜ್ಞಾಪಕಕ್ಕೆ ಬರುತ್ತಿದೆ. ೧೯೬೨ರಲ್ಲಿ ಅಷ್ಟಗ್ರಹಕೂಟದ ಪರಿಣಾಮವಾಗಿ ಭಾರಿ ದುರಂತ ಸಂಭವಿಸುತ್ತದೆ, ಪ್ರಪಂಚ ಪ್ರಳಯವಾಗುತ್ತದೆ ಎಂದು ಜ್ಯೋತಿಷಿಗಳೆಲ್ಲಾ ಬೊಬ್ಬೆ ಹಾಕಿದರು. ಜನಸ್ತೋಮ ಭಯಭೀತಿಯಿಂದ ತತ್ತರಿಸ ತೊಡಗಿತು. ಪುರೋಹಿತರು ಗಂಗಾಜಲದಲ್ಲಿ ಮಿಂದು ಯಜ್ಞ ಯಾಗ ಹೋಮ ಹವನ ಇತ್ಯಾದಿ ಮಾಡಿ ಮೂಢಮತಿಗಳಿಗೆ ಪರಲೋಕದಲ್ಲಿ ಸದ್ಗತಿಯನ್ನು ಮೀಸಲಿರಿಸುವ ಗ್ಯಾರಂಟಿ ನೀಡಿದರು. ಅವರ ವ್ಯಾಪಾರ ಭರ್ಜರಿಯಾಗಿ ನಡೆಯಿತು. ಅಷ್ಟಗ್ರಹಕೂಟದ ದಿನ ಬಂದೇ ಬಂತು. ಆದರೆ, ಆ ದಿನ ಎಲ್ಲಾ ದಿನದಂತೆ ಮಾಮೂಲಾಗಿ ಕಳೆದುಹೋಯಿತು. ಜನರು ನಿಟ್ಟುಸಿರು ಬಿಟ್ಟರು. ಜ್ಯೋತಿಷಿಗಳು ಮೂಲೆ ಸೇರಿದರು. ಜ್ಯೋತಿಷ ಶಾಸ್ತ್ರವನ್ನು ಸುಳ್ಳು ಎಂದು ಸಾರಲು ಬೇಕಾದಷ್ಟು ದೃಷ್ಟಾಂತಗಳನ್ನು ನೀಡಬಹುದು. ಆದರೆ ಮಾನವನ ಮನೋದೌರ್ಬಲ್ಯವೇ ಅದನ್ನು ಪೋಷಿಸುತ್ತಾ ಬಂದಿರುವಾಗ ಅದನ್ನು ತಡೆಗಟ್ಟುವ ಮಾರ್ಗವೇನೆಂದು ನಾವು ಚಿಂತಿಸಬೇಕಾಗಿದೆ.

**ಜೂಪಿಟರ್ ಇಫೆಕ್ಟ್**

ಅಂಥದೇ ಇನ್ನೊಂದು ಘಟನೆ ೧೯೭೪ ಮತ್ತು ೧೯೮೨ರ ನಡುವೆ ಪಾಶ್ಚಾತ್ಯ ಲೋಕದಲ್ಲಿ ಸಂಭವಿಸಿತು. ಪ್ರಸಿದ್ಧ ಖಗೋಳ ವಿಜ್ಞಾನಿಗಳಾದ ಡಾ॥ ಜಾನ್ ಗ್ರಿಬ್ಬಿನ್ ಮತ್ತು ಡಾ॥ ಸ್ಟೀಫನ್ ಪ್ಲಾಜಿಮನ್ ಅವರಿಂದ ರಚನೆಯಾಗಿ ೧೯೭೪ರಲ್ಲಿ ಪ್ರಕಟವಾದ 'ಜ್ಯೂಪಿಟರ್ ಇಫೆಕ್ಟ್' ಎಂಬ ಜನಪ್ರಿಯ ವಿಜ್ಞಾನ ಕೃತಿ ವಿಶ್ವದಾದ್ಯಂತ ಅಲ್ಲೋಲಕಲ್ಲೋಲವನ್ನುಂಟುಮಾಡಿತು. ೧೯೮೨ರಲ್ಲಿ ಭೂಮಿಯನ್ನು ಸೂರ್ಯ ನುಂಗಿಬಿಡುತ್ತಾನೆ ಎಂಬುದು ಅದರ ಸಾರಾಂಶವಾಗಿತ್ತು. ನವಗ್ರಹಗಳಾದ ಬುಧ, ಶುಕ್ರ, ಭೂಮಿ, ಕುಜ, ಗುರು, ಶನಿ, ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋಗಳು ಸಾಲಾಗಿ ಒಂದು ಕಡೆ ನಿಂತು ಸೂರ್ಯನೊಡನೆ ಹಗ್ಗ ಜಗ್ಗಾಟದಲ್ಲಿ ತೊಡಗಿ ಏಕ ಕಾಲದಲ್ಲಿ ಛಿದ್ರಛಿದ್ರವಾಗಿಹೋಗುತ್ತವೆ ಎಂದು ಅವರು ವೈಜ್ಞಾನಿಕವಾಗಿ ವಾದಿಸಿದ್ದರು. ಆದರೆ ೧೯೮೨ರಲ್ಲಿ ಅಂಥದೇನೂ ಸಂಭವಿಸಲಿಲ್ಲ. ಅನಂತರ ನಿಧಾನವಾಗಿ ಆ ವಿಜ್ಞಾನಿಗಳ ತಾರ್ಕಿಕ ಲೆಕ್ಕಾಚಾರ ಎಲ್ಲಿ ತಪ್ಪಿತ್ತು ಎಂಬುದು ಬೆಳಕಿಗೆ ಬಂತು.

ಈ ಹಿಂದೆ ನವಗ್ರಹಗಳು ಸೂರ್ಯನ ಒಂದೇ ಮಗ್ಗುಲಿಗೆ ಬಂದುದು ಹೊಸದೇನೂ ಆಗಿರಲಿಲ್ಲ. ಅಂತಹ ನವಗ್ರಹ ಯೋಗ ೧೭೯ ವರ್ಷಗಳಿಗೊಮ್ಮೆ ಪುನರಾವರ್ತನೆಗೊಳ್ಳುವುದೆಂದು ವಿಜ್ಞಾನಿಗಳು ಮನಗಂಡರು. ಅದಕ್ಕೂ ಮುಂಚೆ ಪ್ರತಿ ೧೭೯ ವರ್ಷಗಳಿಗೊಮ್ಮೆ ೧೪೪೫, ೧೬೨೪, ೧೮೦೩ ಇತ್ಯಾದಿ ವರ್ಷಗಳಲ್ಲಿ – ಅದೇ ಸ್ಥಾನದಲ್ಲಿ ಸೇರಿದ್ದುವು. ಆ ಸಂದರ್ಭಗಳಲ್ಲಿ ಯಾವ ಪ್ರಳಯವೂ ಸಂಭವಿಸಿರಲಿಲ್ಲ. ಏಕೆಂದರೆ, ಆ ನವ ಗ್ರಹಗಳು ಒಂದೇ ಕಕ್ಷಾತಳದ ಮೇಲೆ ಸರಳರೇಖೆಯಲ್ಲಿ ಬರಲಾರವು ಎಂಬುದನ್ನು ವಿಜ್ಞಾನಿಗಳು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡಿ ಸ್ಪಷ್ಟಪಡಿಸಿದರು.

ವಿಜ್ಞಾನಿಗಳು ಎಷ್ಟೇ ದೊಡ್ಡವರಾಗಿದ್ದರೂ ಅವರ ಹೇಳಿಕೆಗಳನ್ನು ಸಂದೇಹದಿಂದ ನೋಡಿ ಪರೀಕ್ಷೆಗೊಳಪಡಿಸದೆ ಒಪ್ಪಿಕೊಳ್ಳುವುದೂ ಒಂದು ರೀತಿಯಲ್ಲಿ ಮೂಢನಂಬಿಕೆಯೇ ಆಗುತ್ತದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

> **ಆಧುನಿಕ ಮಾನವನು ಬಾಹ್ಯನೋಟಕ್ಕೆ ಸುಖ ಸಂಪತ್ತುಗಳಿಂದ ಅದೆಷ್ಟೇ ತುಂಬಿ ತುಳುಕುತ್ತಿರುವಂತೆ ಕಾಣುತ್ತಿದ್ದರೂ ಆಂತರಿಕವಾಗಿ ಭಯ, ಕಾತರ ಮತ್ತು ಆತಂಕಗಳಿಂದ ಕೋಲಾಹಲಕ್ಕೀಡಾಗಿರುವುದನ್ನು ನಾವು ನೋಡಬಹುದು. ಆ ಒತ್ತಡಗಳ ಹಿನ್ನೆಲೆಯಲ್ಲಿ ಅವನ ಸಂಕಟವನ್ನು ನಿವಾರಿಸಿ ಅವನ ಅಂತರಾಳದ ಆಸೆ ಆಕಾಂಕ್ಷೆಗಳು ನೆರವೇರಬೇಕಾದರೆ ಈ ಮಾರ್ಗವನ್ನನುಸರಿಸಬೇಕು ಎಂದು ಭರವಸೆಯನ್ನು ನೀಡುವ ಒಂದು ವ್ಯಾಪಾರಿ ಮಳಿಗೆ ಅವನಿಗೆ ಬೇಕೆನಿಸುತ್ತದೆ. ಆ ಮಳಿಗೆಯೇ ಮೂಢನಂಬಿಕೆಗಳ ಉಗ್ರಾಣ ಅಥವಾ ಅಂಧಶ್ರದ್ಧೆಗಳ ಕೇಂದ್ರ. ಸಮಾಜದಲ್ಲಿ ತಾಂಡವವಾಡುತ್ತಿರುವ ಎಲ್ಲ ಮೂಢನಂಬಿಕೆಗಳಿಗೆ ಆಶ್ರಯಧಾಮಗಳು ಧಾರ್ಮಿಕ ಸಂಸ್ಥೆಗಳೇ ಆಗಿವೆ. ಆ ಸಂಸ್ಥೆಗಳು ತಮ್ಮ ಕಚೇರಿಗಳ ಮುಖ್ಯದ್ವಾರಗಳಲ್ಲಿ ಧರ್ಮದ ವ್ಯಾಪಾರವನ್ನು ಮಾಡುತ್ತಿದ್ದರೆ ಹಿತ್ತಲ ಬಾಗಿಲುಗಳಲ್ಲಿ ಮೂಢನಂಬಿಕೆಗಳನ್ನು ಬಿಕರಿ ಮಾಡುತ್ತಿರುತ್ತವೆ.**

**ಜ್ಯೋತಿಷ್ಯದ ವ್ಯಾಪಾರ**

ಯಾವುದಾದರೂ ಆತಂಕ, ನೋವು, ಒತ್ತಡಗಳಿಂದ ತತ್ತರಿಸುತ್ತಿರುವ ವ್ಯಕ್ತಿ ಜ್ಯೋತಿಷಿಯಿಂದ ಪರಿಹಾರ ಪಡೆಯಲು ಹಂಬಲಿಸಿ ಅವನ ಬಳಿಗೆ ಹೋಗುತ್ತಾನೆ. ತನ್ನ ಜಾತಕ ಇಲ್ಲವೆ ತನ್ನ ಅಂಗೈಯನ್ನು ಮುಂದೊಡ್ಡಿ ಜ್ಯೋತಿಷಿಗೆ ಶರಣು ಹೋಗುತ್ತಾನೆ. ಇಂತಹ ಸಂದರ್ಭವನ್ನು ಜ್ಯೋತಿಷಿಯು ತನಗೆ ಲಾಭದಾಯಕವಾಗುವಂತೆ ಬಳಸಿಕೊಳ್ಳದೆ ಬಿಟ್ಟಾನೆಯೇ ? ಆಗ ಅವನು ಸ್ಮಶಾನದಲ್ಲಿ ಸುಡಲು ತಂದ ದೇಹದ ಮಡಿಲಿನಿಂದ ಎಷ್ಟು ಬೆಳ್ಳಿ ಬಂಗಾರದ ತುಂಡುಗಳು ಲಭಿಸಿಯಾವು ಎಂದು ಇದಿರು ನೋಡುವ ಚಾಂಡಾಲನನ್ನು ಹೋಲುತ್ತಿರುತ್ತಾನೆ ಎಂದರೆ ಆಶ್ಚರ್ಯವಿಲ್ಲ. ಗಿರಾಕಿಗಳು ಕಪಟ ಜ್ಯೋತಿಷಿಗಳ ಆಸೆಬುರುಕುತನವನ್ನು ಅರ್ಥಮಾಡಿಕೊಳ್ಳಬೇಕು. ಅವರ ಬಲೆಯಲ್ಲಿ ಸಿಕ್ಕಿಕೊಳ್ಳದಂತೆ ಅವರಿಂದ ದೂರವಿರುವುದನ್ನು ಕಲಿಯಬೇಕು.

ಯಾವುದೇ ಸಂಕಟ ಪರಿಹಾರಕ್ಕೆ ಜ್ಯೋತಿಷಿಗಳು ಒಂದು ತಾಯತವನ್ನು ಧರಿಸಲು ಶಿಫಾರಸು ಮಾಡುತ್ತಾರೆ. ಅದರ ಬೆಲೆ ಗಿರಾಕಿಯ ಬೇಡಿಕೆಯ ತೀಕ್ಷ್ಣತೆಯನ್ನು ಅವಲಂಬಿಸಿರುತ್ತದೆ. ಅದು ಸಾಧಾರಣವಾದರೆ ರೂ. ೫೧, ವಿಶೇಷವಾದರೆ ರೂ. ೧೦೧, ಇನ್ನೂ ವಿಶೇಷವಾಗಿದ್ದರೆ ರೂ. ೨೦೧, ಅತಿ ಶೀಘ್ರಪರಿಹಾರ ಬೇಕೆಂದರೆ ರೂ. ೫೦೧. ಜೋಯಿಸರು ದೀರ್ಘ ತಪಸ್ಸು, ಮಂತ್ರಗಳ ಬಳಕೆಯಿಂದ ಈ ತಾಯತವನ್ನು ಸಿದ್ಧಪಡಿಸಿದ್ದಾರೆ ಎಂದು ಹೇಳಿಕೊಳ್ಳಲಾಗುತ್ತದೆ. ಅಷ್ಟರೊಳಗೆ ಗಿರಾಕಿಗೆ ಏನೋ ಒಂದು ಪರಿಹಾರ ದೊರೆಯಬಹುದು. ಇಲ್ಲವಾದರೆ ಗ್ರಹಗತಿಗಳು ತುಂಬಾ ಘೋರವಾಗಿರುವುದರಿಂದ ಹೋಮ ಹವನ ಯಜ್ಞ ಇತ್ಯಾದಿಗಳನ್ನು ಆಚರಿಸಬೇಕು ಎಂದು ಹೇಳಲಾಗುತ್ತದೆ. ಗಿರಾಕಿಯು ತನ್ನ ಶಕ್ತಿ ಸಾಮರ್ಥ್ಯಗಳಿಗನುಗುಣವಾಗಿ ಜ್ಯೋತಿಷಿ ಹೇಳಿದಂತೆ ನಡೆದುಕೊಳ್ಳುತ್ತಾನೆ. ಅವನ ಸಮಸ್ಯೆಗಳಿಗೆ ಪರಿಹಾರ ದೊರೆತರೆ ಅದು ಜೋಯಿಸರ ಮಂತ್ರಬಲದಿಂದ ದೊರೆಯಿತೆಂದು, ಇಲ್ಲವೆ ಇದ್ದ ಹಣಕಾಸು ಕಳೆದುಕೊಂಡು ಇನ್ನಷ್ಟು ಕುಸಿದು ಹೋಗಿದ್ದರೆ ಅದು ತನ್ನ ಪ್ರಾರಬ್ಧಕರ್ಮಫಲವೆಂದೂ ಸಮಾಧಾನಪಟ್ಟುಕೊಳ್ಳುತ್ತಾನೆ. ಹಾಗೆಂದು ಅವನ ತಲೆಯಲ್ಲಿ ಆ ವೇಳೆಗಾಗಲೇ ತುಂಬಿರಲಾಗುತ್ತದೆ.

ಒಂದು ಕಡೆ ನವಗ್ರಹಗಳ ಒಂಬತ್ತು ಅವಧಿಗಳನ್ನುಳ್ಳ ಮಹಾದಶೆಗಳನ್ನು ಜಾತಕಾನುಸಾರ ವಿಂಗಡಿಸುತ್ತಾರೆ. ಈ ಪ್ರತಿಯೊಂದು ಮಹಾದಶೆಗಳನ್ನು ಪುನಃ ಅಂತರ್ದಶೆಗಳನ್ನಾಗಿ ವಿಭಾಗಿಸಿರುತ್ತಾರೆ. ಈ ಅಂತರ್ದಶೆಗಳನ್ನು ಮತ್ತೊಮ್ಮೆ ಪ್ರತ್ಯಂತರಗಳೆಂದು ಬೇರ್ಪಡಿಸಿರುತ್ತಾರೆ. ಈ ಪ್ರಕ್ರಿಯೆಯನ್ನು ಎಷ್ಟು ಮುಂದಕ್ಕೆ ಬೇಕಾದರೂ ಕೊಂಡೊಯ್ಯಬಹುದಂತೆ. ಇದರ ಸವಿವರವಾದ ಗ್ರಹಗತಿಗಳ ಆಧಾರದ ಮೇಲೆ ವ್ಯಕ್ತಿಯ ಜೀವನದಲ್ಲಿ ಪ್ರತಿ ನಿಮಿಷದಲ್ಲೂ ಏನೇನು ಸಂಭವಿಸುತ್ತದೆ ಎಂಬುದನ್ನು ಕರಾರುವಾಕ್ಕಾಗಿ ಲೆಕ್ಕ ಹಾಕಬಹುದು ಎಂದು ಹೇಳಿಕೊಳ್ಳುತ್ತಾರೆ.

ಇನ್ನೊಂದು ಕಡೆ, ಭವಿಷ್ಯದ ಸಂಭವನೀಯ ಘಟನೆಗಳು ಮೊದಲೇ ತಿಳಿದಿದ್ದರೆ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಬಹುದು ಎಂದು ಹೇಳಲಾಗುತ್ತದೆ. ತಮಾಷೆಯೆಂದರೆ, ಭವಿಷ್ಯವನ್ನು ಮೊದಲೇ ಬಲ್ಲವರಾರೂ ಇಲ್ಲ ಎಂಬುದನ್ನು ಒಂದು ಕಥೆಯ ಮೂಲಕ ನಮ್ಮ

ಜಾನಪದರು ಹೇಳುವುದನ್ನು ನೋಡಬಹುದು. ಅದು ಹೀಗಿದೆ: ಒಮ್ಮೆ ಒಬ್ಬ ರಾಜ ಒಬ್ಬ ಜ್ಯೋತಿಷಿಯನ್ನು ಕರೆಸಿ ತನ್ನ ಭವಿಷ್ಯವನ್ನು ಕೇಳಿದನಂತೆ. ರಾಜನ ಜಾತಕ ನೋಡಿ ಲೆಕ್ಕಹಾಕಿದ ಜ್ಯೋತಿಷಿ ರಾಜನ ಆಯಸ್ಸು ಆರು ತಿಂಗಳಿಗೆ ಅಂತ್ಯವಾಗುತ್ತದೆ ಎಂದ. ರಾಜ ಗಲಿಬಿಲಿಗೊಂಡ. ಅಲ್ಲೇ ಇದ್ದ ಸೇನಾಧಿಪತಿ, ಹಾಗಾದರೆ ನಿನ್ನ ಆಯಸ್ಸು ಎಷ್ಟು ಎಂದು ಆ ಜ್ಯೋತಿಷಿಯನ್ನೇ ಕೇಳಿದ. ಅವನು ನನ್ನ ಆಯಸ್ಸು ಇನ್ನು ಹನ್ನೆರಡು ವರ್ಷ ಎಂದ. ಕೂಡಲೇ ಸೇನಾಧಿಪತಿ ಜ್ಯೋತಿಷಿಯನ್ನು ಖಡ್ಗದಿಂದ ಇರಿದು ಕೊಂದ. ಅವನನ್ನೇಕೆ ಕೊಂದೆ ಎಂದು ರಾಜ ಕೇಳಿದ್ದಕ್ಕೆ ಅವನ ಭವಿಷ್ಯ ಅವನಿಗೇ ಗೊತ್ತಿಲ್ಲ, ಇನ್ನೊಬ್ಬರ ಭವಿಷ್ಯವನ್ನು ಅವನೇನು ಹೇಳಬಲ್ಲ ಎಂದು ನಿಮಗೆ ತೋರಿಸಲು ಹಾಗೆ ಮಾಡಿದೆ ಎಂದ. ಈ ಜಾನಪದ ಕಥೆಯಿಂದ ಜನಸಾಮಾನ್ಯರಿಗೂ ಜ್ಯೋತಿಷ್ಯದ ಪೊಳ್ಳಿನ ಅರಿವಿದೆ ಎಂಬುದನ್ನು ಮನಗಾಣಬಹುದು. ವ್ಯಕ್ತಿಯು ತನ್ನ ಮನೋಸಂಕಲ್ಪ ಸಾಧನೆಗಳ ಮೂಲಕ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳಬಹುದೇ ಹೊರತು ಮಂತ್ರ, ತಂತ್ರಗಳಿಂದ ಅಲ್ಲ.

ಡಾ|| ಅಬ್ರಹಾಂ ಕೋವೂರ ಎಂಬ ವಿಚಾರವಾದಿ ಒಂದು ನೂರು ಜನರ ಜನನ ದಿನ, ವೇಳೆ ಮತ್ತು ಸ್ಥಳಗಳನ್ನು ಅವರು ಜನಿಸಿದ ಆಸ್ಪತ್ರೆಗಳ ದಾಖಲಾತಿಗಳಿಂದ ಸಂಗ್ರಹಿಸಿ ಸವಾಲನ್ನು ಒಡ್ಡಿದರು. ಅವರಲ್ಲಿ ಎಷ್ಟು ಜನ ಜೀವಂತ ಇದ್ದಾರೆ ಮತ್ತು ಎಷ್ಟು ಜನ ದಿವಂಗತರಾಗಿದ್ದಾರೆ ಎಂಬುದನ್ನು ಕನಿಷ್ಠ ಶೇ. ೬೦ರಷ್ಟು ಸರಿಯಾಗಿ ಹೇಳಿದವರಿಗೆ ಒಂದು ಲಕ್ಷ ರೂಪಾಯಿ ಬಹುಮಾನ ಕೊಡುವುದಾಗಿ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಯಾವೊಬ್ಬ ಜ್ಯೋತಿಷಿಯೂ ಆ ಸವಾಲನ್ನು ಎದುರಿಸಲು ಮುಂದೆ ಬರಲಿಲ್ಲ.

**ವಿಶ್ವವಿಖ್ಯಾತ ವಿಜ್ಞಾನಿಗಳ ಮನವಿ**

ಅಮೆರಿಕಾದ 'ಹ್ಯೂಮನಿಸ್ಟ್' ಎಂಬ ಪತ್ರಿಕೆ ೧೯೭೫ರಲ್ಲಿ ವಿಶ್ವವಿಖ್ಯಾತ ೧೮೬ ವಿಜ್ಞಾನಿಗಳ ಒಂದು ಹೇಳಿಕೆಯನ್ನು ಪ್ರಕಟಪಡಿಸಿತು. ಅವರಲ್ಲಿ ಭಾರತದ ಭೌತ ವಿಜ್ಞಾನಿ ಡಾ|| ಎಸ್. ಚಂದ್ರಶೇಖರ್ ಸೇರಿದಂತೆ ೧೯ ಮಂದಿ ನೊಬೆಲ್ ಪ್ರಶಸ್ತಿ ವಿಜೇತರು ಇದ್ದಾರೆ. ಆ ಮೂಲಕ ಅವರು ಫಲ ಜ್ಯೋತಿಷದ ಪೊಳ್ಳುತನವನ್ನು ನಂಬಿ ಮೋಸಹೋಗಬಾರದೆಂದು ಸಾರ್ವಜನಿಕರನ್ನು ಎಚ್ಚರಿಸಿದ್ದಾರೆ. ಓಬೀರಾಯನ ಕಾಲದ ಇಂದ್ರಜಾಲಿಕ ವಿದ್ಯೆಯ ಒಂದು ಶಾಖೆ ಈ ಜ್ಯೋತಿಷ. ಆಕಾಶಕಾಯಗಳಲ್ಲಿ ದೇವತೆಗಳು ನೆಲೆಸಿರುತ್ತಾರೆ; ಆದ್ದರಿಂದ ಭೂಮಿಯ ಮೇಲಿನ ಘಟನೆಗಳಿಗೆ ಆಕಾಶಕಾಯಗಳ ಸಂಬಂಧವಿರುತ್ತದೆ ಎಂದು ಜ್ಯೋತಿಷಿಗಳು ನಂಬಿದ್ದಾರೆ. ಭೂಮಿಯಿಂದ ಗ್ರಹಗಳಿಗೂ, ನಕ್ಷತ್ರಗಳಿಗೂ ಇರುವ ದೂರದ ಬೃಹತ್ ಪ್ರಮಾಣದ ಅರಿವು ಅವರಿಗಿಲ್ಲ. ಅಷ್ಟೇಕೆ, ಯಾವುದು ಗ್ರಹ, ಯಾವುದು ನಕ್ಷತ್ರ ಎಂಬಷ್ಟು ಕನಿಷ್ಠ ಪರಿಜ್ಞಾನವೂ ಅವರಿಗಿಲ್ಲ. ಮುಗ್ಧ ಜನರ ಮೇಲೆ ಮಂಕುಬೂದಿ ಎರಚಿ ಮೋಡಿ ಮಾಡುತ್ತಿರುವ ಫಲ ಜ್ಯೋತಿಷಿಗಳಿಂದ ಸಾರ್ವಜನಿಕರು ಹೇಗೆ ದೂರವಿರಬೇಕೆಂಬುದನ್ನು ವಿಜ್ಞಾನಿಗಳ ಹೇಳಿಕೆ ಸ್ಪಷ್ಟವಾಗಿ ತಿಳಿಸುತ್ತದೆ. ಪ್ರಸಿದ್ಧ ವಿಜ್ಞಾನ ಲೇಖಕರಾದ ಪ್ರೊ|| ಜಿ. ಟಿ. ನಾರಾಯಣರಾವ್ ಅವರು ತಮ್ಮ 'ವೈಜ್ಞಾನಿಕ ಮನೋಧರ್ಮ' ಎಂಬ ಕೃತಿಯಲ್ಲಿ ವಿಜ್ಞಾನಿಗಳ ಹೇಳಿಕೆಯ ಕನ್ನಡ ಅನುವಾದವನ್ನು ನೀಡಿದ್ದಾರೆ. ಅದರ ಒಂದು ತುಣುಕು ಇಲ್ಲಿದೆ:

''ಜನನ ಕ್ಷಣದಲ್ಲಿ ನಕ್ಷತ್ರಗಳು ಮತ್ತು ಗ್ರಹಗಳು ನಮ್ಮ ಭವಿಷ್ಯವನ್ನು ರೂಪಿಸುವುವೆಂದು ಊಹಿಸುವುದು ಕೂಡ ಶುದ್ಧಾಂಗ ಅವಿವೇಕ. ದೂರದ ಆಕಾಶಗಳ ಸ್ಥಾನ ಕೆಲವು ದಿನಗಳನ್ನು ಇಲ್ಲವೆ ಅವಧಿಗಳನ್ನು ವಿಶಿಷ್ಟ ಕೆಲಸಗಳಿಗೆ ಅಧಿಕ ಪ್ರಶಸ್ತವಾಗಿ ಮಾಡುವುದೆಂಬುದಾಗಲಿ, ಒಬ್ಬ ವ್ಯಕ್ತಿಯ ಜನನ ನಕ್ಷತ್ರ ಆತ ಇತರರೊಂದಿಗೆ ಹೊಂದಿರುವುದನ್ನು ಅಥವಾ ಹೊಂದದಿರುವುದನ್ನು ನಿರ್ಧರಿಸುವುದೆಂಬುದಾಗಲಿ ಖಂಡಿತ ನಿಜವಲ್ಲ... ಪ್ರತಿಯೊಬ್ಬನ ಭವಿಷ್ಯವೂ ಅವನ ಕೈಯಲ್ಲಿಲ್ಲದೆ.''

ಫಲಜ್ಯೋತಿಷವನ್ನು ತಪಾಸಣೆಗೆ ಒಳಪಡಿಸಿ ದೃಢಪಡಿಸಿದ ಯಾವ ವೈಜ್ಞಾನಿಕ ಸಾಕ್ಷ್ಯಾಧಾರಗಳೂ ಇಲ್ಲ. ವಾಸ್ತವವಾಗಿ ಅದಕ್ಕೆ ವಿರುದ್ಧವಾದ ಪುರಾವೆಗಳು ಇದ್ದರೂ ಇಂದಿಗೂ ಸಮೂಹ ಮಾಧ್ಯಮಗಳಲ್ಲಿ ರಾಶಿ ಭವಿಷ್ಯ ಮಿಂಚುತ್ತಿರುವುದು ಶೋಚನೀಯವಲ್ಲವೇ? ಇದು ಭಾರತದಂತಹ ಪ್ರಾಚೀನ ಪರಂಪರೆಯ ರಾಷ್ಟ್ರಗಳಲ್ಲಿ ಮಾತ್ರವಲ್ಲ, ಆಧುನಿಕ ಅಮೆರಿಕಾದಲ್ಲೂ ಇಂದು ಫಲಜ್ಯೋತಿಷ ತಾಂಡವವಾಡುತ್ತಿದೆ ಎಂದು ನಂಬಬಹುದೆ? ಆದರೂ ಅದು ನಿಜ. ಅಮೆರಿಕಾದ ೧೨೦೦ ವರ್ತಮಾನ ಪತ್ರಿಕೆಗಳಲ್ಲಿ ಜ್ಯೋತಿಷದ ಅಂಕಣಗಳಿವೆ. ಒಂದು ಪರಿವೀಕ್ಷಣೆಯ ಪ್ರಕಾರ ಶೇ. ೫೫ರಷ್ಟು ಹದಿಹರೆಯದವರು ಅವುಗಳನ್ನು ಓದುತ್ತಾರೆ, ಅವರು ಕೇವಲ ಮನರಂಜನೆಗೆ ಜ್ಯೋತಿಷ್ಯವನ್ನು ಓದುತ್ತಾರೆಂದು ತಿಳಿದರೂ ಅವರ ಸುಪ್ತಪ್ರಜ್ಞೆಯ ಮೇಲೆ ಅದು ಪರಿಣಾಮ ಬೀರದೆ ಇರದು.

ಕೆಲವು ರಾಶಿಗಳಲ್ಲಿ ಜನಿಸಿದವರು ರಾಜಕಾರಣಿಗಳಾಗುತ್ತಾರೆ, ಇನ್ನೂ ಕೆಲವು ರಾಶಿಗಳಲ್ಲಿ ಜನಿಸಿದವರು ವಿಜ್ಞಾನಿಗಳಾಗುತ್ತಾರೆ, ಎಂದು ಭವಿಷ್ಯ ನುಡಿಯುವುದನ್ನು ಒಬ್ಬ ಭೌತ ವಿಜ್ಞಾನಿ ಪರೀಕ್ಷೆಗೆ ಒಳಪಡಿಸಿ ವರದಿ ಮಾಡಿದ್ದಾನೆ. 'ಅಮೆರಿಕನ್ ಮೆನ್ ಆಫ್ ಸೈನ್ಸ್' ಎಂಬ ವಿಶ್ವಕೋಶದಲ್ಲಿ ದಾಖಲಾದ ೧೬೬೩೪ ವಿಜ್ಞಾನಿಗಳ ಜನನ ದಿನಾಂಕಗಳನ್ನು ಅಭ್ಯಾಸ ಮಾಡಿದ ಅವನು, ಅವುಗಳಲ್ಲಿ ಯಾದೃಚ್ಛಿಕ ಸಂಬಂಧವಿದೆಯೆ ಹೊರತು ಜಾತಕದ ಆಧಾರದ ಮೇಲೆ ವ್ಯಕ್ತಿಯ ವೃತ್ತಿ ನಿರ್ಧಾರವಾಗುತ್ತದೆ ಎಂಬುದು ಶುದ್ಧ ಸುಳ್ಳು ಎಂದು ಹೇಳಿದ್ದಾನೆ.

ವಧು-ವರರ ಜಾತಕಗಳನ್ನು ನೋಡಿ ವಿವಾಹ ನಿಶ್ಚಯಿಸುವುದು ಎಷ್ಟು ಸರಿ? ಅಮೆರಿಕಾದ ಒಬ್ಬ ಮನೋವಿಜ್ಞಾನಿ ಮಿಷಿಗನ್ ರಾಜ್ಯದಲ್ಲಿ ೧೯೬೭ ಮತ್ತು ೧೯೬೮ರಲ್ಲಿ ವಿವಾಹ ವಿಚ್ಛೇದನ ಪಡೆದಿದ್ದ ೨೯೭೮ ದಂಪತಿಗಳ ಜಾತಕಗಳನ್ನು ಅಧ್ಯಯನ ಮಾಡಿ, ಜ್ಯೋತಿಷಿಗಳು ಹೇಳುವ ಯಶಸ್ವೀ ದಾಂಪತ್ಯ ಜೀವನಕ್ಕೆ ಅವಶ್ಯವಾದ ಜಾತಕಗಳು ಕೂಡುವಿಕೆ ಮತ್ತು ಕೂಡದಿರುವಿಕೆಗಳಿಗೆ ಯಾವುದೇ ಸಂಬಂಧವಿರಲಿಲ್ಲ ಎಂದು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ.

**ಜ್ಯೋತಿಷವೆಂಬ ಮನರಂಜನೆ**

೧೯೮೪ರಲ್ಲಿ ಅಮೆರಿಕಾದ ಅತಿಮಾನುಷ ಶಕ್ತಿಯ ಶೋಧಕ ಸಮಿತಿಯು ಪತ್ರಿಕೆಗಳ ಜ್ಯೋತಿಷ ಅಂಕಣದ ಮೇಲ್ಭಾಗದಲ್ಲಿ ''ಈ ಮುಂದಿನ ಜ್ಯೋತಿಷಶಾಸ್ತ್ರ ಹೇಳುವ ಭವಿಷ್ಯವು ಕೇವಲ ಮನರಂಜನೆಗಾಗಿಯೇ ವಿನಾ ವೈಜ್ಞಾನಿಕ ಸತ್ಯವೆಂದು ತಿಳಿಯಬಾರದು'' ಎಂದು ಒಂದು ಟಿಪ್ಪಣಿಯನ್ನು ಪ್ರಕಟಿಸಬೇಕು ಎಂದು ಬಹಿರಂಗ ಕರೆ ನೀಡಿತು. ಅದಕ್ಕೆ ವಿವಿಧ ಪ್ರತಿಕ್ರಿಯೆಗಳು ಬಂದವು. ಕೆಲವು ಪತ್ರಿಕೆಗಳು ಪತ್ರಿಕಾ ಹೇಳಿಕೆಯನ್ನು ಸ್ವಾಗತಿಸಿ ಮೇಲಿನ ಟಿಪ್ಪಣಿಯನ್ನು ಜ್ಯೋತಿಷ ಅಂಕಣದ ಮೇಲ್ಭಾಗದಲ್ಲಿ ಪ್ರಕಟಿಸಲಾರಂಭಿಸಿದವು. ಕೆಲವು ಪತ್ರಿಕೆಗಳು ಹಾಸ್ಯ, ಮನರಂಜನೆಯ ವಿಭಾಗದಲ್ಲಿ ಜ್ಯೋತಿಷವನ್ನು ಪ್ರಕಟಿಸಲಾರಂಭಿಸಿದವು. ಇನ್ನೂ ಕೆಲವು ಪತ್ರಿಕೆಗಳು ಓದುಗರ ಅಭಿರುಚಿಗೆ ಮತ್ತು ಅಪೇಕ್ಷೆಗಳಿಗೆ ತಕ್ಕಂತೆ ನಾವು ಪ್ರತಿಸ್ಪಂದಿಸುತ್ತಿದ್ದೇವೆ ಎಂದು ತಮ್ಮನ್ನು ಸಮರ್ಥಿಸಿಕೊಂಡವು.

ಇಂದು ಸಿಗರೇಟು ಪ್ಯಾಕುಗಳ ಮೇಲೆ ಸಿಗರೇಟು ಸೇದುವುದು ಆರೋಗ್ಯಕ್ಕೆ ಹಾನಿಕಾರಕ ಎಂಬ ಎಚ್ಚರಿಕೆಯನ್ನು ಕಾನೂನು ಪ್ರಕಾರ ಪ್ರಕಟಿಸಲಾಗುತ್ತಿದೆ. ಅದೇ ಮಾದರಿಯನ್ನು ಫಲಜ್ಯೋತಿಷ ಅಂಕಣಕ್ಕೂ ಅನ್ವಯಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಸೂಕ್ತವಾಗಿದೆ.

**ಕುಂಬಳಕಾಯಿ ಪವಾಡ**

ಪವಾಡಪುರುಷರೆಂದು ಪ್ರಸಿದ್ಧರಾವ ಕೆಲವು ದೇವಮಾನವರು ಆಗಾಗ ಕೆಲವು ಅಪ್ರಾಕೃತಿಕ ಕೃತ್ಯಗಳನ್ನು ಎಸಗಿ

೧೯ನೇ ಪುಟಕ್ಕೆ




## 'ಹೊಸತು' ಓದುಗರ ಗಮನಕ್ಕೆ!

'ಹೊಸತು' ಪ್ರಾರಂಭವಾದಂದಿನಿಂದ ಇಲ್ಲಿಯವರೆಗೆ ಚಂದಾದರಗಳಲ್ಲಿ ಹೆಚ್ಚಳವಾಗಿಲ್ಲದೆ ಇರುವುದನ್ನು ನೀವು ಗಮನಿಸಿರುತ್ತೀರಿ. ಅನಿವಾರ್ಯ ಕಾರಣಗಳಿಂದ ೨೦೦೫ರ ಆಗಸ್ಟ್ ಸಂಚಿಕೆಯಿಂದ ಬಿಡಿ ಸಂಚಿಕೆಯ ಬೆಲೆಯನ್ನು ರೂ. ೧೦ರಿಂದ ರೂ. ೧೨ಕ್ಕೆ ಹೆಚ್ಚಿಸಲಾಗಿದೆ ಎಂಬುದನ್ನು ದಯವಿಟ್ಟು ಗಮನಿಸಿರಿ.

ಅಂತೆಯೇ 'ಹೊಸತು' ಏಳನೇ ವರ್ಷಾರಂಭದಿಂದ (ಆಗಸ್ಟ್ ೨೦೦೫) ವಾರ್ಷಿಕ ಚಂದಾ ರೂ. ೧೨೫ ಆಗಿರುತ್ತದೆ. ಮೂರು ವರ್ಷಗಳಿಗೆ ರೂ. ೩೦೦ ಆಗಿರುತ್ತದೆ.

ಚಂದಾದಾರರಿಗೆ 'ಹೊಸತು' ವಾರ್ಷಿಕ ವಿಶೇಷಾಂಕವನ್ನು ಉಚಿತವಾಗಿ ನೀಡುವ ಸಂಪ್ರದಾಯ ಮುಂದುವರಿಯುತ್ತದೆ.

ಮೂರು ವರ್ಷದ ಚಂದಾದಾರರಿಗೆ ಪುಸ್ತಕಗಳ ಉಡುಗೊರೆ ಹಾಗೂ ನಮ್ಮ ಪ್ರಕಟಣೆಗಳ ಮೇಲೆ ಶೇ. ೨೦ರ ರಿಯಾಯಿತಿ - ಮುಂತಾದ ಅವಕಾಶಗಳೂ ಮುಂದುವರಿಯುತ್ತವೆ.

ವ್ಯವಸ್ಥಾಪಕ

# ಇಲೆಕ್ಷನ್ ಇಲೆಕ್ಷನ್... ಕಲೆಕ್ಷನ್

ಕೆ. ರಾಘವೇಂದ್ರ ಭಟ್

**'ಇ**ಲೆಕ್ಷನ್' ಬಂತೂ ಎಂದರೆ ನೆಮ್ಮದಿ ಕಳಕೊಳ್ಳುವವರು ಹಲವರಾದರೂ ಉತ್ಸಾಹದ ಕಾರಂಜಿಯಾಗುವವರು ಅನೇಕರು. ಅದೂ ಮಧ್ಯಾವಧಿ ಚುನಾವಣೆಯೆಂದರೆ ಕೇಳುವುದೇ ಬೇಡ. ಅಲ್ಲಿಯ ಕಾವು ವಿಪರೀತ. ಕೋಟಿಗಟ್ಟಲೆ ಸರಕಾರಕ್ಕೆ ಹೋದರೇನಾಯಿತು ? ಸಾವಿರಗಟ್ಟಲೆ, ಲಕ್ಷಗಟ್ಟಲೆ ನಮಗೆ ಸಿಗೋಲ್ವೆ ! ಅನ್ನುವವರ ಸಂಖ್ಯೆ ಅಪಾರ.

ಇಲೆಕ್ಷನ್‌ಗೆ ಇಷ್ಟು ಖರ್ಚು ಮಾಡಬೇಕು, ಪ್ರತೀ ಪಕ್ಷವೂ ಅಭ್ಯರ್ಥಿಗಳೂ ನಿಗದಿತ ಹಣಕ್ಕಿಂತ ಹೆಚ್ಚು ಉಪಯೋಗಿಸಬಾರದು ಎನ್ನುವ ಚುನಾವಣಾ ಸಮಿತಿಯ ನಿರ್ಧಾರಕ್ಕೆ ಬೆಲೆಯೆಲ್ಲಿದೆ ? ಪಕ್ಷಗಳ ಪುಸ್ತಕಗಳು ತೋರಿಸುತ್ತವೆ. ಲೆಕ್ಕ ಸಾಚಾ ಆಗಿರುತ್ತದೆ ಬಿಡಿ. ಆದರೆ ವ್ಯವಹಾರ ಲಕ್ಷ ಕೋಟಿಗಳಲ್ಲೇ ನಡೆಯುತ್ತದೆ.

ನಮ್ಮ ಕೂಸಪ್ಪ ಇದ್ದಾನೆ. ಅವನಿಗೆ ಇಲೆಕ್ಷನ್ ಬಂತೆಂದರೆ ದೀಪಾವಳಿ ಹಬ್ಬಕ್ಕಿಂತಲೂ ಹೆಚ್ಚು ಖುಷಿ. ಅವನ ಹೆಂಡತಿ ಮಕ್ಕಳಿಗೆ ಇಲೆಕ್ಷನ್ ಸಮಯದಲ್ಲಿ ಹೊಸ ಸೀರೆ, ಅಂಗಿ, ಚಡ್ಡಿಗಳು ಬರುತ್ತವೆ. ಅವನ ಗಡಂಗಿಗೆ ಅವನು ಮಾಡುವ ಖರ್ಚೂ ಕಡಿಮೆಯಾಗುತ್ತದೆ. ಇದೆಲ್ಲಾ ಹೇಗೆ, ಯಾವಾಗ, ಯಾರಿಂದಾಗಿ ಆಗ್ತವೆ ? ಅಂತೆಲ್ಲಾ ಪ್ರಶ್ನಿಸಬೇಡಿ. ಅವನ ಮೋಪೆಡ್‌ನ ಬಲಬದಿಯ ಬಾಸ್ಕೆಟ್‌ನಲ್ಲಿ ಕಾಂಗ್ರೆಸ್ ಚಿಹ್ನೆಯಿದ್ದರೆ, ಎಡಬದಿಯಲ್ಲಿ ಜನತಾದಳದ್ದು. ಎದುರುಗಡೆ ಬಿಜೆಪಿಯ ಪತಾಕೆ. ಹಿಂದುಗಡೆಯ ನಂಬರ್ ಪ್ಲೇಟಿನ ಹತ್ತಿರ ಕಮ್ಯೂನಿಸ್ಟ್ ಚಿಹ್ನೆ. ಒಂದು ರೀತಿಯಲ್ಲಿ ಅವನದು ಸರ್ವಪಕ್ಷ ಸಮನ್ವಯ ಬಾಳ್ವೆ. ಅವನಿಗೆ ಅಷ್ಟಿಷ್ಟು ಬರೆಯಲೂ ಬರುತ್ತದೆ. ಹಾಡಲೂ ಬರುತ್ತದೆ. ಇಲೆಕ್ಷನ್ ಸಮಯದಲ್ಲಿ ಎಲ್ಲ ಪಕ್ಷಗಳೂ ಅವನಲ್ಲಿ ದುಂಬಾಲು ಬೀಳುತ್ತವೆ. ಎಲ್ಲಾ ಪಕ್ಷದವರಿಗೂ ಸಿಗುವ ಮೌಲ್ಯಕ್ಕೆ ಅನುಗುಣವಾಗಿ ಲಾವಣಿ, ಸಿನೆಮಾ ಧಾಟಿಯಲ್ಲಿ ತುಳು, ಕನ್ನಡಗಳಲ್ಲಿ (ಹೆಚ್ಚಿನ ಪ್ರೌಢ ಅರ್ಥ ಬೇಕಾಗಿಲ್ಲ. ಪಕ್ಷದ ಹೆಸರು, ಅಭ್ಯರ್ಥಿಯ ಹೆಸರು, ದೇಶೋದ್ಧಾರಕ್ಕಾಗಿ, ಕೆಲವು ಬಾರಿ ವಂಶೋದ್ಧಾರಕ್ಕೂ ಇರಬಹುದೇ, ಇವರನ್ನು ಚುನಾಯಿಸಿ ಈ ಪಕ್ಷಕ್ಕೆ ಗೆಲುವನ್ನು ಸಂಪಾದಿಸಿಕೊಡಿ) ಎಂದು ಬರೆದರೆ ಸಾಕು. ಹಾಡು ಕಟ್ಟಿ ಹಾಡಿ, ಬೇಕಾದರೆ – (ಅವನು ಹೆಚ್ಚು ಹಣ ಕೊಡುವುದಾದರೆ) ವಾದ್ಯ ಮೇಳಗಳನ್ನು ಅಳವಡಿಸಿಕೊಂಡು ಟೇಪ್ ಮಾಡಿಕೊಡುತ್ತಾನೆ. ಪ್ರತೀ ಪಕ್ಷಗಳೂ ಶಕ್ತ್ಯಾನುಸಾರ ಏನಾದರೂ ಕೊಡುತ್ತವೆ, ಏನೂ ಕೊಡಲಿಲ್ಲವೆಂದು ಊರೆಲ್ಲಾ ಸಾರುತ್ತಾ ಅವನ ವರ್ಷವಿಡಿಯ ಯಥೇಚ್ಛ ಖರ್ಚುಗಳಿಗೆ ಸಾಕಾಗುವಂತೆ ಮಾಡುತ್ತಾರೆ. ಅವನ ಓಟು, ಹೆಂಡ್ತಿ ಮಕ್ಕಳ ಓಟು ಯಾರಿಗೋ ಅದು ಬ್ರಹ್ಮರಹಸ್ಯ. ಎಲ್ಲರ ಹತ್ತಿರವೂ 'ನಿಮಗಲ್ಲದೆ ಬೇರೆ ಯಾವ ಬಡ್ಡೀ ಮಕ್ಕಳಿಗೆ ಕೊಡ್ಲಿ ಸರ್' ಎಂದು ಪ್ರತಿಪಾದಿಸುತ್ತಾನೆ.

ಕೂಸಪ್ಪ ಒಬ್ಬನೇ ಅಲ್ಲ. ಅವನಂಥವರು ನಮ್ಮಲ್ಲಿ ನಿಮ್ಮಲ್ಲಿ ನೂರಾರು ಮಂದಿಯಿದ್ದಾರೆ. 'ನಮ್ಮ ಪಕ್ಷದಲ್ಲಿ ದುಡ್ಡಿಲ್ಲ. ದೇಶೋದ್ಧಾರ ಮಾಡಬೇಕೆಂಬ ಹಂಬಲ ಮಾತ್ರ ಇದೆ. ಅನಾವಶ್ಯಕವಾಗಿ ದುಡ್ಡು ಪೋಲು ಮಾಡುವುದು ನಮಗಿಷ್ಟವಿಲ್ಲ' ಎನ್ನುವ ಪಕ್ಷಗಳಿಂದಲೂ ಧಾರಾಳವಾಗಿ ಹಣ ಪಡೆಯುತ್ತ ಪಕ್ಷಗಳ ಪರವಾಗಿ ಬಾಡಿಗೆ ಕೆಲಸ ಮಾಡುವವರೂ ಇದ್ದಾರೆ. ನಮ್ಮೂರಲ್ಲಿ ಕಾಂಗ್ರೆಸ್‌ಗಾಗಿ ನಿಮ್ಮೂರಲ್ಲಿ ಜನತಾ ದಳದವರಾಗಿರುವವರೂ ಇದ್ದಾರೆ. ದೇಶೋದ್ಧಾರ, ಗ್ರಾಮೋದ್ಧಾರ, ಕೆಳಗಿನವರ ಮೇಲೇರುವಿಕೆ, ರಾಮರಾಜ್ಯ, ಲಂಚ ನಿರ್ಮೂಲನೆ – ಹೀಗೆ ನಾಲ್ಕಾರು ಶಬ್ದಗಳು ಅವನ ಶಬ್ದ ಭಂಡಾರದಲ್ಲಿದ್ದರೆ ಸಾಕು. ಆತ 'ಎ' ಗ್ರೇಡ್ ಪಾರ್ಟಿ ಕಾರ್ಯಕರ್ತನಾಗುತ್ತಾನೆ.

ಇಲೆಕ್ಷನ್ ಫಂಡು ಎಂಬುದು ಪ್ರತಿ ಪಕ್ಷದಲ್ಲೂ ಎಂದೆಂದಿಗೂ ಖಾಲಿಯಾಗದ ಕರೆಂಟ್ ಅಕೌಂಟ್ – ಅರ್ಥಾತ್ ಅಕ್ಷಯ ಪಾತ್ರೆ ! ಅದಕ್ಕೆ ಹೇಗೆ, ಎಲ್ಲಿಂದ ಹಣ ಬಂದು ಬೀಳುತ್ತದೆಂಬುದನ್ನು ಕೇಳಬಾರದು. ಅದು ಯಕ್ಷಪ್ರಶ್ನೆ. ಅದಕ್ಕೆ ಹೆಚ್ಚು ಮಹತ್ವವಿಲ್ಲ. ಹೇಗೆ ಹಂಚಿಹೋಗುತ್ತದೆ ಎಂಬುದು ಮುಖ್ಯ. ಮೆಡಿಕಲ್ ಸೀಟಿಗೆ ಡೊನೇಶನ್ ಕೊಟ್ಟು ಕಲಿತ ಡಾಕ್ಟರ್, ಮುಂದೆ ವರೋಪಚಾರ, ವರದಕ್ಷಿಣೆ, ಸ್ಯಾಂಪಲ್ ಬಂದ ಮೆಡಿಸನುಗಳ ಮಾರಾಟ ಹೀಗೆ ಕಳೆದುಕೊಂಡ ಹಣವನ್ನು ಪಡೆದುಕೊಳ್ಳುವ ಬಯಕೆಯಲ್ಲಿದ್ದಂತೆ ಎಮ್ಮೆಲ್ಯೆ, ಎಂಪಿ, ಕೌನ್ಸಿಲರ್, ಕಾರ್ಪೊರೇಟರ್ ಅಭ್ಯರ್ಥಿಗಳ ನಿಲುವು, ಲಕ್ಷ ಕಳೆದುಕೊಂಡರೇನಾಯಿತು ? ಮುಂದೆ ಇಲೆಕ್ಷನ್‌ನಲ್ಲಿ ಗೆದ್ದರೆ ಅದರ ನೂರು ಪಟ್ಟು ಗಿಟ್ಟಿಸೋಕೆ ಆಗೋಲ್ವಾ ? ಎಂಬ ಧೈರ್ಯ ಅವರದ್ದು.

ಇಲೆಕ್ಷನ್ ಸಮಯದಲ್ಲಿ ನಮ್ಮೂರ ಅಬ್ಬೂಬ್ಯಾರಿಯ ಕಲಾಯಿ ಅಂಗಡಿ ಪಕ್ಷಗಳ ಬಿಲ್ಲೆಗಳನ್ನು ತಯಾರಿಸುವ ಟಂಕಸಾಲೆಯಾಗುತ್ತದೆ. ಮೋನಪ್ಪ ಆಚಾರಿಯ ಜೀಡಾ ಅಂಗಡಿ ವಾಲ್ ಪೋಸ್ಟರ್, ಬ್ಯಾನರುಗಳನ್ನು ತಯಾರಿಸುವ ಕರ್ಮಶಾಲೆಯಾಗುತ್ತದೆ. ಅಂತಪ್ಪಯ್ಯನ ಚಿಕ್ಕ ನೊಣ ಓಡಿಸುವ ರೇಡಿಯೋ ರಿಪೇರಿ ಅಂಗಡಿ - ರಿಕ್ಷಾ, ಕಾರುಗಳಲ್ಲಿ ಒದರುತ್ತಾ ಓಡುವ ಮೈಕ್-ಆಂಪ್ಲಿಫಯರ್‌ಗಳನ್ನು ರಿಪೇರಿ ಮಾಡುವ ಕಾರ್ಖಾನೆಯಾಗುತ್ತದೆ. ಹೆಚ್ಚೇಕೆ ? ಥೋಮಸ್ ಸೋಜಾರ್ ಗ್ಲಾಸ್ ಅಲ್ಯುಮಿನಿಯಂ ಪ್ಲೇಟುಗಳ ಮಿಲಿಟ್ರಿ ಹೋಟೆಲಿಗೆ ಆಫೀಸುಗಳ ಪಾರ್ಟಿಗೆ



ಸರಬರಾಜು ಮಾಡಲಿಕ್ಕಾಗಿ ಕಪ್ ಸಾಸರ್ ಸ್ಟೀಲ್ ಪ್ಲೇಟುಗಳು ಬರುತ್ತವೆ! ಇವರೆಲ್ಲರಿಗೂ ಇಲೆಕ್ಷನ್ ಎಂದರೆ ಸುಗ್ಗಿ. ಆಗಿನ ಕಲೆಕ್ಷನ್ ಅಪಾರ!

ಒಂದೂವರೆ ಕಾಲಿನ ಮೋಂಟು ಕುಡ್ಡು ಅಲ್ಲಲ್ಲಿ ರೂಪಾಯಿ, ಎಂಟಾಣೆ ಕಾಡಿ ಬೇಡಿ ಶೇಂದಿ ಕುಡಿಯುತ್ತಿದ್ದಾಗ ಇಲೆಕ್ಷನ್ ಸಮಯದಲ್ಲಿ ವೈನ್ ಶಾಪಿನಲ್ಲಿ, ಗೇರು ಬೀಜಸಹಿತ ಟ್ರಿಬಲ್ ಎಕ್ಸ್ ರಂ ಕುಡಿಯುತ್ತಾನೆ. ಯಾವ ಪಾರ್ಟಿಯೇ ಆಗಿರಲಿ, ಒಂದು ಕ್ವಾರ್ಟರ್ ಕೊಟ್ಟ ದಿನ ಆ ಪಾರ್ಟಿಯನ್ನುಳಿದು ಬೇರೆ ಪಾರ್ಟಿಗಳನ್ನು ವಾಚಾಮಗೋಚರವಾಗಿ ಬೈತಾನೆ. ನಾಳೆ ಆ ಪಾರ್ಟಿಯವರು ಕೊಟ್ಟರೆ ಅವರನ್ನು ಮಾತ್ರ ಹೊಗಳಿ ಉಳಿದವರನ್ನು ಬಯ್ಯಬಹುದು. ಅದು ಬೇರೆ ವಿಚಾರ.

ಆಂಜನೇಯ ಗುಡಿ, ಶನೀಶ್ವರ ಗುಡಿ, ಗಣಪತಿ ದೇವಸ್ಥಾನ, ಅಮ್ನೋರ ದೇವಾಲಯದ ಅರ್ಚಕರಿಗೂ ಇದು ಪರ್ವಕಾಲ. ನಾಮಪತ್ರ ಸಲ್ಲಿಸುವ ದಿನ, ಪಕ್ಷ ಪ್ರಚಾರ ಪ್ರಾರಂಭಿಸುವ ದಿನ, ಪ್ರಚಾರ ಸಭೆಯ ದಿನ, ಇಲೆಕ್ಷನ್ ದಿನ, ಓಟು ಲೆಕ್ಕಾಚಾರದ ದಿನ ಇವೆಲ್ಲವುಗಳಲ್ಲೂ ದೇವರ ಗುಡಿಗಳು ಮತಾಕಾಂಕ್ಷಿಗಳಿಂದ ತುಂಬಿ ಗಿಜಿಗುಟ್ಟಲ್ಪಡುತ್ತವೆ. 'ಹೇಗಾದರೂ ಮಾಡಿ ಈ ಬಾರಿ ಗೆಲ್ಲಿಸಪ್ಪಾ' ಎಂದು ಗಣಪತಿ ಡಬ್ಬಕ್ಕೆ ಐದೇ ಹಾಕಿ ಪೂಜಾರಿಗಳಿಗೆ ಐವತ್ತು ದಕ್ಷಿಣೆ ಕೊಟ್ಟಾಗ ಭಟ್ಟರೂ ಭರ್ಜರಿಯಾಗಿ ಪ್ರಾರ್ಥಿಸುತ್ತಾರೆ. ಏಕೆಂದರೆ ದೇವರ ಡಬ್ಬಕ್ಕಿಂತ ದೇವರನ್ನು ನಿರ್ದೇಶಿಸುವ ಪೂಜಾರಿಗಳ ಮಾತಿಗೆ ದೇವರು ಬೆಲೆ ಕೊಡ್ತಾನೆ ಎಂಬ ದೃಢ ನಂಬಿಕೆ ಅವರಿಗೆ! ಹಾಗಾಗಿ ಬಾಯಿಬಾರದ ದೇವರ ಡಬ್ಬಕ್ಕಿಂತ ಕಣ್ಮುಚ್ಚಿ ಪ್ರಾರ್ಥನೆ ಮಾಡಿ ಪ್ರಸಾದ ಕೊಡುವ ಪೂಜಾರಿಗಳು ದುಬಾರಿ.

ಬೇರೆ ದಿನಗಳಲ್ಲಿ ದಿನಕ್ಕೆ ಹತ್ತೇ ಗಂಟೆ ಕಾರ್ಯ ನಿರ್ವಹಿಸುವ ವೈನು ಶಾಪುಗಳಿಗೆ ಇಲೆಕ್ಷನ್ ಪರ್ವಕಾಲದಲ್ಲಿ ದಿನಕ್ಕೆ ಇಪ್ಪತ್ತನಾಲ್ಕು ಗಂಟೆಯೂ ಸಾಲದು ಎನ್ನುವ ಅನುಭವವಾಗುತ್ತದೆ.

ದಿನಕ್ಕೆ ನೂರಕ್ಕಿಂತ ಹೆಚ್ಚು ಬಾಡಿಗೆ ಕಾಣದ, ನೂಕಿ ಗುಡುಗುಡಿಸುವ ಹಳೇ ಲೇಂಡ್ ಮಾಸ್ಟರ್ ಟ್ಯಾಕ್ಸಿಗಳಿಗೂ ಇಲೆಕ್ಷನ್ ಬಂತೆಂದರೆ ಪರ್ವಕಾಲ! ನವ ಚೈತನ್ಯ! ಓಣಿ ಓಣಿಗಳಲ್ಲಿ, ಗಲ್ಲಿ ಗಲ್ಲಿಗಳಲ್ಲಿ, ಓಡಾಡಿ ಸಾಕಷ್ಟು ಎಣ್ಣೆ ಕುಡಿದು (ಗಾಡಿ ಹಾಗೂ ಅದರ ಮಾಲಿಕ ಕೂಡಾ!) ತಿರುಗುವ ಅವುಗಳಲ್ಲಿ ಪಕ್ಷ ಪ್ರಚಾರ ಕಾರ್ಯ ನಡೆಯುತ್ತದೆ. ಆದಾಯವೂ ಒಳ್ಳೆಯದಾಗಿ ಮುಂದೆ ಅಲ್ಪಸ್ವಲ್ಪ ರಿಪೇರಿಗೂ ಅನುಕೂಲವಾಗುತ್ತದೆ.

ದೈನಿಕಗಳಿಗಂತೂ ಬಿಡಿ. 'ಈ ಪಕ್ಷದ ಉಮೇದ್ವಾರ, ಪರೋಪಕಾರದ ಕಾಳಜಿಯಿರುವ ಭಾರತದ ಸುಪುತ್ರ ಶ್ರೀಯುತ... ಇವರು ಬಡವರ ಬಂಧು (ಕೈಬಿಟ್ಟು ಬೇಡುವವನಿಗೆ ಹತ್ತು ಪೈಸೆಯೂ ಈವರೆಗೆ ಕೊಡದಿದ್ದರೂ!) ದೀನ ದಲಿತರ ಉದ್ಧಾರಕ್ಕಾಗಿಯೇ ಈಗ ಓಟಿಗೆ ನಿಂತಿರುವುದು, ನಿಸ್ವಾರ್ಥ ಸೇವಾತತ್ವದ ಸೇವಾ ಧುರಂಧರ, ರಾಮರಾಜ್ಯದ ಕನಸು (?) ಕಾಣುವವ' ಎಂದೆಲ್ಲಾ ಹಣೆಬರಹಗಳ ಸಹಿತ ಫೋಟೋಗಳು ಸಹಿತ ಪತ್ರಿಕೆಗಳಲ್ಲಿ ಜಾಹೀರಾತುಗಳಿಂದ ಮೆರೆಯುತ್ತವೆ. ರಸ್ತೆ, ಪಾಗಾರ, ಚರಂಡಿ, ಗಟಾರಗಳಲ್ಲೂ ಅವರ ಹೆಸರು ಪೋಸ್ಟರ್‌ಗಳ ಮೂಲಕ ವಿಜೃಂಭಿಸುತ್ತದೆ. ಈ ಜಾಹೀರಾತು, ಭಾಷಣಗಳ ಪ್ರಕಾರ ಓಟಿಗೆ ನಿಂತವರೆಲ್ಲಾ ಅತ್ಯಂತ (!) ಒಳ್ಳೆಯವರು. ನಮ್ಮನ್ನು ಉದ್ಧಾರ ಮಾಡುವವರು! ಹತ್ತು ಜನ ನೋಡುತ್ತಿರುವಾಗ ಸೈಕಲ್ಲಿನಡಿಗೆ ಬಿದ್ದು ಬೇಡುವವನೊಬ್ಬನನ್ನು ಕಾರಿಂದ ಇಳಿದು ಹತ್ತಿರ ಹೋಗಿ ''ತಿಪ್ಪಾ... ಆಸ್ಪತ್ರೆ ಸೇರು'' ಎಂದು ಎಲ್ಲರ ಎದುರಿಗೇ ಅವನಿಗೆ ಇಪ್ಪತ್ತೈದು ಕೊಟ್ಟು ತನ್ನ ಕಾರಲ್ಲೇ ಆಸ್ಪತ್ರೆಗೆ ಸೇರಿಸಿದ ಓಟಿನ ಅಭ್ಯರ್ಥಿಯ ಹೆಸರು ನಾಳೆಯ ಪತ್ರಿಕೆಗಳಲ್ಲಿ ದಪ್ಪವಾಗಿ ಮೂಡಿಬರುತ್ತದೆ. ಭಿತ್ತಿಪತ್ರ, ಚುನಾವಣ ಕರಪತ್ರಿಕೆ, ಭಾಷಣಗಳ ಪ್ರಕಾರ ಪ್ರತಿಯೊಬ್ಬ ಅಭ್ಯರ್ಥಿಗೂ ದೇಶೋದ್ಧಾರ, ದೀನ ದಲಿತರ ಸೇವೆ, ರಾಮರಾಜ್ಯದ ಹೊರತು ನಮ್ಮ ಸ್ವಾರ್ಥದ ಯಾವ ಚಿಂತನೆಯೂ ಇರುವುದಿಲ್ಲಾ ಎಂದು ಅವರನ್ನು ನಂಬಲೇಬೇಕಾಗುತ್ತದೆ. ಮನೆಯ ಗೇಟಿನತ್ತ ಹೋದರೆ ನಾಯಿ ಬಿಡುವ ಅತಿರಥ ಮಹಾರಥರು ಐದು ವರ್ಷ ಮುಖ ತೋರಿಸದಿದ್ದರೂ ನಮ್ಮ ಮನೆ ಬಾಗಿಲಿಗೆ ಬಂದು ತಮ್ಮ ಎರಡೂ ಪವಿತ್ರ ಕೈಗಳನ್ನು ಜೋಡಿಸಿ 'ಓಟು ನಮಗೆ ಹಾಕಿ' ಎನ್ನುತ್ತಾರೆ!

ಆ ಪಕ್ಷ ಬಿಡಿ, ಈ ಪಕ್ಷ ಬಿಡಿ ಎಲ್ಲಾ ನೋಡಿಯಾಯ್ತು, ನಮ್ಮದು ನಿಸ್ವಾರ್ಥ ದೇಶ ಸೇವೆಯ ಹೊಸ ಪಕ್ಷ ಎಂದು ಆ ಪಕ್ಷದಲ್ಲೂ, ಈ ಪಕ್ಷದಲ್ಲೂ ಎಷ್ಟು ಪ್ರಯತ್ನಿಸಿದರೂ ಸೀಟು ಸಿಗದ ದೇಶ ಸೇವಾಕಾಂಕ್ಷಿಗಳಿಂದ ಹೊಸ ಪಕ್ಷಗಳ ಉದಯವಾಗುವುದೂ ದೇಶ ಸೇವೆಗಾಗಿಯೇ. ಇಂಗ್ಲಿಷ್ ಅಕ್ಷರಮಾಲೆಯಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟೂ ಅಕ್ಷರಗಳಿಂದ ಗುರುತಿಸಲ್ಪಟ್ಟ ಮುಖ್ಯ ಪಾರ್ಟಿಗಳ ರೆಂಬೆ ಕೊಂಬೆಗಳು ಪಕ್ಷಗಳ ಒಳ ಜಗಳದಿಂದ ಛಿದ್ರ ಛಿದ್ರವಾದರೂ ಎಲ್ಲರ ಘಂಟಾ ಘೋಷಗಳೂ ಒಂದೇ. 'ದೇಶ ಸೇವೆ' ಬಿಟ್ಟು ಬೇರೆ ಏನೂ ಅವರಿಗೆ ಗೊತ್ತಿಲ್ಲವಲ್ಲ!

ಇಲೆಕ್ಷನ್‌ನಿಂದ ಕಲೆಕ್ಷನ್ ಆಗುವುದು ಪೆಟ್ರೋಲ್ ಬಂಕು, ಪ್ರೆಸ್, ಟ್ಯಾಕ್ಸಿ, ಆಟೋ, ಪೈಂಟರ್, ಮೈಕ್ ಲೈಟಿನವರು ಹಾಗೂ ಶೇಂದಿ, ಶರಾಬು, ಬ್ರಾಂದಿ ಅಂಗಡಿಗಳಿಗೆ. ಬ್ರಾಂದಿ ಅಂಗಡಿಗಳಲ್ಲಂತೂ ಅಹೋರಾತ್ರಿ ಉತ್ಸವ. ಇವರೆಲ್ಲರಿಗೆ 'ಇಲೆಕ್ಷನ್' ಎಂಬುದೊಂದು 'ಕಲೆಕ್ಷನ್'ನ ನಾಂದಿಯ ನಂದಾದೀಪ! ಹೀಗೆಂದು ಕೂಸಪ್ಪನ ಹತ್ತಿರ ಚರ್ಚಿಸಿದರೆ ಆತ ಜರ್ದಾ ತಂಬಾಕು ತಿಂದು ಉಗುಳಿದ ಕೆಂಪು ಹಲ್ಲುಗಳ ಬಾನ್ನಷ್ಟು ಅಗಲಿಸಿ ''ನೋಡ್ರಪಾ. ಆ ಪಕ್ಷ ಇಷ್ಟು ಕೊಡ್ತಾರೇಂತ, ಸುಳ್ಳು ಹೇಳಿದ್ರೂ, ಈ ಪಕ್ಷ ಅದಕ್ಕಿಂತ ಹೆಚ್ಚು ನಾವು ಕೊಡ್ತೇವೆ. ನಮಗೆ ಬರೆದು ಕೊಡು ಪದ್ಯ ಅಂತಾರೆ. ಕೊಡುತ್ತಾರೆ ಕೂಡ. ಇದನ್ನು ಆ ಪಕ್ಷದವರ ಹತ್ತಿರ ಸ್ವಲ್ಪ ಬಣ್ಣ ಬದಲಾಯಿಸಿ ಹೇಳಿದರೆ ವ್ಯಾಪಾರ ಇನ್ನೂ ಕುದುರುತ್ತದೆ. ಮಧ್ಯಂತರ ಚುನಾವಣೆ ಬರದಿದ್ದರೆ ಇವರು ನಮ್ಮನ್ನು ಐದು ವರ್ಷ ಮೂಸಿಯಾದರೂ ನೋಡುತ್ತಿದ್ರಾ. ಈಗ ನಮ್ಮಂಥವನಿಗೆ 'ದಕ್ಕಿದಾಗ ಮುಕ್ಕಿದಷ್ಟೇ ಬಂತು.' ಇದಕ್ಕಿಂತ ಹೆಚ್ಚು ಸುಡುಗಾಡು ದೇಶೋದ್ಧಾರ ಅವನೇನು ಮಾಡ್ತಾನೆ'' ಎಂದು ಕೂಸಪ್ಪ ದೇಶಾವರಿ ನಗು ನಗ್ತಾನೆ.

**ಕೆ. ರಾಘವೇಂದ್ರ ಭಟ್**
೮-೩-೫೧, ಕಟ್ಟೆ ಆಚಾರ್ಯ ಮಾರ್ಗ ಕುಂಜಿಬೆಟ್ಟು
ಉಡುಪಿ - ೫೭೬ ೧೦೨

---

*೧೭ನೇ ಪುಟದಿಂದ (ಮೂಢನಂಬಿಕೆ...)*

ಮಾಧ್ಯಮಗಳಲ್ಲಿ ಮಿಂಚುತ್ತಿರುತ್ತಾರೆ. ಕಳೆದ ೮೦ನೇ ದಶಕದಲ್ಲಿ ಪುಟ್ಟಪರ್ತಿಯ ಸತ್ಯಸಾಯಿ ಬಾಬಾ ಒಂದು ಭಾರೀ ವಿವಾದಕ್ಕೆ ಒಳಗಾಗಿದ್ದರು. ಅವರು ಆಗಾಗ ತಮ್ಮನ್ನು ಭೇಟಿಯಾದ ಗಣ್ಯವ್ಯಕ್ತಿಗಳಿಗೆ ಉಂಗುರ, ಗಡಿಯಾರ ಅಥವಾ ಬೂದಿ ಇತ್ಯಾದಿಗಳನ್ನು ಗಾಳಿಯಿಂದ ಸೃಷ್ಟಿಸಿ ನೀಡುತ್ತಿದ್ದರು ಎಂದು ಮಾಧ್ಯಮಗಳಲ್ಲಿ ವರದಿಯಾಗುತ್ತಿತ್ತು. ಆ ವೇಳೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ|| ಎಚ್. ನರಸಿಂಹಯ್ಯ ಅವರು ಸತ್ಯಾನ್ವೇಷಣೆ ಮಾಡಲು ಬಾಬಾ ಅವರನ್ನು ಸಂದರ್ಶಿಸ ಬಯಸಿದರು. ಬಾಬಾ ಅವರ ಮೂರು ಪತ್ರಗಳನ್ನೂ ಮೌನವಾಗಿ ತಿರಸ್ಕರಿಸಿದರು. ಆಗ ಡಾ|| ಎಚ್. ಎನ್. ಅವರು ಉಂಗುರ, ಗಡಿಯಾರಗಳಿಗೆ ಬದಲು ಒಂದು ಕುಂಬಳಕಾಯಿಯನ್ನು ಸೃಷ್ಟಿಸಿ ಕೊಡಲಿ ಎಂದು ಸಾರ್ವಜನಿಕ ಸವಾಲು ಹಾಕಿದರು. ಅಲ್ಲಿಂದ ಮುಂದೆ ಬಾಬಾ ಅವರ ಪವಾಡಗಳ ಸುದ್ದಿ ಬಯಲಿಗೆ ಬರಲಿಲ್ಲ.

**ಶುಭಾಶುಭ ಶಕುನಗಳು**

ನಾವು ಇಂದು ೨೧ನೇ ಶತಮಾನದಲ್ಲಿ ಮುನ್ನಡೆಯುತ್ತಿದ್ದರೂ ಓಬೀರಾಯನ ಕಾಲದ ಮೂಢನಂಬಿಕೆಗಳಿಗೇ ಜೋತುಬಿದ್ದಿದ್ದೇವೆ ಎಂಬುದನ್ನು ದಿನನಿತ್ಯದ ಜೀವನದಲ್ಲಿ ಕಾಣಬಹುದು. ಮಗು ಮುಂಜಾನೆ ಮೇಲೇಳುವಾಗ ಬಲಮಗ್ಗಲಿನಿಂದಲೇ ಏಳಬೇಕು, ಎಡಮಗ್ಗಲಿಂದ ಎದ್ದರೆ ಕೇಡು ಎಂಬುದನ್ನು ತಾಯಿಯ ಬಾಯಿಂದ ದಿನೇದಿನೇ ಕೇಳಿದ ಮಗು ಸಹಜವಾಗಿಯೇ ಆ ಮೂಢನಂಬಿಕೆಗೆ ಬಲಿಯಾಗಬೇಕಾಗುತ್ತದೆ. ದಾರಿಯಲ್ಲಿ ಬೆಕ್ಕು ಅಡ್ಡ ಬಂದರೆ ಹೋದ ಕೆಲಸ ಆಗುವುದಿಲ್ಲ, ಮಂಗಳವಾರ ಅಮಂಗಳ, ಶನಿವಾರದಂದು ಶುಭಕಾರ್ಯ ಮಾಡಬಾರದು ಎಂಬುದು ಕೆಲವರಿಗೆ ಸನಾತನ ನಂಬಿಕೆಯಾಗಿದೆ. ಹಲ್ಲಿ ಮೈಮೇಲೆ ಬಿದ್ದರೆ ಕೆಡಕು, ಒಂದು ಸೀನು ಕೆಟ್ಟ ಶಕುನ, ಎರಡು ಸೀನು ಒಳ್ಳೆಯದು ಇತ್ಯಾದಿ ಎಷ್ಟೋ ಮೂಢನಂಬಿಕೆಗಳು ಇಂದಿಗೂ ಮುಗ್ಧ ಜನರ ಮನಸ್ಸುಗಳನ್ನು ನಿಯಂತ್ರಿಸುತ್ತಿವೆ.

ವೈಜ್ಞಾನಿಕ ಮನೋಭಾವ, ಸತ್ಯಾನ್ವೇಷಣೆ ಮತ್ತು ಮಾನವೀಯ ಮೌಲ್ಯಗಳನ್ನು ಬೆಳೆಸುವುದು ಪ್ರತಿಯೊಬ್ಬ ಪ್ರಜೆಯ ಮೂಲಭೂತ ಕರ್ತವ್ಯ ಎಂದು ನಮ್ಮ ಸಂವಿಧಾನದ ೫೧/ಎ ಅಧಿನಿಯಮದ (ಎಚ್) ವಿಭಾಗ ಸಾರಿ ಹೇಳುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಾಥಮಿಕ ಶಾಲೆಯಿಂದಲೇ ಈ ಮೌಢ್ಯವನ್ನು ನಿವಾರಿಸಿ ವೈಜ್ಞಾನಿಕ ಮನೋಭಾವ ಬೆಳೆಸುವಂತಹ ಪಾಠಗಳು ಮತ್ತು ಪಠ್ಯೇತರ ಚಟುವಟಿಕೆಗಳನ್ನು ಅಳವಡಿಸಿ, ಮೌಲ್ಯಾಧಾರಿತ ಶಿಕ್ಷಣ ವ್ಯವಸ್ಥೆ ಜಾರಿಗೆ ತರಬೇಕಾದುದು ತುಂಬಾ ತುರ್ತಾಗಿ ಆಗಬೇಕಾದ ಕೆಲಸವಾಗಿದೆ.

**ಪ್ರೊ|| ಬಿ. ವಿ. ವೀರಭದ್ರಪ್ಪ**
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

೫ನೇ ಪುಟದಿಂದ (ಸಂಪಾದಕೀಯ...)

ಅವರ ವಿಶ್ಲೇಷಣೆ ಹೀಗಿದೆ : ೧೯೭೪ರಿಂದ ೧೯೯೮ರ ವರೆಗೆ ನಮ್ಮ ದೇಶದಲ್ಲಿ ಅಣುಶಕ್ತಿಯ ಇಂಧನದಿಂದ ವಿದ್ಯುಚ್ಛಕ್ತಿಯ ಉತ್ಪಾದನೆ ಕುಂಟುತ್ತಾ ಸಾಗಿದೆ; ಆದರೆ ಈಗಿನ ಒಪ್ಪಂದದಿಂದಾಗಿ ''ಮುಂದುವರಿದ ದೇಶಗಳ ಪರಮಾಣು ತಂತ್ರಜ್ಞಾನವು ನಮಗೆ ಎಟಕುವಂತಾಗುತ್ತದೆ'' ಮತ್ತು ಅದರ ಫಲವಾಗಿ ನಾವು ದಾಪುಗಾಲು ಹಾಕುತ್ತೇವೆ. ಪರಮಾಣು ಕೇಂದ್ರಿತ ಸಂಶೋಧನೆ, ಸ್ಥಾವರಗಳ ಕಾರ್ಯಾಚರಣೆ, ಮುಂತಾದ ಕೆಲಸಗಳಲ್ಲಿ ಈಗ ೫೦,೦೦೦ ಮಂದಿ ಇರುವುದು ಗಮನಾರ್ಹವಾಗಿ ಹೆಚ್ಚುತ್ತದೆ (ಅಂದರೆ, ಹೊಸ ಉದ್ಯೋಗಾವಕಾಶಗಳಿರುತ್ತವೆ).

ಮಾನ್ಯ ಶ್ರೀನಿವಾಸನ್‌ರವರ ವಾದವು ಹೀಗೇ ಮುಂದುವರಿಯುತ್ತದೆ. ''ನರಕದ ಹಾದಿಯುದ್ದಕ್ಕೂ ಒಳ್ಳೆಯ ಆಶಯಗಳೇ ಹಾಸುಗಲ್ಲುಗಳಾಗಿವೆ'' ಎಂಬ ನಾಣ್ಣುಡಿಯೊಂದಿದೆ. ಆಶಯಗಳು ಯೋಜನೆಗಳೆಲ್ಲವುಗಳ ಸಮರ್ಥನೆ ಆಗಲಾರವು, ಏಕೆಂದರೆ ಅವುಗಳೊಟ್ಟಿಗೆ ಹೊಸ ಆತಂಕಗಳೂ ನಿರ್ಮಾಣಗೊಳ್ಳುತ್ತವೆ. ನಮ್ಮ ತಥಾ ಕಥಿತ ಪರಮಾಣು ನಾಗರಿಕ ಸೌಲಭ್ಯಗಳನ್ನು ಅಮೆರಿಕಾ ಆದೇಶದಂತೆ ನಡೆದುಕೊಳ್ಳುವ ಅಂತರರಾಷ್ಟ್ರೀಯ ಪರಮಾಣು ನಿರೀಕ್ಷಣಾ ಆಯೋಗದ ಮರ್ಜಿಗೆ ಗುರಿಪಡಿಸುವುದು ಅಪಾಯಕರ. ಅಂತಹ ಆಯೋಗವು ಇರಾಕಿನಲ್ಲಿ ಮಾಡಿದ್ದೇನು ಮತ್ತು ತನ್ನ ತೀರ್ಮಾನಗಳನ್ನು ಸಮರ್ಥಿಸಿಕೊಳ್ಳಲು ಅಮೆರಿಕಾದೆದುರು ಆಯೋಗಕ್ಕೆ ಸಾಧ್ಯವಾಗಲಿಲ್ಲವೇಕೆ ? ಶ್ರೀನಿವಾಸನ್‌ರವರು ನಿರೀಕ್ಷಿಸುವ ಪ್ರಮಾಣದಲ್ಲಿ ಪರಮಾಣು ಶಕ್ತಿ ಆಧಾರಿತ ವಿದ್ಯುಚ್ಛಕ್ತಿ ಉತ್ಪಾದನೆ ಆಗದಿರಲು ಅನೇಕ ಅಡಚಣೆಗಳಿರುತ್ತವೆ. ಉತ್ಪಾದನೆಯ ಪ್ರಮಾಣ ಹೆಚ್ಚದಿದ್ದರೂ ಹಣದ ವ್ಯಯದ ಪ್ರಮಾಣ ಹೆಚ್ಚುತ್ತದೆ ಮತ್ತು ದೇಶದಲ್ಲಿ ಆರ್ಥಿಕ ಏರುಪೇರುಗಳು ಉಲ್ಬಣಗೊಳ್ಳುತ್ತವೆ. ಇನ್ನಷ್ಟು ಗುರ್‌ಗಾಂವ್ ಮಾದರಿಯ ಪ್ರಭುತ್ವದ ಹಿಂಸೆಗೆ ಇದು ಹಾದಿಮಾಡಿಕೊಡುತ್ತದೆ. ಇನ್ನು ಮಿಲಿಟರಿ ಉಪಯೋಗದ ಪರಮಾಣು ಶಕ್ತಿಯ ಯೋಜನೆಗಳು ದೇಶದ ಸುಭದ್ರತೆಯನ್ನು ಹೆಚ್ಚಿಸುವುದರ ಬದಲು ಅರಕ್ಷತೆಯನ್ನು ವ್ಯಾಪಕಗೊಳಿಸುತ್ತವೆ, ಶಸ್ತ್ರಾಸ್ತ್ರ ಪೈಪೋಟಿಯನ್ನು ಆಕಾಶದೆತ್ತರಕ್ಕೇರಿಸಿ ನಮ್ಮ ಆರ್ಥಿಕತೆಗೆ ಚಿರಕಾಲದ ವಾತರೋಗ ಬಡಿಯುವಂತೆ ಮಾಡುತ್ತವೆ. ಆದ್ದರಿಂದ ಈಗಿನ ಭಾರತ-ಅಮೆರಿಕಾ ಒಪ್ಪಂದವು ದೇಶದ ಹಿತಕ್ಕೆ ಮಾರಕವಾಗಿದೆ.

ಇದರೊಟ್ಟಿಗೆ ನಮ್ಮ ಖಂಡದ ಭೌಗೋಳಿಕ ರಾಜಕೀಯವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಅಮೆರಿಕಾಕ್ಕೆ ಈ ಭಾಗದಲ್ಲಿ ಎಷ್ಟು ನೆಲೆಗಳು ಸಿಕ್ಕಿದರೂ ಸಾಲದು; ಏಕೆಂದರೆ ಇನ್ನೂ ಅದರ ಚೀಣಾ-ರಷ್ಯ ವಿರೋಧ ಹಾಗೂ ಭೀತಿ ಕುಗ್ಗಿಲ್ಲ. ಮಧ್ಯ ಏಷ್ಯದ ಸನ್ನಿವೇಶವು ಇದಕ್ಕೆ ಸೂಚನೆ ನೀಡುತ್ತಿದೆ. ಕೋಟಿಗಟ್ಟಲೆ ಡಾಲರುಗಳನ್ನು ಸುರಿದು ಅಲ್ಲಿಯ ಅನೇಕ ದೇಶಗಳಲ್ಲಿ ಅಮೆರಿಕಾ ಪರವಾದ ಪ್ರಭುತ್ವಗಳನ್ನು ಸ್ಥಾಪಿಸುತ್ತಿರುವವರು ಯಾರು ? ಭಾರತವು ಇಂತಹ ರಾಜಕೀಯದಲ್ಲಿ ಸಿಲುಕಿಕೊಳ್ಳ ಬೇಕೆ ? ನಮ್ಮ ಪರಮಾಣು ನೀತಿಯು ಕ್ರಮೇಣ ದೇಶವನ್ನು ಆ ದಿಕ್ಕಿನಲ್ಲಿ ನೂಕುತ್ತದೆ ಎಂಬುದನ್ನು ಗಮನಿಸಬೇಕು. ಬೇರೆ ದೇಶಗಳ ಸಂಪತ್ತನ್ನು ಲೂಟಿಮಾಡಲು ತನ್ನ ಮಿಲಿಟರಿ ಹಾಗೂ ಡಾಲರು ಶಕ್ತಿಯನ್ನು ಪ್ರಯೋಗಿಸಲು ಅಮೆರಿಕಾಕ್ಕೆ ಭಾರತವು ನೆಲೆ ನೀಡಕೂಡದು. ಅದು ಮಾನವ ವಿರೋಧಿಯಾದುದು. ಬ್ರಿಟನ್ ಮತ್ತು ಅಮೆರಿಕಾಗಳಲ್ಲಿ ಇನ್ನೊಂದೆರಡು ಬಾಂಬುಗಳು ಬಿದ್ದರೆ ಸಂದರ್ಭ ಹೇಗೆ ಬಿಚ್ಚಿಕೊಳ್ಳುತ್ತದೆ ಎಂಬುದನ್ನು ಖಚಿತವಾಗಿ ಹೇಳಬರುವುದಿಲ್ಲ. ಅಫ್ಘಾನಿಸ್ತಾನದಲ್ಲಿ ಜನಕ್ರಾಂತಿಯ ಫಲವಾಗಿ ಬಂದಿದ್ದ ಸರ್ಕಾರಗಳನ್ನುರುಳಿಸಲು ಅಮೆರಿಕಾ ತಾಲಿಬಾನರನ್ನು ಪ್ರೋತ್ಸಾಹಿಸಿ ಅವರಿಗೆ ಮಿಲಿಟರಿ ಶಸ್ತ್ರಾಸ್ತ್ರಗಳನ್ನು ಪೂರೈಸಿತು. ಅವರ ಕೆಲವು ಪ್ರತಿನಿಧಿಗಳನ್ನು ಅಮೆರಿಕಾದ ಅಧ್ಯಕ್ಷ ವಾಷಿಂಗ್‌ಟನ್ನಿನ ಶ್ವೇತ ಭವನಕ್ಕೆ ಆಹ್ವಾನಿಸಿ ಪುರಸ್ಕರಿಸಿದ್ದ, ಅವರನ್ನು ಪ್ರಜಾಪ್ರಭುತ್ವದ ಪರವಾದ ಹೋರಾಟಗಾರರೆಂದು ಶ್ಲಾಘಿಸಿದ್ದ, ಅವರು ಥಾಮಸ್ ಜೆಫರ್ಸನ್ನಿಗೆ ಸಮಾನರೆಂದು ಉತ್ಪ್ರೇಕ್ಷಿಸಿದ್ದ. ನಂತರದ ವರ್ಷಗಳಲ್ಲಿ ಅವರನ್ನು ಬೇಟೆಯಾಡಲು ಅಫ್ಘಾನಿಸ್ತಾನಕ್ಕೆ ಬೆಂಕಿ ಇಟ್ಟಿದ್ದೂ ಇದೇ ಅಮೆರಿಕಾ. ನಿನ್ನೆಯ ಅಫ್ಘಾನಿಸ್ತಾನದಂತೆ ನಾಳೆಯ ಪಾಕಿಸ್ತಾನ ಪರಿಣಮಿಸಲಾಗದೆಂದು ಹೇಗೆ ಹೇಳುವುದು ? ಬಿನ್ ಲಾಡೆನ್ನನ್ನು ಹಿಡಿಯಲು ಅಫ್ಘಾನಿಸ್ತಾನದ ಜನರನ್ನು ಕೊಂದ ಅಮೆರಿಕಾ ಅವನನ್ನು ಮತ್ತೆ ಸುತ್ತುವರಿಯಲು ಪಾಕಿಸ್ತಾನದ ಉತ್ತರ ಭಾಗದಲ್ಲಿ ಬಾಂಬ್ ದಾಳಿ ಮಾಡುವುದಿಲ್ಲವೆಂದು ನಂಬಲಾದೀತೆ ? ಅಫ್ಘಾನಿಸ್ತಾನಕ್ಕೆ ಕೊಳ್ಳಿಯಿಡಲು ಮಧ್ಯ ಏಷ್ಯಾದ ದೇಶಗಳ ನೆಲೆಗಳು ಉಪಯುಕ್ತವಾದವು. ನಾಳೆ ಪಾಕಿಸ್ತಾನಕ್ಕೆ ''ಬುದ್ಧಿ ಕಲಿಸಲು'' ಭಾರತದ ನೆಲೆಗಳು ಅಮೆರಿಕಾದ ವಶಕ್ಕೆ ಹೋಗುವುದು ಖಂಡಿತ ಕೂಡದು. ನಮ್ಮ ಪ್ರಧಾನಿಗೆ ವಾಷಿಂಗ್‌ಟನ್ನಿನಲ್ಲಿ ನೀಡಲಾದ ವೈಭವೋಪೇತ ಸ್ವಾಗತ ಸಮಾರಂಭಗಳು ಉದ್ದೇಶರಹಿತವಲ್ಲ. ಅವನ್ನು ನೋಡಿ ನಮ್ಮ ದೇಶದ ಬಗ್ಗೆ ಏನೋ ಪವಾಡ ಸದೃಶವಾದ ಬದಲಾವಣೆಗಳು ಅಮೆರಿಕಾದ ವಿದೇಶಾಂಗ ನೀತಿಯಲ್ಲಿ ಆಗಿವೆಯೆಂದು ಭ್ರಮಿಸುವುದು ನಮ್ಮ ವಿನಾಶದ ಹಾದಿಯಾಗುತ್ತದೆ. ಇರಾನ್-ಪಾಕಿಸ್ತಾನ-ಭಾರತಗಳ ನಡುವೆ ತೈಲಕೊಳವೆ ನಿರ್ಮಾಣವಾಗದಿರಲೆಂದು ಕೂಡ ಅಮೆರಿಕಾ ನಮ್ಮ ದೇಶದ ನೆಚ್ಚಿನ ಮಿತ್ರನಂತೆ ನಟಿಸುತ್ತದೆಂಬ ವಾಸ್ತವಿಕ ಪ್ರಜ್ಞೆ ನಮ್ಮದಾಗಬೇಕು.

ಈ ಭೌಗೋಳಿಕ ರಾಜಕೀಯಕ್ಕೂ ಭಾರತದ ಪರಮಾಣು ನೀತಿಗೂ ನೇರವಾದ ಸಂಬಂಧವಿದೆ. ಅಣ್ವಸ್ತ್ರಗಳು ನಮ್ಮ ಪಾರ್ಲಿಮೆಂಟಿನ ಮೇಲಿನ ಧಾಳಿಯನ್ನು ತಡೆಯಲಿಲ್ಲ, ಉಗ್ರರನ್ನು ಮೆಟ್ಟಿಹಾಕಲಿಲ್ಲ. ಅದು ಅಮೆರಿಕಾ-ಬ್ರಿಟನ್‌ಗಳಿಗೂ ಅನ್ವಯವಾಗುತ್ತದೆ. ಪರಮಾಣು ಶಕ್ತಿಯ ವರ್ಧನೆಗೆಂದು ಅಮೆರಿಕಾಕ್ಕೆ ಭಾರತವು ಶರಣಾಗಕೂಡದು, ಶರಣಾಗಲು ಭಾರತದ ಪ್ರಜೆಗಳು ಬಿಡಕೂಡದು. ಎಲ್ಲ ದೇಶಗಳೊಡನೆ ಇರಬೇಕಾದಂತೆ ಸಮಾನಸ್ಕಂಧರಂತೆ ಅಮೆರಿಕಾದೊಡನೆಯೂ ಸಖ್ಯ ಬೇಕು, ನಿಜ; ಆದರೆ ಸಖ್ಯದ ಹೆಸರಿನಲ್ಲಿ ಬೆನ್ನಿಗೆ ಚೂರಿ ಹಾಕಿಸಿಕೊಳ್ಳುವಂತಾಗಬಾರದು.

# ಸುಬ್ಬಣ್ಣ
## ಮಾದರಿ ಸಾಮುದಾಯಿಕ

**ಅ. ರಾ. ಶ್ರೀನಿವಾಸ**

**ಸು**ಬ್ಬಣ್ಣ ಭೌತಿಕವಾಗಿಯಂತೂ ಇಲ್ಲ, ಆದರೆ ಅವರು ಇಲ್ಲಿ ಇಲ್ಲ ಎಂಬುದನ್ನು ಒಪ್ಪಿಕೊಳ್ಳುವುದಕ್ಕೆ ನಮ್ಮ ಮನಸ್ಸು ಇನ್ನೂ ಸಿದ್ಧವಾಗಿಲ್ಲ, ಯಾಕೆಂದರೆ, ವ್ಯಕ್ತಿಗತವಾಗಿ ಆತನೊಂದಿಗೆ ನನ್ನ ಒಡನಾಟ ಸುಮಾರು ಮೂರು ದಶಕಗಳಿಗಿಂತಲೂ ಹಿಂದಿನದು. ಮಾರ್ಗದರ್ಶಕನಾಗಿ, ಪೋಷಕನಾಗಿ, ಗುರುವಾಗಿ ಎಲ್ಲಕ್ಕಿಂತ ಹೆಚ್ಚಾಗಿ ಒಬ್ಬ ಗೆಳೆಯನಾಗಿ ನಮ್ಮೊಂದಿಗಿದ್ದವರು ಸುಬ್ಬಣ್ಣ. ನೀನಾಸಂನ ಆ ಕ್ಷೇತ್ರವನ್ನು ಈ ಕಡೆಗೆ ಸ್ಟೇಜು ಎಂದು ಕರೆಯುತ್ತಾರೆ. ಕೆಲಸವಿರಲಿ ಇಲ್ಲದೇ ಇರಲಿ, ಅಪರೂಪಕ್ಕೊಮ್ಮೆಯಾದರೂ ಅಲ್ಲಿಗೆ ಹೋಗುವುದು ನಮ್ಮ ಪದ್ಧತಿ. ಸುಮ್ಮನೆ ಹೋಗುವುದು ಎಂದರೆ ಸುಮ್ಮನೆ ಅಲ್ಲ, ಸುಬ್ಬಣ್ಣನನ್ನು ನೋಡುವುದಕ್ಕೆ. ಆದರೆ ಆತನೊಂದಿಗೆ ನಮಗೆ ಕೆಲಸವಿರಲೇಬೇಕು ಎಂಬ ನಿಯಮವಿಲ್ಲ. ತುಂಬಾ ದಿನಗಳು ಕಾಣದೆ ಇದ್ದರೆ ಆತನೂ ಯಾಕೆ ಬರಲೇ ಇಲ್ಲ ಎಂದು ಕೇಳುತ್ತಿದ್ದ. ನಮಗೂ ದೀರ್ಘ ಸಮಯ ಕಾಣಲಿಲ್ಲ ಎಂದರೆ ಸರಿ ಬರುತ್ತಿರಲಿಲ್ಲ. ಎಲ್ಲ ಸಿದ್ಧಾಂತ, ಎಲ್ಲ ಹೆಸರು ದೆಸೆಗಳ ನಡುವೆಯೂ ಆತನಲ್ಲಿ ಇರುತ್ತಿದ್ದ ಮನುಷ್ಯ ಗುಣದಿಂದಾಗಿ ಎಲ್ಲರೊಂದಿಗೂ ಒಂದು ಆತ್ಮೀಯ ಸಂಬಂಧ ಆತನೊಂದಿಗೆ ಬರುತ್ತಿತ್ತು. ಎಷ್ಟೋ ಬಾರಿ ಅಭಿಪ್ರಾಯದಲ್ಲಿ ಭಿನ್ನ ಎನಿಸಿದರೂ ಆತನ ಸಂಬಂಧದಲ್ಲಿ ಯಾವ ಕೊರತೆಯೂ ಆಗುತ್ತಿರಲಿಲ್ಲ. ಸುಬ್ಬಣ್ಣನ ಹೆಚ್ಚುಗಾರಿಕೆಯೇ ಇದು.

ವ್ಯಕ್ತಿಗಳು ಸತ್ತಕೂಡಲೇ ಅವರ ಬಗೆಗೆ ಪುಂಖಾನು ಪುಂಖವಾಗಿ ಬರೆಯುತ್ತೇವೆ. ಬದುಕಿದ್ದಾಗ ಮೌಲ್ಯಾಂಕನ ಮಾಡುವುದು ಸಾಧ್ಯವಾಗುವುದಿಲ್ಲ. ಆದರೆ ಸತ್ತ ಮೇಲೆ ಇನ್ನು ಬದುಕು ಇಲ್ಲ ಎಂಬುದಕ್ಕಾಗಿ ಚರಿತ್ರೆಯಲ್ಲಿ ಆ ವ್ಯಕ್ತಿಯ ಸ್ಥಾನವೇನು ಎಂದು ಚಿಂತಿಸುವುದು ಸಹಜ. ಸರಿಯೋ ತಪ್ಪೋ ಆ ಮಾತು ಬೇರೆ. ಆದರೆ ಅಂತಹದೊಂದು ಪ್ರಕ್ರಿಯೆ ಸಾರೋದ್ಧಾರವಾಗಿ ನಡೆದುಕೊಂಡು ಬಂದಿದೆ. ಈಗ ಸುಬ್ಬಣ್ಣ ಇಲ್ಲ, ಹಾಗಾಗಿ ಅವರ ಬಗೆಗೆ ಇಂತಹ ಮೌಲ್ಯಾಂಕನ ಪ್ರಯತ್ನಗಳು ನಡೆಯುತ್ತಿವೆ.



ಪುಟ್ಟ ಶರೀರಿ ಸುಬ್ಬಣ್ಣ ಬೆಟ್ಟದಷ್ಟು ಪ್ರತಿಭೆ ಇಟ್ಟುಕೊಂಡವ. ಜೀವ ಹಿಂಡುವ ಅಸ್ತಮಾ ಕಾಯಿಲೆಯಿಂದ ನಿರಂತರ ನರಳುತ್ತಿದ್ದರೂ ಆ ನೋವನ್ನೆಲ್ಲ ಮೀರಿ ತನ್ನನ್ನು ಇತಿಹಾಸದಲ್ಲಿ ದಾಖಲಿಸಿಕೊಂಡ ಹೆಮ್ಮೆ ಇವರದು. ಆದರೆ ಇತಿಹಾಸ ರಚನೆಗಾಗಿ ಆತ ಎಂದೂ ಹೋರಾಡಲಿಲ್ಲ, ಯಾಕೆಂದರೆ ಆತನಿಗೆ ಒಂದು ಸಿದ್ಧ ಮಾದರಿ ತೆರೆದುಕೊಂಡಿರಲಿಲ್ಲ. ಆತ ಏನು ಮಾಡುತ್ತ ಹೋದರೋ ಅದೇ ಇತರರಿಗೆ ಮಾದರಿಯಾದದ್ದು ಇಲ್ಲಿನ ಇತಿಹಾಸ. ಸಮುದಾಯಕ್ಕೆ ನಿಷ್ಠನಾದ ಸುಬ್ಬಣ್ಣ ಅದರಿಂದಲೇ ಕಲಿಯುತ್ತ ಹೋದರು, ಮತ್ತು ಅದಕ್ಕಾಗಿಯೇ ದುಡಿಯುತ್ತಾ ಹೋದರು.

ಸುಬ್ಬಣ್ಣ ಎಲ್ಲಿ ನಿಲ್ಲುತ್ತಾರೆ ?

ಆ ಕಾಲದಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ಹೆಚ್ಚು ವಿದ್ಯಾಭ್ಯಾಸ ಮಾಡಿಕೊಂಡವರು ಇವರು. ಇವರ ಗೆಳೆಯರೆಲ್ಲರೂ ನಗರದ ಆಕರ್ಷಕ ಮತ್ತು ರಗಳೆಯಿಲ್ಲದ ಬದುಕನ್ನು ಅರಸಿ ಹೋದರೆ ಸುಬ್ಬಣ್ಣ ಹಾಗೆ ಮಾಡಲಿಲ್ಲ. ತನ್ನ ಮೂಲ ಕಸುಬು ಕೃಷಿಯ ಬದುಕಿಗೆ ಆತುಕೊಂಡವ. ಮನೆಗೆ ಒಬ್ಬನೇ ಮಗ ಎಂಬುದು ಒಂದು ಕಾರಣವಾಗಿರಬಹುದಾದರೂ ಅದೇ ಮುಖ್ಯ ಕಾರಣವಾಗಿರಲು ಸಾಧ್ಯವಿಲ್ಲ. ಏಕೆಂದರೆ, ಇದೇ ಪರಿಸ್ಥಿತಿಯಲ್ಲಿ ಬೇರೆಯೇ ಆಗಿರುವ ಉದಾಹರಣೆಗಳು ನಮ್ಮೆದುರಿಗೆ ಸಾಕಷ್ಟು ಸಿಗುತ್ತವೆ. ಆ ಕಾಲದಲ್ಲಿ ಯಾವುದೋ ನೌಕರಿ ಹಿಡಿದು ಅಧಿಕಾರಿಯಾಗುವುದು ಅತ್ಯಂತ ಆಕರ್ಷಕವಾಗಿತ್ತು. ಆದರೆ ವಿದ್ಯುತ್ತಿಗೂ ಗತಿಯಿಲ್ಲದ ಆ ದಿನಗಳಲ್ಲಿ ಹಳ್ಳಿಯಲ್ಲಿ ಬದುಕು ಕಟ್ಟಲು ನಿಲ್ಲುವುದೆಂದರೆ ಸಾಮಾನ್ಯ ವಿಷಯವಂತೂ ಅಲ್ಲ. ಸುಬ್ಬಣ್ಣ ಅದರಷ್ಟಕ್ಕೇ ಅದೇ ಮಾದರಿಯಾಗಿಬಿಡುತ್ತಾರೆ.

ಹಾಗಂತ ಆತ ಉತ್ತಮ ಕೃಷಿಕನೇನಲ್ಲ. ಸಾಂಪ್ರದಾಯಿಕವೆಂಬಂತೆ ಕೃಷಿ ಮಾಡುತ್ತ ತಾನು ಎಲ್ಲಿ ತೊಡಗಬೇಕು ಎಂದು ಅರಸುತ್ತ ಇದ್ದವರು. ಸಾಹಿತ್ಯ ಅವರ ಪ್ರವೃತ್ತಿಯಾಗಿತ್ತು. ಅನೇಕರು ಅವರ ಸಹಪಾಠಿಗಳು ಸಾಹಿತಿಗಳೇ ಆಗಿದ್ದರು. ಅದೇ ವೇಳೆಗೆ ಅಕ್ಷರ ಪ್ರಕಾಶನ ಸಂಸ್ಥೆಯನ್ನು ಹುಟ್ಟಿಹಾಕಿಕೊಂಡವರು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಕ್ಷರ ಪ್ರಕಾಶನ ಏನು ಮಾಡಿತು ಎಂಬುದು ಎಲ್ಲ ಸಾರಸ್ವತರಿಗೂ ಗೊತ್ತಿರುವ ಸಂಗತಿ. ನವ್ಯ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ಕೀರ್ತಿ, ಅನೇಕ ಯುವ ಬರೆಹಗಾರರನ್ನು ಬೆಳಕಿಗೆ ತಂದ ಕೀರ್ತಿ ಸುಬ್ಬಣ್ಣನಿಗೆ ಸಲ್ಲಬೇಕು. ಇದು ಇಷ್ಟು ದೊಡ್ಡದಾಗಿ ಬೆಳೆಯುವುದಕ್ಕೆ ಮುಖ್ಯ ಕಾರಣ ನವ್ಯಕಾವ್ಯ ಪ್ರವರ್ತಕರೆಂದು ಕರೆಯಲಾಗುವ ಗೋಪಾಲಕೃಷ್ಣ ಅಡಿಗರು. ಸಾಗರದ ಕಾಲೇಜಿಗೆ ಪ್ರಾಂಶುಪಾಲರಾಗಿ ೬೦ರ ದಶಕದಲ್ಲಿ ಅಡಿಗರು ಬಂದಾಗ ಅಕ್ಷರ ಪ್ರಕಾಶನಕ್ಕೆ ಒಂದು ಐತಿಹಾಸಿಕ ಶಕ್ತಿ ಸಂಚಯವಾಯಿತು ಎಂಬುದು ಸ್ಪಷ್ಟವಿದೆ. ಅದೇ ವೇಳೆಗೆ 'ಸಾಕ್ಷಿ' ಯಂತಹ ಸಾಹಿತ್ಯಕ ಪತ್ರಿಕೆ ಕರ್ನಾಟಕದ ಒಂದು ಅತ್ಯುತ್ತಮ ಚಿಂತನ ಕ್ಷೇತ್ರವಾಗಿ ಹೇಗೆ ಪರಿಣಮಿಸಿತು ಎಂಬುದು ಎಲ್ಲರಿಗೂ ಗೊತ್ತು. ಆ ಪತ್ರಿಕೆಯ ಕೊರತೆ ಈಗಲೂ ನಮ್ಮನ್ನು ಕಾಡುತ್ತಿದೆ.

ಸುಬ್ಬಣ್ಣ ಅವಕಾಶ ಸಿಕ್ಕಾಗಲೆಲ್ಲ ತನ್ನನ್ನು ಆ ಅವಕಾಶಕ್ಕೆ ಒಡ್ಡಿಕೊಂಡು ಬೆಳೆಯುತ್ತ ಬಂದವರು. ಆರಂಭದ ದಿನಗಳಲ್ಲಿ ಸುಬ್ಬಣ್ಣ ಗುರುತಿಸಿಕೊಂಡದ್ದು ಸಾಹಿತಿಯಾಗಿ, ಪ್ರಕಾಶಕನಾಗಿ. ಕೃಷಿಕನೆಂಬುದು ಹೇಗೂ ಇದ್ದೇ ಇತ್ತು. ಅದೇ ಅವರ ಅನ್ನ ಕೊಡುತ್ತಿದ್ದ ಕಸುಬು ಕೂಡ. ಅದರ ಬಗೆಗೆ ಎಂದೂ ಅಗೌರವ ತೋರಿಸಿದವರು ಇವರಲ್ಲ. ಅದೇ ವೇಳೆಗೆ ತನಗೆ ಲಾಭವಾಗುತ್ತದೆ ಎಂದರೆ ಏನು ಬೇಕಾದರೂ

**ಬಾಯಿ ತುಂಬಾ ಎಲೆ ಅಡಿಕೆಯ ರಸ ತುಂಬಿಕೊಂಡಿರುತ್ತಿದ್ದ ಸುಬ್ಬಣ್ಣ ಸಂಪ್ರದಾಯಸ್ಥನಲ್ಲ, ದೇವರು, ದಿಂಡಿರು ಎಂದೆಲ್ಲ ತಲೆ ಕೆಡಿಸಿಕೊಂಡವನಲ್ಲ, ಆದರೆ ಬೇರೆಯವರ ಆಚರಣೆಗಳನ್ನು ಆಡಿಕೊಂಡವನೂ ಅಲ್ಲ. ಈ ಕಾರಣಕ್ಕಾಗಿಯೇ ಸುಬ್ಬಣ್ಣ ಪಕ್ಷ, ಪಂಗಡ, ಜಾತಿ, ಮತ, ಹುಡುಗರು, ಮುದುಕರು, ಗ್ರಾಮೀಣರು, ನಗರಿಗರು ಹೀಗೆ ಎಲ್ಲ ವರ್ಗದವರೂ ಇವರನ್ನು ಗೌರವಿಸುತ್ತಲೇ ಅಭಿಮಾನ ಪಡುತ್ತಲೇ ಬರುವಂತಾದುದು. ಸಮುದಾಯ ಎಂಬ ತನ್ನ ಪರಮಗುರುವಿನ ಬಗೆಗೆ ಯಾವತ್ತೂ ನಿಕೃಷ್ಟನಾಗಿ ಕಂಡವನಲ್ಲ.**

ಮಾಡುವ ವ್ಯಕ್ತಿಯೂ ಅವರಾಗಿರಲಿಲ್ಲ. ಅಡಿಕೆಯ ಕೃಷಿಕ ಸುಬ್ಬಣ್ಣ ಕೆಲವಾರು ವರ್ಷಗಳ ಹಿಂದೆ ಗುಟ್ಕಾ ವಿರುದ್ಧ ಸಮರವನ್ನೇ ಸಾರಿದವರು. ಉಳಿದೆಲ್ಲಾ ಅಡಿಕೆ ಬೆಳೆಗಾರರು ಗುಟ್ಕಾದಿಂದ ತಮ್ಮ ಅಡಿಕೆಗೆ ಬೆಲೆ ಬಂದು ಅದನ್ನು ತಯಾರಿಸುವವರಿಗೆ ಇನ್ನಿಲ್ಲದ ಗೌರವ ಸಮರ್ಪಿಸುತ್ತಿದ್ದ ವೇಳೆಯಲ್ಲಿ ಒಬ್ಬಂಟಿಯಾಗಿ ಗುಟ್ಕಾ ಹೇಗೆ ಆರೋಗ್ಯಕ್ಕೆ ಹಾನಿಕರ, ಅದನ್ನು ಬೆಳೆಗಾರರು ಬೆಂಬಲಿಸಬಾರದು ಎಂದು ಬಹಿರಂಗವಾಗಿ ಸಮರ ಸಾರಿದವರು. ಆ ದಿನಗಳಲ್ಲಿ ಅಡಿಕೆ ಬೆಳೆಗಾರರ ಕೋಪ ಕಟ್ಟಿಕೊಂಡಿದ್ದರು. ತಮಾಷೆ ಎಂದರೆ ಸ್ವತಃ ಸುಬ್ಬಣ್ಣ ತಂಬಾಕು ತಿನ್ನುವ ಮನುಷ್ಯ ! ತನಗೆ ಸರಿ ಕಂಡದ್ದರ ಬಗೆಗೆ ಒಬ್ಬನೇ ಆದರೂ ಅದಕ್ಕಾಗಿ ಯಾರ ನಿಷ್ಠುರ ಕಟ್ಟಿಕೊಳ್ಳುವುದಕ್ಕೂ ಸಿದ್ಧನಾಗುತ್ತಿದ್ದ. ಸುಬ್ಬಣ್ಣ ಸಂಘ ಕಟ್ಟಿಕೊಂಡು ಯಾವ ಹೋರಾಟವನ್ನೂ ಮಾಡಿದವರಲ್ಲ. ಅಂತಹ ಸಾಂಘಿಕ ಹೋರಾಟಗಳಿಗೆ ಕೆಲವಾರು ಸಲ ಬೆಂಬಲಕೊಟ್ಟು ಸ್ವತಃ ಚಳವಳಿಗೆ ಧುಮುಕಿದ್ದು ಇದೆ. ತುಂಗಾ ಮೂಲ ಉಳಿಸಿ ಅಂತಹದೊಂದು ಉದಾಹರಣೆ. ಆದರೆ ಸಂಘ ಕಟ್ಟಿಕೊಂಡವರು ಮಾತಾಡದ ಸಮಯದಲ್ಲಿ ಈತ ತಾನೊಬ್ಬನೇ ಮಾತಾಡಿ ಸಾರ್ವಜನಿಕರ ಗಮನ ಸೆಳೆಯುತ್ತಿದ್ದ.

ಬಾಯಿ ತುಂಬಾ ಎಲೆ ಅಡಿಕೆಯ ರಸ ತುಂಬಿಕೊಂಡಿರುತ್ತಿದ್ದ ಸುಬ್ಬಣ್ಣ ಸಂಪ್ರದಾಯಸ್ಥನಲ್ಲ. ದೇವರು, ದಿಂಡಿರು ಎಂದೆಲ್ಲ ತಲೆಕೆಡಿಸಿಕೊಂಡವನಲ್ಲ. ಆದರೆ ಬೇರೆಯವರ ಆಚರಣೆಗಳನ್ನು ಆಡಿಕೊಂಡವನೂ ಅಲ್ಲ. ಈ ಕಾರಣಕ್ಕಾಗಿಯೇ ಸುಬ್ಬಣ್ಣ ಪಕ್ಷ, ಪಂಗಡ, ಜಾತಿ, ಮತ, ಹುಡುಗರು, ಮುದುಕರು, ಗ್ರಾಮೀಣರು, ನಗರಿಗರು ಹೀಗೆ ಎಲ್ಲ ವರ್ಗದವರೂ ಇವರನ್ನು ಗೌರವಿಸುತ್ತಲೇ ಅಭಿಮಾನ ಪಡುತ್ತಲೇ ಬರುವಂತಾದುದು. ಸಮುದಾಯ ಎಂಬ ತನ್ನ ಪರಮಗುರುವಿನ ಬಗೆಗೆ ಯಾವತ್ತೂ ನಿಕೃಷ್ಟನಾಗಿ ಕಂಡವನಲ್ಲ.

ಸುಬ್ಬಣ್ಣ ಕಪ್ಪು ಬಿಳುಪಿನ ವ್ಯಕ್ತಿಯಲ್ಲ. ತುಂಬಾ ಸಂಕೀರ್ಣ ಮನುಷ್ಯ. ಕೃಷಿಕ, ಸಾಹಿತಿ, ಅನುವಾದಕ, ರಂಗಕರ್ಮಿ, ಸಿನಿಮಾತಜ್ಞ ಹೀಗೆ ವಿವಿಧ ಬಗೆಯಲ್ಲಿ ತೊಡಗಿಕೊಂಡವರು. ಈ ಸಂಕೀರ್ಣತೆಯೇ ಸುಬ್ಬಣ್ಣನವರ ಆಲೋಚನೆಗಳನ್ನು ಎಲ್ಲರಿಗಿಂತ ಪ್ರತ್ಯೇಕ ನಿಲ್ಲಿಸುತ್ತದೆ. ಸಮುದಾಯದ ವಿವಿಧ ವರ್ಗದೊಂದಿಗೆ ಬೆರೆತು ಅದರಿಂದ ಹುಟ್ಟಿದ ಅನುಭವದ ಪಾಕ ಇದು. ಪುಟ್ಟ ಶರೀರಿಯಾದರೂ ಬೆಟ್ಟದಷ್ಟು ಪ್ರತಿಭೆ ಇರುವ ಈತನ ಬಗೆಗೆ ಬರೆಯುವುದೆಂದರೆ ಬೆಟ್ಟವನ್ನು ಕಂಡಷ್ಟೇ ಎನಿಸುತ್ತದೆ. ಒಂದು ನಿಟ್ಟಿಗೆ ಯಾವ ಬೆಟ್ಟವೂ ಕೈಮುಷ್ಟಿಗೆ ಸಿಕ್ಕುವುದಿಲ್ಲ. ಯಾವ ದಿಕ್ಕಿನಿಂದ ನೋಡುತ್ತೇವೋ ಆಯಾಯ ದಿಕ್ಕಿನಿಂದ ಎಷ್ಟು ಸಿಕ್ಕುತ್ತದೋ ಅದು ಬೆಟ್ಟವೇ ಆಗಿದ್ದರೂ ಅದಷ್ಟೇ ಬೆಟ್ಟವಲ್ಲ. ಬೆಟ್ಟ ಇನ್ನೂ ಇರುತ್ತದೆ. ಹಾಗೆ ಸುಬ್ಬಣ್ಣ, ದಿಲ್ಲಿಯನ್ನು ಧಿಕ್ಕರಿಸಿ ಹಳ್ಳಿಗೇ ಸಮರ್ಪಿಸಿಕೊಂಡಲ್ಲಿ ಆಕಸ್ಮಿಕವಾದದ್ದೇನೂ ಇಲ್ಲ. ಎಲ್ಲವೂ ಪ್ರಜ್ಞಾಪೂರ್ವಕವಾಗಿಯೇ ಬೆಳೆದುಕೊಂಡುಬಂದಿದೆ. ಕೃಷಿಕನಾಗಿದ್ದವನು ತನ್ನನ್ನು ಎಲ್ಲ ಕಡೆಗೆ ತೊಡಗಿಸಿಕೊಂಡಿದ್ದ. ತಾನು ಅರ್ಥಪೂರ್ಣವಾಗಿ ಬದುಕುವ ದಾರಿ ಹುಡುಕುತ್ತಾ ತನ್ನ ಸಮುದಾಯವನ್ನೂ ತನ್ನೊಂದಿಗೆ ಕರೆದುಕೊಂಡು ಹೋದದ್ದು ಸುಬ್ಬಣ್ಣನ ದೊಡ್ಡ ಸಾಧನೆ. ಕೃಷಿಕ, ಸಾಹಿತಿ, ಪ್ರಕಾಶಕ ಹೀಗೆ ಇದ್ದವನಿಗೆ ನೀಲಕಂಠೇಶ್ವರ ನಾಟ್ಯ ಸೇವಾ ಸಂಘದ ಒಡನಾಟದಿಂದ ಸಮುದಾಯವನ್ನು ನೇರವಾಗಿ ಸ್ಪಂದಿಸಬಹುದಾದ ನಾಟಕ ಕ್ಷೇತ್ರ ಸಮುದಾಯವನ್ನು ಹಚ್ಚಿಕೊಂಡ ಸುಬ್ಬಣ್ಣನಿಗೆ ತಕ್ಕ ಮಾಧ್ಯಮ ರಂಗವಾಗಿತ್ತು. ೭೦ರ ದಶಕದಲ್ಲಿ ಆಗತಾನೇ ದೊಡ್ಡ ರಂಗ ನಿರ್ದೇಶಕರಾಗಿ ಒಡಮೂಡುತ್ತಿದ್ದ ಬಿ. ವಿ. ಕಾರಂತರನ್ನು ಇಲ್ಲಿಗೆ ಕರೆತಂದು ಮಕ್ಕಳ ನಾಟಕವೊಂದನ್ನು ತಯಾರು ಮಾಡಿಸಿದ್ದು (ಪಂಜರಶಾಲೆ ಕನ್ನಡ ನಾಟಕ ಕ್ಷೇತ್ರದಲ್ಲಿಯೇ ಒಂದು ಬೆರಗುಗೊಳಿಸುವಂಥಾ ಆಧುನಿಕತೆಗೆ ತೆರೆದುಕೊಂಡ ನಾಟಕ) ಸುಬ್ಬಣ್ಣನ ಜೀವನದಲ್ಲಿ ಕಂಡ ದೊಡ್ಡ ತಿರುವು. ಅದೇ ವೇಳೆಗೆ ಹೆಗ್ಗೋಡು ಹಾಗೂ ಸಾಗರ ಸುತ್ತಮುತ್ತಿನ ಜನರಿಗೆ, ಅದು ಒಂದು ಪ್ರತ್ಯೇಕ ಸಣ್ಣ ಸಮುದಾಯವೇ ಆಗಿದ್ದರೂ ಸಹ, ದೊಡ್ಡ ತಿರುವು. ಅದೇ ನೆಪವಾಗಿ ಶಿವರಾಮ ಕಾರಂತ ರಂಗಮಂದಿರವೊಂದು ನಿರ್ಮಾಣವಾಯಿತು. ಅಲ್ಲಿಂದ ಮುಂದೆ ಈ ಸ್ಟೇಜು ಸುಬ್ಬಣ್ಣನ ಪ್ರಯೋಗ ಭೂಮಿಯಾಯಿತು, ಕರ್ಮ ಭೂಮಿಯೂ ಆಯಿತು. ಹೆಗ್ಗೋಡು ಮತ್ತು ಸುತ್ತಮುತ್ತಲ ಪ್ರದೇಶವು ಒಂದು ಹೊಸ ವಾತಾವರಣಕ್ಕೆ ಒಂದು ಹೊಸ ಆಲೋಚನೆಗೆ ಪ್ರೇರಣೆಯಾಯಿತು.



# ನನ್ನ ಅಂಗಳ, ನನ್ನ ಮರ

ಮೂಲ : ಜಾವೇದ ಅಖ್ತರ್

*(ಕವಿತೆ : ಮೇರಾ ಆಂಗನ್ - ಮೇರಾ ಪೇಡ್)*

ನನ್ನ ಅಂಗಳ

ಅಷ್ಟೊಂದು ವಿಶಾಲ, ಎಷ್ಟು ದೊಡ್ಡದಾಗಿತ್ತು

ಅದು ನನ್ನೆಲ್ಲಾ ಆಟಗಳನೊಳಗೊಂಡಿತ್ತು

ಹಾಗೂ ಅಂಗಳದ ಮುಂದಿತ್ತು ಒಂದು ಮರ

ನನಗಿಂತಲು ಆದಿತ್ತು ಸಾಕಷ್ಟು ಎತ್ತರ

ಆದರೆ ನನಗೆ ಇದರಲ್ಲಿ ನಂಬಿಕೆ ಇತ್ತು.

ಯಾವಾಗ ನಾನು ದೊಡ್ಡವನಾಗುವೆನೋ,

ಮುಟ್ಟುವೆನು ಮರದ ತುತ್ತ ತುದಿಯನ್ನು

ಕೆಲವು ವರ್ಷಗಳ ನಂತರ

ನಾನು ಮನೆಗೆ ಬಂದಿದ್ದೇನೆ

ನೋಡುತ್ತಿದ್ದೇನೆ,

ಈ ಅಂಗಳ ಎಷ್ಟು ಚಿಕ್ಕದಾಗಿದೆ,

ಮರವಾದರೋ... ಮೊದಲಿಗಿಂತಲೂ

ಮತ್ತೆ ಎತ್ತರವಾಗಿದೆ !!

---

ಅನುವಾದ : ಭಾವನಾ ಎಸ್. ಘಂಟಿ
ಮನೆ ನಂ. ಡಿ-೧೨, ಸ್ಟಾಫ್ ಕ್ವಾರ್ಟರ್ಸ್, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

ಈ ಸ್ಟೇಜಿನಿಂದ ಇಲ್ಲಿನವರಿಗೆ ಸುಬ್ಬಣ್ಣ ಜಗತ್ತನ್ನೇ ತೋರಿಸಿದ. ರಂಗಮಂದಿರವೆಂಬ ನೆಲೆ ಸಿಕ್ಕ ಮೇಲೆ ಒಂದಾದ ಮೇಲೆ ಒಂದರಂತೆ ಕಾರ್ಯಕ್ರಮಗಳು ರೂಪಿತವಾಗುತ್ತ ಬರುವುದಕ್ಕೆ ಸಾಧ್ಯವಾಯಿತು. ವಾಸ್ತವವಾಗಿ ಸುಬ್ಬಣ್ಣ ಉತ್ತಮ ನಿರ್ದೇಶಕನಾಗಲೀ, ನಟನಾಗಲೀ ಅಲ್ಲ. ನಾಟಕಗಳ ಬಗೆಗೆ ಆ ದಿನಗಳಲ್ಲಿ ಅನೇಕ ಪುಸ್ತಕಗಳನ್ನು ತರಿಸಿಕೊಂಡು ಅಭ್ಯಾಸ ಮಾಡಿದ್ದು ನಮಗೆಲ್ಲ ಗೊತ್ತಿದೆ. ಆದರೆ ಯಾರಾರಿಂದ ಏನು ಕೆಲಸ ತೆಗೆದುಕೊಳ್ಳಬೇಕು ಎಂಬುದನ್ನು ತಿಳಿದವನಾಗಿ ಅವರಿಂದ ಆ ಕೆಲಸ ಪಡೆಯುತ್ತ ಒತ್ತಟ್ಟಿಗೆ ರಂಗಮಂದಿರವನ್ನು ಆಧುನಿಕ ನಾಟಕಗಳಿಗೆ ಸೌಕರ್ಯ ದೃಷ್ಟಿಯಿಂದ ಸಜ್ಜುಗೊಳಿಸಲು ಶ್ರಮಿಸಿದ; ಮತ್ತೊಂದೆಡೆಯಲ್ಲಿ ರಂಗಭೂಮಿಗೆ ಹೊಸ ಆಯಾಮವನ್ನು ಕೊಡಲು ಶ್ರಮಿಸಿದ. ತನ್ನನ್ನು ಎಲ್ಲಿಯೂ ನಾಯಕನೆಂದು ವಿಜೃಂಭಿಸಿಕೊಳ್ಳದೇ ಇಲ್ಲಿನ ಮತ್ತು ಹೊರಗಿನ ಎಲ್ಲ ಸಮುದಾಯವನ್ನೂ ತನ್ನಲ್ಲಿ ಒಳಗೊಳಿಸಿಕೊಳ್ಳುತ್ತ ಈ ಸಂಸ್ಥೆಯನ್ನು ಬೆಳೆಸಿದ್ದು ಸಾಮಾನ್ಯ ಸಾಧನೆಯಂತೂ ಅಲ್ಲ. ಒಮ್ಮೆ ಸುಬ್ಬಣ್ಣ ಹೀಗೆ ಹೇಳಿದ್ದರು : ''ಹೆಗ್ಗೋಡಿನ ಮಣ್ಣಿನ ವಾಸನೆಯೊಂದಿಗೆ ವಿವಿಧ ಪರಿಮಳಗಳು ಸೇರಿವೆ. ಹೆಗ್ಗೋಡಿನ ನೀನಾಸಂ ಸಮುದಾಯದ ಸಂಸ್ಥೆ. ಕಾಲಕಾಲಕ್ಕೆ ತನ್ನನ್ನು ವಿಸ್ತರಿಸಿಕೊಳ್ಳುತ್ತಲೇ ಕರ್ನಾಟಕದ ಸಮುದಾಯವನ್ನು ಒಳಗೊಳ್ಳುತ್ತ ಹೋಗಿದೆ. ನೀನಾಸಂ ಲಕ್ಷಣಗಳೇನು ಎಂದು ಹೇಳಲು ಸಾಧ್ಯವಿಲ್ಲ. ಉದ್ದೇಶವೇನು ಎಂದು ಹೇಳಲೂ ಸಾಧ್ಯವಿಲ್ಲ. ಅಸ್ಪಷ್ಟವಾದ ರೀತಿಯಲ್ಲಿ ಇದು ಬೆಳೆದುಕೊಂಡು ಬಂದಿದೆ. ಈ ಸಂಸ್ಥೆಗೆ ಒಂದು ನಿರ್ದಿಷ್ಟ ಮಾಸ್ಟರ್ ಮೈಂಡ್ ಅಂತ ಇಲ್ಲ. ಬೇರೆ ಬೇರೆಯವರು ಭಾಗವಹಿಸಿಕೊಂಡು ಸಮುದಾಯವಾಗಿ ಬೆಳೆದಿದೆ. ಹೆಗ್ಗೋಡು ಒಂದು ಜಗತ್ತನ್ನು ಕಟ್ಟಿಕೊಂಡಿದೆ. ಮೇರೆ ಸ್ಯಾಟಿನ್, ಕಮಲಾದೇವಿ, ಫ್ರಿಟ್ಸ್ ಬೆನೆವಿಟ್ಸ್‌ರಂತಹ ಜಗತ್ತಿನ ಶ್ರೇಷ್ಠ ಮನಸ್ಸುಗಳು ನಮ್ಮ ಮೇಲೆ ಪ್ರಭಾವ ಬೀರಿದ್ದಾರೆ. ಇಂತಹ ಸಮುದಾಯದ ಸಂಸ್ಥೆಗಳ ಮೂಲಕವಾಗಿಯೇ ನಿಜವಾದ ಜನತಂತ್ರವನ್ನು ಕಾಣಬಹುದೋ ಏನೋ. ಹೊಸದಾಗಿ ಬೆಳೆಯುವ ರಾಜಕಾರಣ, ಇಂತಹದ್ದೊಂದು ಜೀವನಕ್ರಮ ಸಾಧ್ಯವೇನೋ''. ಈ ಮಾತುಗಳು ಕಳೆದ ವರ್ಷವಷ್ಟೇ ಹೇಳಿದ್ದರು ಸುಬ್ಬಣ್ಣ. ಇವರ ಸಾಧನೆಗಳನ್ನು ಈ ಮಾತುಗಳೊಂದಿಗೆ ತುಲನೆ ಮಾಡಿನೋಡಿದರೆ ಸುಬ್ಬಣ್ಣ ಏನು ಎಂಬುದು ಅರ್ಥವಾಗಬಹುದು ಎಂದು ಕಾಣಿಸುತ್ತದೆ. ನೀನಾಸಂ, ನೀಲಕಂಠೇಶ್ವರ ನಾಟ್ಯ ಸೇವಾ ಸಂಘದ ಆಧುನಿಕ ರೂಪ ಎಂದು ಕರೆಯಬಹುದು. ಆದರೆ ಅತ್ಯುತ್ತಮ ರೂಪದಲ್ಲಿ ಸುಬ್ಬಣ್ಣ ಸಂಪ್ರದಾಯದ ಮನುಷ್ಯ ಕೂಡ ಹೌದು. ತಮ್ಮ ಸಂಸ್ಥೆಯನ್ನು ಎಲ್ಲೂ ಆಧುನಿಕಗೊಳ್ಳಲು ಬಿಡಲಿಲ್ಲ. ರಂಗಮಂದಿರದ ಇಡೀ ಪರಿಸರವನ್ನು ಅವಲೋಕಿಸಿದರೆ ದೇಸೀ ಸೊಗಡು ಕಾಣಿಸುತ್ತದೆ. ಕಟ್ಟಡಗಳಲ್ಲಾಗಲೀ, ಕೂರುವ ಆಸನ ವ್ಯವಸ್ಥೆಯಾಗಲೀ ಹೀಗೆ ಎಲ್ಲಿಯೂ ಗ್ರಾಮೀಣ ಸೊಗಡಿನಿಂದಲೇ ವಿಜೃಂಭಿಸಿವೆ. ಸಮುದಾಯದಿಂದ ಪ್ರತ್ಯೇಕಗೊಳ್ಳದ ಗಾಂಧಿಯ ಚಿಂತನೆಗಳ ಮಿನಿ ಮಾದರಿಗಳು ಇವು ಅಂತ ನಾವು ಅಂದುಕೊಳ್ಳಬೇಕು. ಏಕೆಂದರೆ ಇವು ಕೇವಲ ಆಕಸ್ಮಿಕವಲ್ಲ. ರಂಗಮಂದಿರವೊಂದು ನಿರ್ಮಾಣ ವಾದಾಗ ಅಲ್ಲಿಗೆ ಮುಗಿಯಲಿಲ್ಲ. ಅದು ಆರಂಭವಾಗಿತ್ತು. ಆದರೆ ಸಮುದಾಯದ ಸೇರ್ಪಡೆ ಇಲ್ಲದೇ ಇದು ಸಾಧ್ಯವಿರಲಿಲ್ಲ. ಅಯ್ಯೋ ಈ ಹಳ್ಳಿಯಲ್ಲಿ ಇಷ್ಟು ದೊಡ್ಡ ರಂಗಮಂದಿರ ಕಟ್ಟಿ ಯಾರಿಗೆ ಎಷ್ಟು ಪ್ರಯೋಜನವಾಗುತ್ತದೆ ಎಂದು ಜನ ಆಡಿಕೊಂಡಿದ್ದು ನನಗೆ ಗೊತ್ತಿದೆ.

ಆರಂಭದಲ್ಲಿ ನಾಟಕ ಮಾಡುವುದರಿಂದ ಶುರು ಹಚ್ಚಿಕೊಂಡರು. ಕನ್ನಡ ರಂಗಭೂಮಿಗೆ ತಿರುವುಕೊಟ್ಟ ೭೦ರ ದಶಕದಲ್ಲೇ ಇಲ್ಲಿಯೂ ರಂಗಮಂದಿರ ಆರಂಭವಾಯಿತು. ಹಾಗಾಗಿ ಇಲ್ಲಿನ ನಾಟಕ ಕ್ಷೇತ್ರದ ಬೆಳವಣಿಗೆ ಎಂದರೆ ಕನ್ನಡ ರಂಗಭೂಮಿಯ ಬೆಳವಣಿಗೆಯೂ ಹೌದು ಎಂದು ತಿಳಿಯಬಹುದು. ಸೂತ್ರಬದ್ಧ ರಂಗಭೂಮಿಯು ಆಧುನಿಕಕ್ಕೆ ತಿರುವು ಪಡೆದುಕೊಳ್ಳುತ್ತಿದ್ದ ಕಾಲವದು. ಆದರೆ ಹೆಗ್ಗೋಡಿನ ಪ್ರೇಕ್ಷಕರು ಮತ್ತು ಇಲ್ಲಿನ ನಟರು ಆ ಆಧುನಿಕತೆಗೆ ಒಳಗಾದವರಲ್ಲ. ಆಗ ಇಲ್ಲಿನ ನಟರಿಗೆ ಯಾವ ನಟನಾ ಸಂಸ್ಕಾರವೂ ಇರಲಿಲ್ಲ. ಅಲ್ಲಲ್ಲಿ ಬೇರೆ ಬೇರೆ ಕಡೆಗಳಲ್ಲಿ ನಟಿಸುತ್ತಿದ್ದ ವರನ್ನೇ ಕರೆದುಕೊಂಡು ಬಂದು ಸಾಂಪ್ರದಾಯಿಕ ವಸ್ತುವಿನ ಆಧುನಿಕವೆಂಬಂತಹ ಶಿಸ್ತುಬದ್ಧ ನಾಟಕವನ್ನು ಆಗಾಗ ರಂಗದ ಮೇಲೆ ತರುತ್ತಾ ಈ ಕ್ಷೇತ್ರವನ್ನೂ ಸುಬ್ಬಣ್ಣ ಕಟ್ಟಿದರು. ನಾಟಕಕ್ಕೇ ಮಾತ್ರ ಸೀಮಿತಗೊಳ್ಳದೆ ಇಲ್ಲಿನವರಿಗೆ ಆಧುನಿಕ ಚಲನಚಿತ್ರಗಳ ಪರಿಚಯವನ್ನೂ ಮಾಡಿಕೊಟ್ಟರು. ಜಗತ್ತಿನ ಅನೇಕ ಉತ್ತಮ ಚಲನಚಿತ್ರಗಳನ್ನು ನೀನಾಸಂ ಚಿತ್ರ ಸಮಾಜದ ಮೂಲಕ ತೋರಿಸಿಕೊಟ್ಟವರು. ಮತ್ತು ಸ್ವತಃ ಸುಬ್ಬಣ್ಣ ಆ ದಿಕ್ಕಿನಲ್ಲಿ ಪುಣೆಗೂ ಹೋಗಿ ಪರಿಣತಿ ಪಡೆದುಕೊಂಡು ಬಂದವರಿದ್ದರು. ಅದರ ಸಂಪೂರ್ಣ ಉಪಯೋಗವನ್ನು ಇಲ್ಲಿ ಮಾಡಿದರು. ಚಲನಚಿತ್ರದ ಅನೇಕ ವಿಷಯಗಳ ಬಗೆಗೆ ಸುಬ್ಬಣ್ಣ ಬರೆದರು. ಅನುವಾದಿಸಿದರು, ಪ್ರಸಿದ್ಧ ಸಿನಿಮಾಗಳನ್ನು ಪರಿಚಯಿಸಿದರು. ಆ ಕಾಲಕ್ಕೆ ಪರಭಾಷೆಯ ಹೊಸ ಪರಿಭಾಷೆಯ ಆಧುನಿಕ ಸಿನಿಮಾಗಳನ್ನು ಗ್ರಹಿಸಲು ಇಲ್ಲಿನ ಪ್ರೇಕ್ಷಕರು ಕಷ್ಟಪಡಬೇಕಾಗಿತ್ತು. ಆದರೆ ಸಿನಿಮಾ ತೆರೆಯ ಮೇಲೆ ಬರುತ್ತಿರುವಾಗಲೇ ತಾನೇ ಸ್ವತಃ ಆ ಬಗ್ಗೆ ಕಾಮೆಂಟರಿ ಮಾಡುತ್ತ ಸಿನಿಮಾದ ಬಗೆಗೆ ಪ್ರೇಕ್ಷಕನಿಗೆ ಪರಿಚಯಿಸುತ್ತಿದ್ದರು ಎಂದರೆ ಈಗ ಯಾರಿಗಾದರೂ ಆಶ್ಚರ್ಯವಾಗಬಹುದು. ಆದರೆ ಒಂದೊಂದು ಹಂತವನ್ನು ಏರುತ್ತ ಬರುವಾಗಲೂ ತನ್ನ ಸಮುದಾಯವನ್ನು ಏರಿಸಿಕೊಳ್ಳುತ್ತ ಬರುವಲ್ಲಿ ಸುಬ್ಬಣ್ಣ ತೋರಿಸಿದ ನಿಷ್ಠೆ ಶ್ರದ್ಧೆ ಅಸಾಧ್ಯವಾದುದು.

ಸುಬ್ಬಣ್ಣನ ಸಮುದಾಯ ನಿಷ್ಠೆ ವ್ಯಕ್ತವಾಗದ ಜಾಗವೇ ಇಲ್ಲ ಅಂತನ್ನಿಸುತ್ತದೆ. ಫೋರ್ಡ್ ಫೌಂಡೇಶನ್ ಹಣದಿಂದ ಆರಂಭಿಸಿದ 'ಜನಸ್ಪಂದನ' ಆ ಕಾಲಕ್ಕೆ ಒಂದು ಅದ್ಭುತ ಪ್ರಯೋಗ. ಜನರಿದ್ದಲ್ಲಿಗೇ ಹೋಗಿ ಅವರಿಗೆ ಹತ್ತಿರವಾದ ವಸ್ತುವನ್ನು ಆಯ್ಕೆ ಮಾಡಿಕೊಂಡು, ಅವರ ಭಾಷೆಯಲ್ಲೇ ನಾಟಕ ಆಡಿಸುವಲ್ಲಿ ತೋರಿದ ಸಮುದಾಯ ನಿಷ್ಠೆ ಅಸಾಮಾನ್ಯ. ಉತ್ತರ ಕನ್ನಡ ಜಿಲ್ಲೆಯ ಮಂಚೀಕೆರೆಯ ಅತ್ಯಂತ ಹಿಂದುಳಿದ ಜನಾಂಗವಾದ ಸಿದ್ಧಿ ಜನಾಂಗದವರಿಂದಲೂ ಆ ಕಾರ್ಯಕ್ರಮದ ಅಡಿಯಲ್ಲಿ ನಾಟಕ ಆಡಿಸಿದರು. ಅದೇ ರೀತಿ ೮೦ರಿಂದ ಆರಂಭಿಸಲಾದ ನೀನಾಸಂ ತಿರುಗಾಟ ಒಂದೇ ಕಡೆ ಹೆಪ್ಪುಗಟ್ಟಿದ ರಂಗಚಟುವಟಿಕೆಯನ್ನು ದಿಕ್ಕು ದಿಕ್ಕಿಗೆ ಚಲಿಸುವಂತೆ ಮಾಡಿದ್ದು ಇಂದಿಗೂ ಅದು ಮುಂದುವರಿಯುತ್ತಾ ಬಂದಿದೆ. ರಂಗ ತರಬೇತಿ ಶಾಲೆ ಆರಂಭಿಸಿ ಒಂದು ಸಾಂಸ್ಕೃತಿಕ ಸಮುದಾಯವನ್ನೇ ರೂಪಿಸಿದವರು ಸುಬ್ಬಣ್ಣ. ಎಲ್ಲರೂ ಸುಮ್ಮನಿದ್ದಾಗ ತುರ್ತುಸ್ಥಿತಿಯ ಸಂದರ್ಭದಲ್ಲಿ ಸುಬ್ಬಣ್ಣ ಸುಮ್ಮನೆ ಇರಲಿಲ್ಲ. ರಂಗಮಂದಿರವನ್ನು ತುರ್ತುಪರಿಸ್ಥಿತಿಯ ವಿರುದ್ಧ ಜನಾಭಿಪ್ರಾಯ ರೂಪಿಸುವ ಕೇಂದ್ರವನ್ನಾಗಿ ಪರಿವರ್ತಿಸಿದರು. ಅಂತೆಯೇ ಸಾಂಪ್ರದಾಯಿಕವೆಂಬಂತಹ ನಾಟಕ 'ಬಕ'ವನ್ನು ಇಂದಿರಾ ಗಾಂಧಿ ವಿರುದ್ಧ ಟೀಕಿಸುವ ನಾಟಕವನ್ನಾಗಿ ಮಾರ್ಪಡಿಸಿ ತನ್ನ ಸಮುದಾಯ ನಿಷ್ಠೆಯನ್ನು ತೋರಿಸಿಕೊಂಡರು.

ಎಲ್ಲರೂ ಈಗ ಹೇಳುತ್ತಾರೆ ದಿಲ್ಲಿಯನ್ನೇ ಹಳ್ಳಿಗೆ ತಂದರು ಎಂದು. ನಿಜ, ದೇಶದ ಅನೇಕ ಚಿಂತಕರು ಇಲ್ಲಿಗೆ ಬಂದು ತಮ್ಮ ಮಾತುಗಳನ್ನು ಹೇಳಿದರು. ಬೇರೆ ಬೇರೆ ಭಾಷೆಯ ರಂಗಕರ್ಮಿಗಳು ಇಲ್ಲಿ ಬಂದು ತಮ್ಮದನ್ನು ಇಲ್ಲಿನವರಿಗೆ ತೋರಿಸಿದರು. ಹೀಗೆ ಮಾಡುತ್ತಲೇ ಇಂಡಿಯಾದ ಸಂದರ್ಭದ ಒಂದು ಸಾಂಸ್ಕೃತಿಕ ಕೇಂದ್ರವೆಂಬಂತೆ, ಒಂದು ಮಾದರಿ ಎಂಬಂತೆ ನೀನಾಸಂ ರೂಪದಳೆದುಕೊಂಡಿತ್ತು. ಈ ದಿಸೆಯಲ್ಲಿ ಸುಬ್ಬಣ್ಣನ ಬದುಕಿನಲ್ಲಿ ಒಂದು ಸಂದೇಶವಿದೆ: ಬದುಕನ್ನು ಅರ್ಥಪೂರ್ಣವಾಗಿಸಲು ದಿಲ್ಲಿಯೇ ಬೇಕಾಗಿಲ್ಲ; ಆಧುನಿಕತೆಯ ವಿಕಾರಗಳೇ ಬೇಕಾಗಿಲ್ಲ. ಚಿಕ್ಕ ಹಳ್ಳಿಯಲ್ಲೂ, ಒಬ್ಬ ಚಿಕ್ಕ ವ್ಯಕ್ತಿಯೂ ಅಸಾಧ್ಯವಾದುದನ್ನು ಸಾಧಿಸಬಹುದು.

ಸುಬ್ಬಣ್ಣ ನಿಲ್ಲುವುದು ಇಲ್ಲಿ: ಸಮುದಾಯಕ್ಕಾಗಿ ಸಮುದಾಯದಿಂದಲೇ ಎಂಬ ಅರ್ಥಪೂರ್ಣ ಪ್ರಯೋಗವನ್ನು ಮಾಡಿ ಇದರಲ್ಲಿ ಯಶಸ್ಸು ಕಂಡಿದ್ದಾರೆ. ಗಾಂಧಿ, ಲೋಹಿಯಾ, ಅಂಬೇಡ್ಕರ್ ಹೀಗೆ ಅನೇಕ ಮಹಾನ್ ಚಿಂತಕರು ಹಾಗೂ ಸಾಧಕರನ್ನು ಕೇವಲ ಓದಿಕೊಂಡು ವೇದಿಕೆಗಳಲ್ಲಿ ಬುರುಡೆ ಬಿಡುವ ದಾಸಯ್ಯನಾಗದೆ ಅವರನ್ನು ತಾನು ತನ್ನ ಪರಿಸರದಲ್ಲಿ, ತನ್ನಲ್ಲಿ ಹೇಗೆ ಅಳವಡಿಸಬಹುದು ಎಂಬುದನ್ನು ಒಂದಾದ ಮೇಲೊಂದರಂತೆ ಯೋಜಿಸಿದ ಸಾಧಕನೀತ. ಸಮುದಾಯದಿಂದ ತಾನು ಪ್ರತ್ಯೇಕವಾಗಿ ನಿಲ್ಲದೇ, ತಾನು ಸಮುದಾಯದ ಒಂದು ಭಾಗ, ತಾನು ಬೆಳೆಯುವುದು ಎಂದರೆ ತನ್ನ ಸಮುದಾಯ ಬೆಳೆಯುವುದು ಎಂಬ ಎಚ್ಚರವೇ ಸುಬ್ಬಣ್ಣ ಸಾರ್ಥಕವಾಗಿ ಬದುಕಲು ಸಾಧ್ಯವಾಯಿತು. ಸುಬ್ಬಣ್ಣ ಹೆಚ್ಚು ಕ್ರೋಧಗೊಳ್ಳುತ್ತಿದ್ದುದು ಸಮುದಾಯಕ್ಕೆ ವಂಚನೆಯಾಗುತ್ತಿದ್ದಾಗಲೇ. ಸುಬ್ಬಣ್ಣ ಇತ್ತೀಚೆಗೆ ಮಾಡಿದ ಭಾಷಣವೊಂದರಲ್ಲಿ ಹೀಗೆ ಹೇಳುತ್ತಾರೆ: ''ಗಾಂಧೀ ಅಪ್ಪಟ ಸಾಮುದಾಯಿಕ. ಅಂದರೆ ತನ್ನ ಬಳಕೆಯ ಸಮುದಾಯಗಳ ಸುಸಂಸ್ಕಾರಗಳನ್ನೆಲ್ಲ ತನ್ನದೇ ಆದ ಸ್ವಂತ ಅರಿವಾಗಿಸಿಕೊಳ್ಳುತ್ತ ಅಂತಿಮವಾಗಿ ತಾನು ಮತ್ತು ಸಮುದಾಯಗಳನ್ನು ಅಭಿನ್ನವಾಗಿಸಿಕೊಂಡವನು ಸಾಮುದಾಯಿಕ; ಅದರ ಆದರ್ಶ ಮಾದರಿ ಗಾಂಧಿ''. ಈ ಅರ್ಥದಲ್ಲಿ ಸುಬ್ಬಣ್ಣ ಕೂಡ ಒಂದು ಮಾದರಿ ಸಾಮುದಾಯಿಕ.

ನನಗೆ ಖಾಸಗಿಯಾಗಿ ಒಂದು ಸಂತೋಷವಿದೆ. ಆತನೊಂದಿಗೆ ನಾನು ಕೆಲ ಕಾಲವಾದರೂ ಒಡನಾಡಿದೆ. ಆತನಿಂದ ಅನೇಕವನ್ನು ಕಲಿತೆ.

ಅ. ರಾ. ಶ್ರೀನಿವಾಸ
ಸಂಪಾದಕ, ಮಣ್ಣಿನ ವಾಸನೆ ವಾರಪತ್ರಿಕೆ, ಎಸ್.ಬಿ.ಎಂ. ರಸ್ತೆ, ಸಾಗರ - ೫೭೭ ೪೦೧

# ಜಾಗತೀಕರಣದ ಹಿನ್ನೆಲೆಯಲ್ಲಿ ಅಭಿವೃದ್ಧಿಯ ಸವಾಲುಗಳು

ವಿಶ್ವದ ಹಲವು ದೇಶಗಳಲ್ಲಿ ಕಾರ್ಮಿಕರ ವಿರುದ್ಧ ತೀವ್ರವಾದ ಹಲ್ಲೆಗೆ ಆಯಾ ದೇಶಗಳ ಸರ್ಕಾರಗಳು ಕುಮ್ಮಕ್ಕು ನೀಡುತ್ತಿವೆ. ದೆಹಲಿಯ ಪಕ್ಕದಲ್ಲೇ ಇರುವ ಹರ್ಯಾಣದ ಗುರ್‌ಗಾಂವ್‌ನಲ್ಲಿ ನಡೆದ ಭೀಕರ ಪೊಲೀಸ್ ದುರ್ವರ್ತನೆಗೆ ಆ ರಾಜ್ಯದ ಮುಖ್ಯಮಂತ್ರಿ ನೇರವಾದ ಪ್ರೇರಕ ಮತ್ತು ಪೋಷಕ, ವಿದೇಶಿ ಬಂಡವಾಳವೆಂಬ ಮರೀಚ ಜಿಂಕೆಯ ಬೆನ್ನುಹತ್ತಿ ದೇಶದಲ್ಲಿ ದೌರ್ಜನ್ಯಗಳ ಸರ್ಪಮಾಲೆಯನ್ನು ಕಾರ್ಮಿಕರಿಗೆ ನೇತುಹಾಕಲಾಗುತ್ತಿದೆ. ಒರಿಸ್ಸಾದ ಮುಖ್ಯಮಂತ್ರಿ ಖನಿಜವನ್ನು ಮಾರುವ ಹೆಸರಿನಲ್ಲಿ ದೇಶವನ್ನೇ ಮಾರಿ ಹಣ ಲಪಟಾಯಿಸುತ್ತಿರುವುದು ಇನ್ನೂ ಪೂರ್ತಿಯಾಗಿ ಬೆಳಕಿಗೆ ಬಂದಿಲ್ಲ. ಜಾಗತೀಕರಣವೆಂಬ ಪೆಡಂಭೂತ ಸೃಷ್ಟಿಸುತ್ತಿರುವ ''ಅಭಿವೃದ್ಧಿ'' ಈ ತೆರನಾದುದು. ಗುರ್‌ಗಾಂವ್ ಪ್ರಕರಣವು ಬೇರೆ ಬೇರೆ ರೂಪಗಳಲ್ಲಿ ಎಲ್ಲೆಡೆ ಹರಡುವ ಸೂಚನೆಗಳಿವೆ. ಇದೆಲ್ಲಾ ಹೀಗೇಕೆ ನಡೆಯುತ್ತಿದೆ ? ಅದರ ಒಳಗುಟ್ಟನ್ನು ಸೈದ್ಧಾಂತಿಕವಾಗಿ ನಿರೂಪಿಸುವ ಲೇಖನ ಇಲ್ಲಿದೆ. ಅಧ್ಯಯನ ಮತ್ತು ಚರ್ಚೆಗೆ ವಿಪುಲ ಸಾಮಗ್ರಿಯನ್ನೊದಗಿಸುವ ಈ ಲೇಖನ ನಮ್ಮ ಚಿಂತನಾ ದಿಗಂತವನ್ನು ವಿಸ್ತರಿಸುತ್ತದೆ.

ಡಾ|| ಡಿ. ನರಸಿಂಹ ರೆಡ್ಡಿ

**ಜಾ**ಗತೀಕರಣ ಪ್ರಕ್ರಿಯೆಯ ಇಂದಿನ ಮಜಲು ಜಗತ್ತಿನಾದ್ಯಂತ ಜನಜೀವನದ ಮೇಲೂ ಜನರ ಕಾರ್ಯ ವಿಧಾನಗಳ ಮೇಲೂ ಹೆಚ್ಚುಹೆಚ್ಚಾಗಿ ಪ್ರಭಾವ ಬೀರುತ್ತಿರುವುದು ಸಾರ್ವಜನಿಕರಲ್ಲೂ ನೀತಿ ನಿರ್ವಹಣೆಯ ಹಾಗೂ ಸಂಶೋಧನೆಯ ಕ್ಷೇತ್ರಗಳಲ್ಲೂ ತುಂಬ ಕಾಳಜಿ ಉಂಟುಮಾಡಿ ಸಾರ್ವಜನಿಕ ಚರ್ಚೆಗೆ ಎಡೆಮಾಡಿಕೊಟ್ಟಿದೆ.

ನಾನು ಈ ಲೇಖನದಲ್ಲಿ ಜಾಗತೀಕರಣ ಪ್ರಕ್ರಿಯೆಯ ಕೇವಲ ಎರಡು ಸ್ವರೂಪಗಳ ಕಡೆಗೆ ಗಮನ ಹರಿಸಲು ಯತ್ನಿಸಿದ್ದೇನೆ. ಮೊದಲನೆಯದು, ಜಾಗತೀಕರಣವು ಒಂದು ನಿರ್ದಿಷ್ಟ ಮಾದರಿಯ ಉತ್ಪಾದನಾ ವಿಧಾನವನ್ನು ಬೆಳವಣಿಗೆಯ ಹಾಗೂ ಉದ್ಯೋಗದ ಏಕೈಕ ಪರ್ಯಾಯ ವ್ಯವಸ್ಥೆಯನ್ನಾಗಿ ಉತ್ತೇಜಿಸುತ್ತಿರುವುದು. ಇದು ದುಡಿಯುವ ಜನರ ಬಾಳಿನ ಉತ್ತಮ ಕನಸುಗಳನ್ನೆಲ್ಲ ನುಚ್ಚುನೂರು ಮಾಡುತ್ತಿದೆ, ಜಗತ್ತಿನಾದ್ಯಂತ 'ಅಶಿಷ್ಟ' ಅಥವಾ 'ಭಂಡ' ಕಾರ್ಯದ ಕಡೆಗೆ ಪ್ರವೃತ್ತಿ ಹೆಚ್ಚಿಸುತ್ತಿದೆ. ಇದಕ್ಕೆ ಪ್ರತಿಯಾಗಿ 'ಶಿಷ್ಟ' ಕಾರ್ಯದತ್ತ ಚಳವಳಿಯೂ ಬೆಳೆಯುತ್ತಿದೆಯೆನ್ನಿ. ಜಾಗತೀಕರಣದ ಎರಡನೆಯ ಸ್ವರೂಪವೆಂದರೆ ಅದು ರಾಜ್ಯವನ್ನು 'ಟೊಳ್ಳುಗೊಳಿಸುತ್ತಿರುವುದು.' ಅಂದರೆ ಅದು ರಾಜ್ಯವನ್ನು ಆರ್ಥಿಕತೆಯಿಂದಲೂ ಸಮಾಜದಿಂದಲೂ ಪ್ರತ್ಯೇಕಿಸುತ್ತಿದೆ. ಬೆಳವಣಿಗೆ ಕಾರ್ಯದಲ್ಲಿ ರಾಜ್ಯದ ಪಾತ್ರ ಏನೂ ಇಲ್ಲ ಎಂದು ಅದರ ಕಾರ್ಯವ್ಯಾಪ್ತಿಯನ್ನು ಸೀಮಿತಗೊಳಿಸುತ್ತಿದೆ.

**೧. ಜಾಗತೀಕರಣ ಹಾಗೂ 'ಶಿಷ್ಟ'ಕಾರ್ಯದ ಮುಂದಿರುವ ಸವಾಲುಗಳು**

ಜಾಗತೀಕರಣವು ಒಂದು ಸಂಕೀರ್ಣ ಪ್ರಕ್ರಿಯೆ. ಕಳೆದ ಕಾಲು ಶತಮಾನದಲ್ಲಿ ಇದು ಜಾಗತಿಕ ಆರ್ಥಿಕತೆಯ ಮೇಲೆ ತುಂಬ ಪರಿವರ್ತಕ ಪ್ರಭಾವ ಬೀರಿದೆ. ವಿಶ್ವವಾಣಿಜ್ಯ ಪ್ರಮಾಣ ಶೀಘ್ರವಾಗಿ ವಿಸ್ತರಿಸಿದೆ. ವಿದೇಶೀ ನೇರ ಬಂಡವಾಳ ಹೂಡಿಕೆ ಹೆಚ್ಚಿದೆ. ಎಲ್ಲಕ್ಕೂ ಮಿಗಿಲಾಗಿ ರಾಜ್ಯ-ರಾಜ್ಯಗಳ ಗಡಿಗಳಾಚೆ ಹಣಕಾಸಿನ ಹರಿವು ಹೆಚ್ಚಿದೆ. ಸಮಾಚಾರ ಹಾಗೂ ಸಂವಹನ ಕ್ಷೇತ್ರದಲ್ಲಿ ಅಭೂತಪೂರ್ವ ಪ್ರಗತಿ ಉಂಟಾಗಿ ಕಾಲ-ದೇಶಗಳ ಸರಹದ್ದು ಅಗಾಧವಾಗಿ ಕುಗ್ಗಿರುವುದು ಈ ಹರಿವು ಹೆಚ್ಚಲು ಕಾರಣವಾಗಿದೆ. ರಾಜಕೀಯವಾಗಿ, ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ದೇಶಗಳಲ್ಲಿ ಸಮಾಜವಾದಿ ವ್ಯವಸ್ಥೆ ಕೊನೆಗೊಂಡುದು ಅಂತಾರಾಷ್ಟ್ರೀಯ ಸಂಬಂಧಗಳನ್ನು ಮೂಲಭೂತವಾಗಿ ಪುನಸ್ಸಂಘಟಿಸಿದೆ. ಸಾರ್ವಭೌಮ ರಾಜ್ಯಗಳ ಪ್ರಾದೇಶಿಕ ಸರಹದ್ದು ಹಾಗೂ ಕಾರ್ಯನಿರ್ವಹಣಾ ವಿಧಾನಗಳನ್ನು ಪುನರ್‌ನಿರೂಪಿಸಲಾಗುತ್ತಿದೆ. ಅದೇ ಹೊತ್ತಿನಲ್ಲಿ ಜಾಗತಿಕ 'ಅಧಿರಾಜ್ಯ' ಎಂಬ ಕಲ್ಪನೆಯೊಂದಕ್ಕೂ ಒತ್ತು ನೀಡಲಾಗುತ್ತಿದೆ. ಹಾಗಾಗಿ ಜಾಗತೀಕರಣವು ಅಂತಾರಾಷ್ಟ್ರೀಯ ಬಂಡವಾಳವಾದದ ರಾಜಕೀಯ ಆರ್ಥಿಕತೆಯನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಮೂಲಭೂತ ಪ್ರಕಲ್ಪನೆಗಳಲ್ಲೊಂದಾಗಿ ವಿಕಾಸಗೊಂಡಿದೆ.

ದ್ವಿತೀಯ ಜಾಗತಿಕ ಯುದ್ಧಾನಂತರ ಬಂಡವಾಳವಾದಿ ಜಗತ್ತು 'ಸುವರ್ಣಯುಗ' (೧೯೪೫-೧೯೭೩) ವೊಂದನ್ನು ಪ್ರವೇಶಿಸಿತು. 'ಕಾನೂನುಸಮ್ಮತ ನಿಯಂತ್ರಣ' ಇದರ ಮುಖ್ಯ ಲಕ್ಷಣವಾಗಿದ್ದಿತು. ಫೋರ್ಡ್ ಕಂಪನಿಯ ಸಾಮೂಹಿಕ ಉತ್ಪಾದನೆಯ ಜೊತೆಗೇ 'ಪ್ರಜಾಕಲ್ಯಾಣ ರಾಜ್ಯ'ದಡಿ ಸಾಮಾಜಿಕ ಸುಭದ್ರತೆಯೂ ಅತಿ ಶೀಘ್ರ ಗತಿಯಲ್ಲಿ ಸಂಘಟಿಸಲ್ಪಟ್ಟಿತು. ಆದರೆ ಉಗ್ರ ಪೈಪೋಟಿಯೊಂದಿಗೆ ಜಾಗತೀಕರಣವು ಕೈಗಾರಿಕಾ ಸಂಘಟನೆಯಲ್ಲೂ ನಿರ್ವಹಣೆಯಲ್ಲೂ ಭಾರಿ ಬದಲಾವಣೆಗಳನ್ನು ತಂದು ಕಾರ್ಮಿಕ ವರ್ಗವು ಉಗ್ರ ದುಷ್ಪರಿಣಾಮಗಳನ್ನು ಎದುರಿಸುವಂತೆ ಮಾಡಿತು. ಸ್ಥಿರನೆಲೆರಹಿತ ಉದ್ಯಮಗಳಿಗಾಗಿಯೂ ಬಂಡವಾಳಕ್ಕಾಗಿಯೂ ನಾನಾ ಸರಕಾರಗಳು ಹೆಚ್ಚು ಹೆಚ್ಚು ಸ್ಪರ್ಧಿಸತೊಡಗಿದಂತೆ ಕಾರ್ಮಿಕರ ಹಿತವು ನಗಣ್ಯ ಸ್ಥಾನ ಪಡೆದು ಹೆಚ್ಚು ಹೆಚ್ಚು ಉಪೇಕ್ಷಿಸಲ್ಪಡುತ್ತಿದೆ.

**ಅ) ಹೊಂದಾಣಿಕೆ :** ಉತ್ಪಾದನಾ ಸಂಘಟನೆಯಲ್ಲೂ ಶ್ರಮ ಮಾರುಕಟ್ಟೆಗಳಲ್ಲೂ ಹೇಗೆಂದರೆ ಹಾಗೆ ಹೊಂದಾಣಿಕೆ ಮಾಡುವುದು ಪ್ರಮುಖಾಂಶವಾಗಿದೆ. ಕಾರ್ಮಿಕರ ಸಂಖ್ಯೆಯನ್ನು ಯಜಮಾನನ ಆವಶ್ಯಕತೆಗೆ ತಕ್ಕಂತೆ ಹೊಂದಿಸಲಾಗುತ್ತಿದೆ. ಉತ್ಪಾದನೆಯ ಒಂದು ಪಾಲನ್ನು ಹೊರದೇಶಗಳಿಗೆ ಸಬ್‌ಕಾಂಟ್ರಾಕ್ಟ್ ನೀಡಲಾಗುತ್ತಿದೆ; ಕಾರ್ಖಾನೆಯೊಳಗೇ ಕೆಲಸದ ವೇಳೆಯನ್ನು ಹೆಚ್ಚುಕಮ್ಮಿ ಮಾಡಲಾಗುತ್ತಿದೆ; ಕಾರ್ಮಿಕರ ಕೆಲಸಗಳನ್ನೂ ವೇತನಗಳನ್ನೂ ಮಾರ್ಪಡಿಸಲಾಗುತ್ತಿದೆ. ಇದರ ಜೊತೆಗೆ ಭೌಗೋಳಿಕ ಹೊಂದಾಣಿಕೆಯನ್ನೂ ಮಾಡಲಾಗುತ್ತಿದೆ. ಭೌಗೋಳಿಕವಾಗಿ ಕೇಂದ್ರೀಕೃತವಾದ, ಸಾಮಾಜಿಕ ಸಾಮರಸ್ಯವುಳ್ಳ ಅರೆ-ಕುಶಲ ಕಾರ್ಮಿಕ ವರ್ಗದ ಸ್ಥಳದಲ್ಲಿ ಭೌಗೋಳಿಕವಾಗಿ ಹಂಚಿಹೋದ ಸಾಮಾಜಿಕ ವೈಪರೀತ್ಯವುಳ್ಳ ಕಾರ್ಮಿಕ ವರ್ಗವನ್ನು ಹೆಚ್ಚು ಹೆಚ್ಚಾಗಿ ನೇಮಿಸಿಕೊಳ್ಳಲಾಗುತ್ತಿದೆ. ಸಣ್ಣ ಪ್ರಮಾಣದ ಕೆಲಸದ ಸ್ಥಳಗಳು, ಕೆಲಸದ ಸ್ಥಳಗಳಲ್ಲಿ ಕೆಲವೇ ನೀತಿನಿಯಮಗಳು, ದುರ್ಬಲ ಕಾರ್ಮಿಕ ಸಂಸ್ಥೆಗಳು, ವ್ಯಾಪಾರೀ ಆವರ್ತಗಳಿಂದ ನಿರ್ಧರಿತವಾದ ವೇತನಗಳು – ಇವು ಇಂದಿನ ಜಾಗತೀಕರಣ ಯುಗದ ಕಾರ್ಮಿಕ ಮಾರುಕಟ್ಟೆಯ ವಿಶಿಷ್ಟ ಲಕ್ಷಣಗಳಾಗಿವೆ. ಕಳೆದ ಎರಡು ದಶಕಗಳಲ್ಲಿ ಅವ-ಕೈಗಾರಿಕೀಕರಣ ಹಾಗೂ ಕೈಗಾರಿಕಾ ಪುನಸ್ಸಂಘಟನೆಯ ಮೂಲಕ ಅನೇಕ 'ಪಾರಂಪರಿಕ' ಕಾರ್ಮಿಕ ವರ್ಗರೂಪಗಳನ್ನೂ ಶಕ್ತಿಗಳನ್ನೂ (ಉದಾ : ಸಾಮಾನ್ಯ ಶ್ರಮಜೀವಿಗಳನ್ನು ಹಾಗೂ ಯೂನಿಯನ್‌ಗಳಲ್ಲಿ ಒಂದಾದವರನ್ನೂ) ವಿಸರ್ಜಿಸಲಾಗುತ್ತಿದೆ. ಅಮೆರಿಕವು ಶ್ರಮಜೀವಿಗಳನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಬಹಳ ಕಾಲದಿಂದ ಕಾರ್ಯಸ್ಥಾನಗಳನ್ನು ಭೌಗೋಳಿಕವಾಗಿ ಹಂಚಿ

ಇರಿಸುವ ಹಾಗೂ ಕಾರ್ಮಿಕ ವರ್ಗವನ್ನೂ ಒಡೆದು ಬೇರೆ ಬೇರೆಯಾಗಿರಿಸುವ ವಿಧಾನವನ್ನು ಅನುಸರಿಸಿಕೊಂಡು ಬಂದಿದೆ. ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಹೊಸ ಉತ್ಪಾದನಾ ಕೇಂದ್ರಗಳನ್ನು ತೆರೆದಿರುವುದೂ, ಯೂನಿಯನ್‌ಗಳಲ್ಲಿ ಒಂದುಗೂಡಿರದ ಕೆಲಸಗಾರರನ್ನು ಹುಡುಕಿ ಕೆಲಸಕ್ಕೆ ನೇಮಿಸಿಕೊಳ್ಳುವುದೂ ಬಂಡವಾಳಗಾರರಿಗೆ ಕಾರ್ಮಿಕರ ಮೇಲೆ ನಿಯಂತ್ರಣ ಇರಿಸಿಕೊಳ್ಳಲು ನೆರವಾಗಿದೆ.

ನೌಕರಿ ಹೆಚ್ಚಿಸುವ ಹೆಸರಿನಲ್ಲಿ ಈ ರೀತಿಯ ಹೊಂದಾಣಿಕೆಯ ಅಮೆರಿಕನ್‌ಶೈಲಿ ಮಾರುಕಟ್ಟೆಗಳಿಗೆ ಉತ್ತೇಜನ ನೀಡಲಾಗುತ್ತಿದೆ. ಕೆಲಸದ ಸುಭದ್ರತೆಯನ್ನು ಹೆಚ್ಚಿಸಲು ಅಥವಾ ನಿವೃತ್ತಿವೇತನ ಸೌಲಭ್ಯಗಳನ್ನು ಸುಧಾರಿಸಲು ರಾಜ್ಯವು ಹಸ್ತಕ್ಷೇಪ ಮಾಡುವುದು ಕೆಲಸದ ಅದಕ್ಷತೆಗೆ ಹಾಗೂ ನಿರುದ್ಯೋಗ ಹೆಚ್ಚಳಕ್ಕೆ ದಾರಿ ಮಾಡಿ ಕೊಡುತ್ತದೆ ಎಂಬ ತುಂಬ ನೀರಸವಾದ ಸಿದ್ಧಾಂತವನ್ನು ಇದಕ್ಕೆ ಆಧಾರವಾಗಿ ಬಳಸಲಾಗುತ್ತಿದೆ. ತುಂಬ ಅನಿಯಂತ್ರಿತವಾದ ಅಮೆರಿಕನ್ ಆರ್ಥಿಕತೆಯಿಂದಾಗಿ ಅರೆ-ಕುಶಲ ಕಾರ್ಮಿಕರ ವೇತನ ಸ್ಥಗಿತಕ್ಕೆ ಇಲ್ಲವೇ ವೇತನ ಕಡಿತಕ್ಕೆ ಉತ್ತೇಜನ ದೊರೆತಂತಾಗಿದೆ. ಕುಶಲ ಕಾರ್ಮಿಕರಾದರೋ ಕಟ್ಟುನಿಟ್ಟಾದ ಕಾರ್ಯಕ್ರಮಪಟ್ಟಿ ಪಡೆದಿರುತ್ತಾರೆ. ಇತರರೊಂದಿಗೆ ಸ್ಪರ್ಧಿಸಿ ತಮಗೆ ನೀಡಲಾದ ಕಾರ್ಯವನ್ನು ಶತಾಯಗತಾಯ ಸಾಧಿಸುತ್ತಾರೆ. ಹಾಗಾಗಿ ಹೆಚ್ಚು ಲಾಭ, ಹೆಚ್ಚು ಕುಟುಂಬ ವರಮಾನ ಲಭ್ಯವಿರುತ್ತದೆ. ಆದರೆ ಇವರ ವಿಷಯದಲ್ಲೂ ಕೆಲಸದ ಸುಭದ್ರತೆ ಇರುವುದಿಲ್ಲ. ಜೊತೆಗೆ ಕಾರ್ಯದ ಒತ್ತಡವೂ ಹೆಚ್ಚಿಗಿರುತ್ತದೆ. ಹೀಗೆ ಜಾಗತೀಕರಣವು ಕಾರ್ಮಿಕರ ಜೀವನ ಶೈಲಿಯನ್ನೂ ಪರಸ್ಪರ ಸಂಬಂಧಗಳನ್ನೂ ಗಾಢವಾಗಿ ಬದಲಿಸಿದೆ. ಇಲ್ಲಿ ಕೆಲಸವೇ ಮುಖ್ಯ. ಬೇರೆಲ್ಲ – ಕೆಲಸದಲ್ಲಿನ ಮಿತ್ರರು, ಕೆಲಸಾನಂತರ ಒಡನಾಟ, ಟ್ರೇಡ್ ಯೂನಿಯನ್ ಚಟುವಟಿಕೆ, ಗುಂಪುಗಳಲ್ಲಿ ಕೆಲಸಕ್ಕೆ ಹೋಗಿಬರುವುದು, ಇವೆಲ್ಲ – ತಮ್ಮ ಸಾಮಾಜಿಕ ಮಹತ್ವವನ್ನೇ ಕಳೆದುಕೊಂಡಿವೆ. ಇಂದು ಈ ಕೆಲಸಗಾರರು ತಮ್ಮ ಕೆಲಸದಂತೆಯೇ 'ಶಾಶ್ವತವಾಗಿ ತಾತ್ಕಾಲಿಕ'ವಾಗಿದ್ದಾರೆ. ಈ ತಾತ್ಕಾಲಿಕ ಕೆಲಸಗಾರರಲ್ಲಿ ಹೆಚ್ಚಿನವರು ಮಹಿಳೆಯರು. ಕುಟುಂಬ ವರಮಾನ ಹೆಚ್ಚಿಸಲು ಅವರಿಗೆ ಇದು ಅಗತ್ಯವಾಗಿದೆ. ಕುಟುಂಬ ಸುದೃಢವಾಗಿದ್ದು ಮಕ್ಕಳ ಶಿಕ್ಷಣದ ಕಡೆಗೆ, ಖಾಸಗಿ ಬಾಳಿನ ಸಂತಸದ ಕಡೆಗೆ ಹೆಚ್ಚಿನ ಗಮನ ನೀಡಬೇಕಾದಂಥ ಕಾಲದಲ್ಲಿ ಈ ಕೆಲಸ ತಾತ್ಕಾಲಿಕತೆಯು ಕಾರ್ಮಿಕರ ಸುಖ ಸಂತೋಷಗಳನ್ನು ಮೊಟಕು ಮಾಡುತ್ತಿದೆ. ಅಮೆರಿಕದ ಈ ಹೊಂದಾಣಿಕೆಯ ಶ್ರಮ- ಮಾರುಕಟ್ಟೆಯು ಪೈಪೋಟಿಯ ಹೆಸರಿನಲ್ಲಿ ಜಗತ್ತಿನಾದ್ಯಂತ ವ್ಯಾಪಿಸುತ್ತಿದೆ. ಸಾಮಾಜಿಕ ಯೂರೋಪು ಹಾಗೂ ಸುಭದ್ರ ಜಪಾನುಗಳೂ ಇಂತಹ ಹೊಂದಾಣಿಕೆ ನೀತಿಯ ಭೀತಿಗೊಳಗಾಗಿವೆ.

ಹೊಂದಾಣಿಕೆಯ ಶ್ರಮ-ಮಾರುಕಟ್ಟೆ ಮಂತ್ರವು 'ಆರ್ಥಿಕ ದಕ್ಷತೆ'ಯ ನೆಪದಲ್ಲಿ ಕಾರ್ಮಿಕರು ವರ್ಷವರ್ಷಗಳ ಪ್ರಯಾಸದ ಹಾಗೂ ರಾಜಕೀಯ ಚಟುವಟಿಕೆಯ ಫಲವಾಗಿ ಗಳಿಸಿದ ಫಲಗಳನ್ನೆಲ್ಲ ನಾಶಗೊಳಿಸುತ್ತಿದೆ. ಶ್ರಮವನ್ನು ಇತರ ಯಾವುದೇ ಸರಕಿನಂತೆ ಹಾಗೂ ಶ್ರಮ-ಮಾರುಕಟ್ಟೆಯನ್ನು ಇತರ ಉತ್ಪನ್ನ-ಮಾರುಕಟ್ಟೆಯಂತೆ ಪರಿಗಣಿಸುವುದರಲ್ಲಿ ಇರುವ ಅಪಾಯವನ್ನು ಇದು ಎತ್ತಿ ತೋರಿಸುತ್ತದೆ. ಶ್ರಮ-ಮಾರುಕಟ್ಟೆಯ ಈ ಹೊಂದಾಣಿಕೆಯೂ ಬಂಡವಾಳ-ಮಾರುಕಟ್ಟೆಯ ಉದಾರೀಕರಣವೂ ಒಂದೇ ರೀತಿಯವಾಗಿ ಕಂಡುಬಂದರೂ ಅವು ಕಾರ್ಮಿಕರಿಗೆ ನಷ್ಟವುಂಟುಮಾಡಿ ಬಂಡವಾಳದ ರಕ್ಷಣೆಯ ಗುರಿ ಹೊಂದಿರುತ್ತವೆಂಬುದನ್ನು ಉಪೇಕ್ಷಿಸಲಾಗದು.

ಪೈಪೋಟಿ ಎನ್ನುವುದು ಶ್ರಮಿಕರಿಗಾಗಿ ಮಾಡುವ ವೆಚ್ಚಗಳ ಕಡಿತ ಅನ್ನುವುದರ ಇನ್ನೊಂದು ರೂಪವಷ್ಟೆ. ಸ್ಪರ್ಧಾತ್ಮಕತೆಯ ಇಡೀ ವಿಚಾರಧಾರೆಯೇ ದೇಶದೊಳಗೂ ಅಂತಾರಾಷ್ಟ್ರೀಯವಾಗಿಯೂ ಕಾರ್ಮಿಕರನ್ನು ವಿಭಜಿಸಿ ಅವರ ಮೇಲೆ ಆಳ್ವಿಕೆ ನಡೆಸುವುದಕ್ಕೆ ಸಹಕಾರಿಯಾಗಿದೆ. ಕಾರ್ಮಿಕರಿಗೆ ನೀಡುವ ವೇತನಗಳ ಕಡಿತದಿಂದ ದೊರಕುವ ಲಾಭರೂಪದ ಆದಾಯವನ್ನು ಅಲ್ಪಮತೀಯ ಮಾಲೀಕರಿಗಷ್ಟೆ ವಸ್ತು ಸೌಲಭ್ಯ ಒದಗಿಸುವಂತೆ ಪುನರ್‌ಹಂಚಿಕೆ ಮಾಡುವುದೇ ಅದರ ನಿಜವಾದ ಉದ್ದೇಶ. ಕಾರ್ಮಿಕರ ಜೀವನಮಟ್ಟವನ್ನು ಅಂತಾರಾಷ್ಟ್ರೀಯವಾಗಿ ಅತ್ಯಂತ ಕೆಳದರ್ಜೆಗೆ ಇಳಿಸುವುದೇ ಸ್ಪರ್ಧಾತ್ಮಕತೆಯ ಜೀವಾಳ. ಜಾಗತೀಕರಣ ವಿದ್ಯಮಾನವು ಕೈಗಾರಿಕೆಯಲ್ಲಿ ಮುಂದುವರಿದ ದೇಶಗಳಲ್ಲಿ ಅಲ್ಲಿನ ಬಹುರಾಷ್ಟ್ರೀಯ ಕಂಪನಿಗಳಿಗೆ ತುಂಬ ಸಹಕಾರಿಯಾಗಿದೆ. ಅವು ತಮ್ಮ ಉತ್ಪಾದನಾ ಘಟಕಗಳಲ್ಲಿ ಬಹುಭಾಗವನ್ನು ಕಡಿಮೆ ವೆಚ್ಚದಲ್ಲಿ ಉತ್ಪಾದನೆ ಮಾಡಲು ಸಾಧ್ಯವಿರುವ ಅಂದರೆ ಕಡಿಮೆ ವೇತನದಲ್ಲಿ ಕೆಲಸ ಮಾಡಲು ಸಿದ್ಧವಿರುವ ಕಾರ್ಮಿಕ ಬಲವಿರುವ ಸಣ್ಣ ರಾಷ್ಟ್ರಗಳಿಗೆ ವರ್ಗಾಯಿಸುತ್ತಿವೆ. ಇದರಿಂದ ಸ್ಥಳೀಯವಾಗಿ ಕಾರ್ಮಿಕ ಬಲವನ್ನು ಕುಗ್ಗಿಸಿ ಲಾಭಗಳಿಸುವ ಜೊತೆಗೇ ಅಲ್ಪವೆಚ್ಚದಲ್ಲಿ ಉತ್ಪಾದನೆ ಸಾಧಿಸಲೂ ಅವಕ್ಕೆ ಅನುಕೂಲವಾಗಿದೆ.

ಜಾಗತೀಕರಣದ ಇನ್ನೊಂದು ವಿಶಿಷ್ಟ ಪರಿಣಾಮವೆಂದರೆ ಜಗತ್ತಿನಾದ್ಯಂತ ತಾತ್ಕಾಲಿಕ ಕಾರ್ಮಿಕರ ದೊಡ್ಡ ಪಡೆಯ ನಿರ್ಮಾಣ. ಕೈಗಾರಿಕೀಕೃತ ಹಾಗೂ ಅಭಿವೃದ್ಧಿಶೀಲ ದೇಶಗಳೆರಡರಲ್ಲೂ 'ಜೀವನಪರ್ಯಂತ ಕೆಲಸ' ಎಂಬ ಪ್ರಕಲ್ಪನೆ ಗತಕಾಲಕ್ಕೆ ಸರಿದಿದೆ. ಅನೇಕ ಸೇವಾಕಾರ್ಯಗಳಲ್ಲೂ ವೃತ್ತಿಪರ ಕಸುಬುಗಳಲ್ಲೂ ತಾತ್ಕಾಲಿಕ, ಸೋಪಾಧಿಕ ಹಾಗೂ ಅಸ್ಥಿರ ನೌಕರರ ಸಂಖ್ಯೆ ಹೆಚ್ಚುತ್ತಿದೆ. ತಾತ್ಕಾಲಿಕ, ಅರೆ-ಕಾಲಿಕ, ಅನಿಯತ ಹಾಗೂ ಕಡಿಮೆ ಕೂಲಿ ಕೆಲಸಗಳೇ ಎಲ್ಲೆಲ್ಲೂ ರಾರಾಜಿಸುತ್ತಿವೆ. ವಿಕಸಿತ ದೇಶಗಳನ್ನು 'ಮೂರನೇ ಎರಡು ಪಾಲು' ಸಮಾಜಗಳನ್ನಾಗಿ ಉಲ್ಲೇಖಿಸಲಾಗುತ್ತಿದೆ; ಏಕೆಂದರೆ, ಅವುಗಳಲ್ಲಿ ಮೂರನೇ ಒಂದು ಪಾಲು ಜನ ದೀರ್ಘಕಾಲ ನಿರುದ್ಯೋಗಿಗಳಾಗಿ ಇಲ್ಲವೇ ಅನಿಶ್ಚಿತ ನೌಕರಿಗಳೊಂದಿಗೆ ನಗಣ್ಯರಾಗಿಬಿಟ್ಟಿದ್ದಾರೆ. ಸ್ಥಿರ, ಸುಸಂಘಟಿತ ನೌಕರಿಗೆ ಹೆಸರಾಂತ ಜಪಾನಿನಲ್ಲೇ ಅರೆ-ಕಾಲಿಕ ನೌಕರಿ ೧೯೮೦ರ ಆರಂಭದಲ್ಲಿ ಶೇ. ೧೬ ರಷ್ಟಿದ್ದುದು ೧೯೯೩ರಲ್ಲಿ ಶೇ.೩೧ಕ್ಕೆ ಏರಿದೆ. ಇಂಗ್ಲೆಂಡು, ಅಮೆರಿಕಾ, ಕೆನಡಾಗಳಲ್ಲೂ ಮನೆಗಳಲ್ಲೇ ವಸ್ತ್ರ ತಯಾರಿಸುವ ಹಾಗೂ ಗೃಹ ಮೋಟಾರು ಕಾರು ಕೈಗಾರಿಕೆಗಳು ಪುನಃ ಕಾಣಿಸಿಕೊಂಡಿವೆ. ಕೆನಡಾದಲ್ಲಿ ಉದ್ಯೋಗ ಪ್ರಮಾಣ ೧೯೭೦ರಿಂದೀಚೆಗೆ ಬಹು ಕೆಳ ಮಟ್ಟಕ್ಕೆ ಕುಸಿದಿದೆ. ಅಮೆರಿಕನ್ ಮಾದರಿಯಂತೆ ಕುಶಲ-ಅಕುಶಲ ಕಾರ್ಮಿಕರ ನಡುವಿನ ಅಂತರ ಮಿತಿಮೀರಿದೆ. ನಿರುದ್ಯೋಗ, ವೇತನಸ್ಥಗಿತ, ಅಸಮಾನತೆ, ಹೆಚ್ಚು ಹೆಚ್ಚು ಅಭದ್ರತೆ – ಇವೆಲ್ಲ ತೀವ್ರಗೊಂಡಿವೆ. ಸ್ಟಾಂಡರ್ಡ್-ಅಲ್ಲದ, ಅರೆ-ಕಾಲಿಕ, ಅಲ್ಪ-ಕಾಲಿಕ, ತಾತ್ಕಾಲಿಕ-ನೆರವಿನ ಕೆಲಸಗಳು ಹೆಚ್ಚುತ್ತಿವೆ. ಕಮ್ಮಿ ವೇತನ, ಅತ್ಯಲ್ಪ ಅನುಕೂಲಗಳು, ಅತ್ಯಂತ ಕಡಿಮೆ ಸುಭದ್ರತೆ, ಇವು ಈ ಕೆಲಸಗಳ ಮುಖ್ಯ ಲಕ್ಷಣಗಳಾಗಿವೆ.

ಜಾಗತೀಕರಣವು ಅಭಿವೃದ್ಧಿಶೀಲ ದೇಶಗಳಲ್ಲಿ ಸಾಂದರ್ಭಿಕತೆ ಹಾಗೂ ಅವಿಧ್ಯುಕ್ತತೆ ಲಕ್ಷಣಗಳನ್ನು ಹೆಚ್ಚಿಸಿದೆ. ನೌಕರಿ ಅವಕಾಶಗಳನ್ನು ತಗ್ಗಿಸಿ ನಿರುದ್ಯೋಗಿ ದುಡಿಯುವ ಬಡಜನರ ಸಂಖ್ಯೆ ಹೆಚ್ಚಿಸಿ ಸಮಾಜದಲ್ಲಿ ವಿವಿಧ ಜನಸಮುದಾಯಗಳ ನಡುವೆ ಅಂತರ ವೃದ್ಧಿಗೊಳಿಸಿದೆ. ಸಾರ್ವಜನಿಕ ವಿಭಾಗದ ಖಾಸಗೀಕರಣ, ಸಬ್-ಕಾಂಟ್ರಾಕ್ಟ್ ಹಾಗೂ ಗೃಹಾಧಾರಿತ ಉತ್ಪಾದನೆ ಮೂಲಕ ಉತ್ಪಾದನೆಯ ವಿಕೇಂದ್ರೀಕರಣ, ಶ್ರಮ ಮಾರುಕಟ್ಟೆಗಳ ಕ್ರಮರಾಹಿತ್ಯತೆ, ಸಾಂಪ್ರದಾಯಿಕ ವಿಭಾಗದಿಂದ ಅಸಾಂಪ್ರದಾಯಿಕ ವಿಭಾಗಕ್ಕೆ ಕೆಲಸಗಳ ವರ್ಗಾವಣೆ – ಇವೆಲ್ಲ ಉತ್ಪಾದನೆಯ ಕರ್ತೃಗಳಾದ ಶ್ರಮಿಕರ ಸ್ಥಿತಿಯನ್ನು ಶಿಥಿಲಗೊಳಿಸಿವೆ, ಒಂದು ವರ್ಗವಾಗಿ ಕಾರ್ಮಿಕರ ಅಂತಸ್ತನ್ನು ಕುಗ್ಗಿಸಿವೆ. ಸಬ್-ಕಾಂಟ್ರಾಕ್ಟ್ ಪದ್ಧತಿಯು ಜಪಾನಿನಲ್ಲೂ ಆಗ್ನೇಯ ಏಷ್ಯ ದೇಶಗಳಲ್ಲೂ ಬಡಜನರ ಶೋಷಣೆಯನ್ನು ಮಿತಿಮೀರಿ ಹೆಚ್ಚಿಸಿದೆ. ಸಾಮಾನು ಸರಬರಾಜು ಮಾಡುವ ಸಣ್ಣ ಕಂಪನಿಗಳ ಮಧ್ಯೆ ಪೈಪೋಟಿ ಉಗ್ರರೂಪತಾಳಿ ದೊಡ್ಡ ಕಂಪನಿಗಳು ಇದರ ದುರುಪಯೋಗ ಪಡೆಯುತ್ತಿವೆ. ಸಣ್ಣ ಅಸಾಂಪ್ರದಾಯಿಕ ಸಂಸ್ಥೆಗಳಿಗೆ ಸಬ್-ಕಾಂಟ್ರಕ್ಟ್ ನೀಡುವ ಮೂಲಕ ದೊಡ್ಡ ಕಂಪನಿಗಳು ಸಾಮಾಜಿಕ ಸುಭದ್ರತೆ ಹಾಗೂ ಉನ್ನತ ವೇತನ ವೆಚ್ಚಗಳನ್ನು ನಿವಾರಿಸಿಕೊಳ್ಳುತ್ತಿವೆ. ಈ ರೀತಿಯ ಇಬ್ಬಗೆ ಉತ್ಪಾದನಾ ವ್ಯವಸ್ಥೆಯಲ್ಲಿರುವ ಬಹುಮಟ್ಟಿಗಿನ ಅಪಾಯ ಸಂಭವತೆಯನ್ನೂ ಕಷ್ಟಕೋಟಲೆ ಹಾಗೂ ಅನಿಶ್ಚಿತತೆಗಳನ್ನೂ ಬೆವರು ಸುರಿಸಿ ದುಡಿಯುವ ದುರದೃಷ್ಟ ಕಾರ್ಮಿಕರ ಹೆಗಲುಗಳ ಮೇಲಕ್ಕೆ ವರ್ಗಾಯಿಸಲಾಗುತ್ತಿದೆ.

ಜಾಗತೀಕರಣ ಪ್ರಕ್ರಿಯೆಯೂ, ವಿಶೇಷವಾಗಿ ಏಷ್ಯನ್ ದೇಶಗಳಲ್ಲಿ, ಮಹಿಳಾ ನೌಕರರ ಸಂಖ್ಯೆಯನ್ನು ಹೆಚ್ಚಿಸಿದೆ. ಆದರೆ ಕೆಲವು ಕೆಲವು ಅಲ್ಪ-ವೇತನದ ಅಕುಶಲ ಕ್ಷೇತ್ರಗಳಲ್ಲಷ್ಟೆ ಇದು ಕಂಡುಬರುತ್ತದೆ. ೧೯೮೦-೧೯೯೦ರ ದಶಕಗಳಲ್ಲಿ ಕೈಗಾರಿಕಾ ಕಾರ್ಮಿಕರ ಸಂಖ್ಯೆಯಲ್ಲಿ ಸ್ತ್ರೀಯರ ಪಾಲು ಹೆಚ್ಚಿತು. ಕಮ್ಮಿ ವೇತನ ನೀಡಿ ಹೆಚ್ಚಿನ ಕಾಲ ಕೆಲಸ ಪಡೆಯುವುದು ಇದರ ಉದ್ದೇಶ. ಆಗ್ನೇಯ ಏಷ್ಯನ್ ದೇಶಗಳಲ್ಲಿ, ರಫ್ತು-ಉದ್ದೇಶಿತ ಅಲ್ಪ-ತಾಂತ್ರಿಕತೆಯ ಅರಿವೆ ಗಿರಣಿಗಳು, ಉಡುಪು ತಯಾರಿಕೆ, ಪಾದರಕ್ಷೆ ಹಾಗೂ ಎಲೆಕ್ಟ್ರಾನಿಕ್ ಕೈಗಾರಿಕೆಗಳಲ್ಲಿ ಸ್ತ್ರೀ-ಕಾರ್ಮಿಕರ ನೇಮಕಾತಿ ಹೆಚ್ಚಿತು. ಮುಕ್ತ ವ್ಯಾಪಾರ ಹಾಗೂ ಯಂತ್ರತಾಂತ್ರಿಕ ಪ್ರಗತಿಯ ಪರಿಣಾಮವಾಗಿ ಕಾರ್ಮಿಕರ ಮಧ್ಯೆ ಉನ್ನತ ಕೌಶಲ್ಯದ ಉನ್ನತ ವೇತನದ ಒಂದು ಗುಂಪು, ಅಲ್ಪವೇತನದ ಅಕುಶಲ ಕಾರ್ಮಿಕರ ಇನ್ನೊಂದು ಗುಂಪು – ಹೀಗೆ ವಿಭಜನೆ ಏರ್ಪಟ್ಟಿದೆ. ಸಬ್-ಕಾಂಟ್ರಾಕ್ಟ್ ನೀಡಿಕೆ, ಗೃಹಾಧಾರಿತ ಉತ್ಪಾದನೆ ಇವೂ ಮಹಿಳಾ ಕಾರ್ಮಿಕರನ್ನು ಕೆಳದರ್ಜೆಯ ನೌಕರಿಯತ್ತ ನೂಕಿವೆ. 'ಸಮಾನ ಕೆಲಸಕ್ಕೆ ಸಮಾನ ವೇತನ' ಎಂಬ ಐಎಲ್‌ಒ ನಿಯಮಕ್ಕೂ ಇಲ್ಲಿ ವಿದಾಯ ಹೇಳಲಾಗಿದೆ.

'ಗೃಹಕಾರ್ಮಿಕ' ಎಂಬುದು ಕೆಳದರ್ಜೆ ಶ್ರಮಿಕರ ಮತ್ತೊಂದು ಪಂಗಡ.

ಇದರಲ್ಲೂ ಮಹಿಳೆಯರ ಪಾಲು ಶೀಘ್ರವಾಗಿ ಏರುತ್ತಿದೆ. ಮನೆಯಲ್ಲೇ ಕೆಲಸ ಮಾಡುವವರೊಂದಿಗೆ ಕೆಲಸ ಒಪ್ಪಂದ ಮಾಡಿಕೊಳ್ಳಲು ಮಾಲೀಕರು ಹೆಚ್ಚು ಆಸ್ಥೆ ವಹಿಸುತ್ತಾರೆ, ಏಕೆಂದರೆ, ಇಂಥವರೊಂದಿಗೆ ವೆಚ್ಚ ಕನಿಷ್ಠತಮವಾಗಿರುತ್ತದೆ. ಇಂಥ ಕಾರ್ಮಿಕರು ಅಧಿ ರಚನೆ, ಮರಮುಟ್ಟು ಹಾಗೂ ಸಜ್ಜುಗಳನ್ನು ಒದಗಿಸಿ ಬಹುವೇಳೆ ಕನಿಷ್ಠತಮ ವೇತನಕ್ಕೂ ಕೆಳಮಟ್ಟದ ವೇತನಕ್ಕೆ ಕೆಲಸ ಮಾಡುತ್ತ ವಾಸ್ತವವಾಗಿ ಬಂಡವಾಳ ವಾದದ ಬೆಳವಣಿಗೆಗೆ ಸಹಾಯ ಮಾಡುತ್ತಾರೆಂದೇ ಹೇಳಬೇಕು. ಮಹಿಳಾ ಕಾರ್ಮಿಕರ ಮೇಲೆ ಜಾಗತೀಕರಣದ ಪ್ರಭಾವ ಸಾಮಾನ್ಯವಾಗಿ ಭಾವಿಸಿರುವುದಕ್ಕಿಂತ ಹೆಚ್ಚು ಸಂಕೀರ್ಣವಾದುದು. ಅದು ಕೆಲವು 'ಗಣ್ಯ' ಸ್ತ್ರೀಯರಿಗೆ ಸ್ವಲ್ಪ ಅವಕಾಶಗಳನ್ನು ತೆರೆದು ನೀಡಿರಬಹುದಾದರೂ ಇತರ ಅನೇಕ ಮಹಿಳೆಯರನ್ನು ದುರ್ಗತಿಗೆ ದೂಡಿದೆ. ಅದು ಕಾರ್ಮಿಕ ವರ್ಗದಲ್ಲಿ ಹೆಂಗಸರ ಸಂಖ್ಯೆಯನ್ನು ಹೆಚ್ಚಿಸುವುದರ ಜೊತೆಗೆ ಅವರು ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವಂತೆಯೂ ಪ್ರೇರಿಸುತ್ತದೆ.

**೨. ಅಸಮತೆ, ನಿರುದ್ಯೋಗ ಹಾಗೂ ಕೆಲಸ ಅಭದ್ರತೆ**

ಜಾಗತೀಕರಣದ ಇಂದಿನ ಮಜಲಿನ ವಿಶಿಷ್ಟ ಲಕ್ಷಣವೆಂದರೆ ಅದು ಅಸಮತೆಗಳ ಪ್ರಮಾಣವನ್ನು ಹೆಚ್ಚಿಸುತ್ತಿರುವುದು. ಇದು ಅಲ್ಪಾಭಿವೃದ್ಧಿ ದೇಶಗಳಿಗಿಂತ ಕೈಗಾರಿಕಾಭಿವೃದ್ಧಿಯನ್ನೈದ ದೇಶಗಳಲ್ಲಿ ಹೆಚ್ಚಾಗಿದೆ. ನಿರುದ್ಯೋಗ ಹೆಚ್ಚುತ್ತಿರುವುದೂ ಈ ಮಜಲಿನಲ್ಲಿ ಕಂಡುಬರುವ ಮತ್ತೊಂದು ಕಾಳಜಿ. ಐಎಲ್‌ಓ ವರದಿ ಪ್ರಕಾರ ಯೂರೋಪಿಯನ್ ಯೂನಿಯನ್‌ನಲ್ಲಿ ನಿರುದ್ಯೋಗ ಪ್ರಮಾಣ ೧೯೯೬ರ ಜುಲೈನಲ್ಲಿ ಸುಮಾರು ಶೇ.೧೧ ರಷ್ಟಿದ್ದುದು ಆರ್ಥಿಕ ಬೆಳವಣಿಗೆಯ ಫಲವಾಗಿ ೨೦೦೨ರಲ್ಲಿ ಶೇ. ೮ಕ್ಕೆ ಇಳಿಯಿತು. ಆಸ್ಟ್ರೇಲಿಯ, ಜಪಾನ್‌ಗಳಲ್ಲಿ ಈಚೆಗಿನ ವರ್ಷಗಳಲ್ಲೂ ನಿರುದ್ಯೋಗ ಅತಿ ಹೆಚ್ಚಾಗಿದ್ದಿತು. ಮಧ್ಯ ಹಾಗೂ ಪೂರ್ವ ಯೂರೋಪಿನ ದೇಶಗಳಲ್ಲಿ ಅದು ಶೇ. ೧೧ ರಷ್ಟಾಗಿದ್ದಿತು. ದಕ್ಷಿಣ ಏಷ್ಯದಲ್ಲಿ ಶ್ರೀಲಂಕಾ ಒಂದನ್ನು ಬಿಟ್ಟು ಉಳಿದೆಲ್ಲ ದೇಶಗಳಲ್ಲೂ ನೌಕರಿಯ ಬೆಳವಣಿಗೆ ಇಳಿಮುಖವಾಗಿದ್ದಿತು. ತೈವಾನ್‌ನ 'ಆರ್ಥಿಕ ಪವಾಡ'ಕ್ಕೆ ಕಾರಣವಾಗಿದ್ದ ಅರಿವೆ, ಉಡುಪು, ಪಾದರಕ್ಷೆ ಹಾಗೂ ಎಲೆಕ್ಟ್ರಾನಿಕ್ ಯಂತ್ರ ಸ್ಥಾವರಗಳು ೧೯೮೦ರ ದಶಕದಲ್ಲಿ ಜಾಗತೀಕರಣ ಪ್ರಾರಂಭವಾಗಿ ಬಂಡವಾಳ ಹೊರಹೋಗತೊಡಗಿದಾಗ ಒಂದಾದ ಮೇಲೊಂದರಂತೆ ಮುಚ್ಚತೊಡಗಿದವು. ೧೯೯೩-೧೯೯೫ರ ನಡುವೆ ೧೭೪,೦೦೦ಕ್ಕೂ ಹೆಚ್ಚು ಕಂಪನಿಗಳು ನಿಷ್ಕ್ರಿಯವಾದವು, ಸಹಸ್ರಾರು ಕಾರ್ಮಿಕರು ಕೆಲಸ ಕಳೆದುಕೊಂಡರಲ್ಲದೆ ಗತವರ್ಷಗಳ ಬಾಕಿ ಇದ್ದ ವೇತನಗಳನ್ನೂ ಪಡೆಯದಾದರು. ಇವರಲ್ಲಿ ಅರ್ಧಕ್ಕೂ ಹೆಚ್ಚು ಮಂದಿ ಮಹಿಳೆಯರಾಗಿದ್ದರು.

೨೧ನೆಯ ಶತಮಾನದ ಆರಂಭದಲ್ಲಿ ಸುಮಾರು ೬೫,೦೦೦ ಬಹುರಾಷ್ಟ್ರೀಯ ಕಂಪನಿಗಳು ೮,೫೦,೦೦೦ ವಿದೇಶೀ ಅಂಗಸಂಸ್ಥೆಗಳ ಮೂಲಕ ಜಾಗತಿಕ ಉತ್ಪಾದನಾ ವ್ಯವಸ್ಥೆ ಹಾಗೂ ಸರಬರಾಜು ಸರಣಿಗಳನ್ನು ನಿರ್ವಹಿಸುತ್ತಿದ್ದವು. ಎಲೆಕ್ಟ್ರಾನಿಕ್ಸ್, ಸೆಮಿ-ಕಂಡಕ್ಟರ್ಸ್ ಇತ್ಯಾದಿ ಉನ್ನತ ಯಂತ್ರಕಲಾ ಕೈಗಾರಿಕಾ ಕ್ಷೇತ್ರದಲ್ಲಿ ಅರಿವೆ, ಉಡುಪು, ಪಾದರಕ್ಷೆ ಇತ್ಯಾದಿ ತೀವ್ರಶ್ರಮದ ಬಳಕೆ ವಸ್ತುಗಳ ಕ್ಷೇತ್ರದಲ್ಲಿ ಹಾಗೂ ಸಾಫ್ಟ್‌ವೇರ್ ವಿಕಸನ, ಹಣಕಾಸು ಸೇವೆಗಳಂಥ ಸೇವಾ ವಿಭಾಗಗಳಲ್ಲಿ ಇಂತಹ ಜಾಗತಿಕ ಉತ್ಪಾದನಾ ಪದ್ಧತಿಗಳು ಹೆಚ್ಚು ಎದ್ದುಕಾಣುತ್ತವೆ. ಉನ್ನತ ಯಂತ್ರಕಲಾ ಕೈಗಾರಿಕೆಗಳಲ್ಲಿ ಯಂತ್ರ ಭಾಗಗಳ ಹಾಗೂ ಘಟಕಗಳ ಉತ್ಪಾದನೆ ಅಭಿವೃದ್ಧಿಶೀಲ ದೇಶಗಳಲ್ಲಾದರೆ, ಸಂಶೋಧನೆ ಮತ್ತಿತರ ಮೇಲ್ಮಟ್ಟದ ಬೌದ್ಧಿಕ ಚಟುವಟಿಕೆಗಳು ವಿಕಸಿತ ದೇಶಗಳಲ್ಲಾಗುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳು ಉತ್ಪನ್ನಗಳ ವಿನ್ಯಾಸ ಹಾಗೂ ಗುಣಮಟ್ಟ ನಿರ್ಧರಿಸಿ ಉತ್ಪಾದನಾ ಕಾರ್ಯವನ್ನು ಅಭಿವೃದ್ಧಿಶೀಲ ದೇಶಗಳ ಸ್ಥಳೀಯ ಸಂಸ್ಥೆಗಳಿಗೆ ವಹಿಸುತ್ತಿವೆ.

ಕೈಗಾರಿಕಾ ವಿಕಸಿತ ದೇಶಗಳಲ್ಲಿ ಉತ್ಪಾದನಾ ಸಂಸ್ಥೆಗಳು ನೌಕರ ವರ್ಗವನ್ನು 'ಒಳತಿರುಳಿನ' ಹಾಗೂ 'ಮೇಲು ಮೇಲಿನ' ಗುಂಪುಗಳನ್ನಾಗಿ ವಿಭಜಿಸುತ್ತವೆ. 'ಒಳತಿರುಳಿನ' ನೌಕರರ ವೃತ್ತಿ ಶಾಶ್ವತ, ಮೇಲು ಮೇಲಿನವರದು ತಾತ್ಕಾಲಿಕ. ತಾತ್ಕಾಲಿಕ ನೌಕರರ ವಿಷಯದಲ್ಲಿ ಔಟ್-ಸೋರ್ಸಿಂಗ್, ಸಬ್-ಕಾಂಟ್ರಾಕ್ಟಿಂಗ್ ಹಾಗೂ ಸ್ವಯಂ ನೇಮಕ ವಿಧಾನ

## ಎಮರ್ಜೆನ್ಸಿ

**ಅವರು**
ನನ್ನ ಓದುವ ಕೋಣೆಯ ಮೇಲೆ
ಕಣ್ಣಿಟ್ಟಿದ್ದಾರೆ.
**ಅಲ್ಲಿ**
ಬುದ್ಧ ಬಸವ ಗಾಂಧಿ
ಮಾರ್ಕ್ಸ್ ಲೆನಿನ್ ಮಾವೋ
ಅಂಬೇಡ್ಕರ್ ಲೋಹಿಯಾ
ಮುಂತಾದವರ ಕೃತಿಗಳಿವೆ.
ನನಗೆ ತುಂಬ ಭಯವಾಗುತ್ತಿದೆ.
ಅವುಗಳನ್ನು ಸುಟ್ಟುಬಿಡಬೇಕೆಂದು
ತೀರ್ಮಾನಿಸಿದ್ದೇನೆ.



ಅವರು
ನನ್ನ ಮಾತುಗಳನ್ನು
ಕದ್ದು ಆಲಿಸುತ್ತಿದ್ದಾರೆ.
ಉರಿಯುವ ಸೂರ್ಯನ ಕೆಂಪಿನ ಬಗ್ಗೆ
ಹರಿಯುವ ನದಿಯ ರಭಸದ ಬಗ್ಗೆ
ಹಾಡುವ ಹಕ್ಕಿಯ ಕಂಠದ ಬಗ್ಗೆ
ಮಾತಾಡುವಾಗ
ನನಗೆ ತುಂಬ ಭಯವಾಗುತ್ತದೆ.
ಮಾತಾಡುವುದನ್ನೇ ಬಿಟ್ಟುಬಿಡಬೇಕೆಂದು
ತೀರ್ಮಾನಿಸಿದ್ದೇನೆ.

ಅವರು
ನನ್ನ ಕವಿತೆಗಳನ್ನು
ಕಣ್ಣಲ್ಲಿ ಕಣ್ಣಿಟ್ಟು ಓದುತ್ತಿದ್ದಾರೆ.
ಸೌಹಾರ್ದತೆ ಶಾಂತಿ ಸಮಾನತೆ ಮನುಷ್ಯತ್ವಗಳ
ಬಗ್ಗೆ ಬರೆದಿರುವುದರಿಂದ
ನನ್ನಗೆ ತುಂಬ ಭಯವಾಗುತ್ತಿದೆ.
ಕವಿತೆಗಳನ್ನೆಲ್ಲ ಹಿಂದಕ್ಕೆ ಪಡೆಯಲು
ತೀರ್ಮಾನಿಸಿದ್ದೇನೆ.
ಯಾಕೆಂದರೆ
ನಾನು ಪ್ರಜಾಪ್ರಭುತ್ವಕ್ಕೆ ಬದ್ಧನಾಗಬೇಕಿದೆ.



ಎಸ್. ಡಿ. ಒಕ್ಕುಂದ
ಶ್ರೀ ಸಿ.ಪಿ.ಪ್ರ.ದ. ಕಾಲೇಜು, ನರಗುಂದ, ಗದಗ ಜಿಲ್ಲೆ

ಗಳನ್ನು ಬಳಸಲಾಗುತ್ತದೆ. ಇದರಿಂದಾಗಿ ಕುಶಲ ಹಾಗೂ ಅಕುಶಲ ಕಾರ್ಮಿಕರ ನಡುವಿನ ಅಂತರ ಹೆಚ್ಚಾಗುತ್ತಿದೆ. ಈ ಎಲ್ಲ ಏರ್ಪಾಟುಗಳ ಮುಖ್ಯ ಉದ್ದೇಶ ಶ್ರಮಿಕರ ಸಂಘಟನೆಗಳ ಶಕ್ತಿ ಕುಂದಿಸಿ ಅಸಂಘಟಿತ ಬಂಡವಾಳವಾದದ ವಿಕಸನಕ್ಕೆ ನೆರವಾಗುವುದು.

ಈ ಜಾಗತಿಕ ಪ್ರವೃತ್ತಿಗಳಿಗೂ ಭಾರತದಲ್ಲಿ ಕಂಡು ಬರುತ್ತಿರುವ ಪರಿಸ್ಥಿತಿಗೂ ನಡುವೆ ಎದ್ದು ಕಾಣುವಂಥ ಸಾಮ್ಯತೆ ಇದೆ. ಭಾರತೀಯ ಆರ್ಥಿಕತೆಯು ಜಾಗತಿಕ ಆರ್ಥಿಕತೆಯೊಂದಿಗೆ ಮಿಳನಗೊಳ್ಳುತ್ತಿರುವುದರ ನೇರ ಪರಿಣಾಮವಾಗಿದೆ ಇದು. ಕಾರ್ಮಿಕರ ಸಾಮಾಜಿಕ ಸುಭದ್ರತೆ ಹಾಗೂ ಸುರಕ್ಷಿತತೆ ಇಲ್ಲವಾಗುತ್ತಿವೆ. ರಾಜ್ಯವೇ ತಾತ್ಕಾಲಿಕ ಕಾರ್ಮಿಕರಿಗೂ ಸಾಮಾಜಿಕ ಸುರಕ್ಷಿತತೆಯನ್ನು ಖಚಿತಪಡಿಸಿಕೊಡುವುದು ಇದನ್ನು ತಪ್ಪಿಸುವ ಏಕೈಕ ಮಾರ್ಗವಾಗಿದೆ.

ಕಾರ್ಯಜಗತ್ತೇ ನಿಜವಾದ ಸ್ವಾತಂತ್ರ್ಯದ ಜಗತ್ತು; ಕಾರ್ಯದಲ್ಲಿ ಸೃಜನಾತ್ಮಕವಾಗಿರುವಂತಹ ಸ್ವಾತಂತ್ರ್ಯವೇ ಮಾನವ ಸುಖಸಂತೋಷಗಳ ಸಾರ, ಎಂದು ಮಾರ್ಕ್ಸ್ ಭಾವಿಸಿದ್ದರು. ಆದರಿಂದು ಇದಕ್ಕೆ ವಿರುದ್ಧವಾದುದು ಜರುಗುತ್ತಿದೆ. ಮಾನವ ಶ್ರಮವನ್ನು ಒಂದು ಸರಕನ್ನಾಗಿ ಭಾವಿಸಲಾಗುತ್ತಿದೆ. ಶ್ರಮವು ಸಾಮಾಜಿಕ ಚಟುವಟಿಕೆಯ ಅವಿಭಾಜ್ಯ ಅಂಗ. ಅದಕ್ಕೆ ಸಂರಕ್ಷಣೆ ಅತ್ಯಗತ್ಯ. ಇದಕ್ಕೆ ಬದಲಾಗಿ ಇಂದು ಬಂಡವಾಳಶಾಹಿ ಕಾರ್ಯವೇ ಸಾಮಾಜಿಕ ಜೀವನದ ಎಲ್ಲ ಸ್ವರೂಪಗಳ ಸಂಘಟಿತ ಸೂತ್ರವಾಗಿದೆ.

**೩. ಶಿಷ್ಟಕಾರ್ಯ**

'ಶಿಷ್ಟಕಾರ್ಯ' ಅನ್ನುವುದು ನೌಕರಿಯಲ್ಲಿ ಇಲ್ಲವೇ ಉದ್ಯೋಗದಲ್ಲಿ ಮಾಡುವ 'ಕಾರ್ಯ'ಕ್ಕಿಂತ ವಿಶಾಲವಾದುದು. ಕೂಲಿಕೆಲಸ, ಸ್ವಯಂ-ಉದ್ಯೋಗ, ಮನೆಗೆಲಸ ಇವೆಲ್ಲವೂ ಇದರ ವ್ಯಾಪ್ತಿಯಲ್ಲಿ ಬರುತ್ತವೆ. ಒಂದುಗೂಡುವ ಸ್ವಾತಂತ್ರ್ಯ, ಸಾಮೂಹಿಕ ಚೌಕಾಸಿ, ತಾರತಮ್ಯ ಹಾಗೂ ಬಾಲದುಡಿಮೆ ಇಲ್ಲದಿರುವುದು ಇದರ ಮುಖ್ಯ ಲಕ್ಷಣ. ದೃಢವಾದ ನೈತಿಕ ಸೂತ್ರಗಳೇ ಶಿಷ್ಟಕಾರ್ಯದ ಆಧಾರ. 'ಕಮ್ಮಿ ಕೂಲಿಯ ಕೆಟ್ಟ ಕೆಲಸವು ಕೆಲಸವೇ ಇಲ್ಲದಿರುವುದಕ್ಕಿಂತ ಉತ್ತಮ' ಎನ್ನುವುದು ಅನೈತಿಕ. ಅದು ಶಿಷ್ಟಕಾರ್ಯಕ್ಕೆ ವಿಲಕ್ಷಣವಾದುದು. ಬಲವಂತದ ದುಡಿಮೆ, ಬಾಲಶ್ರಮ, ಅಲ್ಪ-ಉತ್ಪಾದಕತೆಯ ಅನೌಪಚಾರಿಕ ವಿಭಾಗದ ಕೆಲಸಗಳು – ಇವು ಯಾವತ್ತೂ ಕೆಟ್ಟ ಕೆಲಸಗಳೇ. ಐಎಲ್‌ಓ ಸಂಸ್ಥೆಯು ಶಿಷ್ಟಕಾರ್ಯವನ್ನು ರಾಷ್ಟ್ರೀಯ ಮಟ್ಟದಲ್ಲಿ ವಿಕಸನ ಗುರಿಯುಳ್ಳದ್ದನ್ನಾಗಿಯೂ, ಜಾಗತಿಕ ಮಟ್ಟದಲ್ಲಿ ಮಾರ್ಗದರ್ಶಕ ಸೂತ್ರವನ್ನಾಗಿಯೂ ವರ್ಣಿಸಿದೆ. ಅದು 'ಶಿಷ್ಟ ಕಾರ್ಯ'ವನ್ನು ರಾಷ್ಟ್ರೀಯ ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಬೇಕೆಂದು ಸದಸ್ಯ-ರಾಷ್ಟ್ರಗಳಿಗೆ ಮನವಿ ಮಾಡಿದೆ. ಆದರೆ ದುರದೃಷ್ಟವಶಾತ್ ಜಾಗತೀಕರಣದ ಫಲವಾಗಿ ರಾಜ್ಯದ ಆಧಾರ ಟೊಳ್ಳಾಗುತ್ತಿದೆ, ಅದರ ಪ್ರಾಮುಖ್ಯ ನಶಿಸುತ್ತಿದೆ.

(II) **ಜಾಗತೀಕರಣ, ರಾಜ್ಯ ಟೊಳ್ಳುಗೊಳ್ಳುತ್ತಿರುವುದು ಹಾಗೂ ಅಭಿವೃದ್ಧಿ**

ತೃತೀಯ ಜಗತ್ತಿನ ದೇಶಗಳು ಕೆಳಮಟ್ಟಗಳ ಸಂಪತ್ತು ಸಂಚಯನ ದೇಶಗಳಾಗಿವೆಯಷ್ಟೆ ಅಲ್ಲ, ಅವಿಕಸಿತ ಮಾರುಕಟ್ಟೆ ದೇಶಗಳೂ ಆಗಿದ್ದು ಬೆಲೆ ಪ್ರೋತ್ಸಾಹನೆಗಳಿಗೆ ಒಗ್ಗೊಡದಂಥವು ಎಂಬ ಪರಿಕಲ್ಪನೆಯ ಆಧಾರದ ಮೇಲೆ 'ಸಾಮಾನ್ಯ ಅರ್ಥಶಾಸ್ತ್ರ' ಹಾಗೂ 'ಬೆಳವಣಿಗೆಯ ಅರ್ಥಶಾಸ್ತ್ರ'ಗಳ ನಡುವೆ ವ್ಯತ್ಯಾಸ ಮಾಡಲಾಯಿತು ಎಂಬುದು ಸುವಿದಿತ. ರಾಜ್ಯವು ಆಡಳಿತ ವರ್ಗಗಳ ಆಜ್ಞಾನುಧಾರಿ ಸಂಸ್ಥೆ ಎಂಬ ಪ್ರಭುತ್ವ ಕುರಿತ ಮಾರ್ಕ್ಸ್‌ವಾದಿ ವಿವರಣೆ ಇದ್ದರೂ, ಆರ್ಥಿಕತೆಯ ಸ್ಥಿತ್ಯಂತರ ಮಜಲಿನಲ್ಲಿ ರಾಜ್ಯವು ನಿರಂಕುಶವಾಗಿರಬಲ್ಲುದು ಮತ್ತು 'ರಾಜ್ಯ ಬಂಡವಾಳವಾದ'ದ ಪಾತ್ರವೂ ಮಾನ್ಯಾರ್ಹ ಎಂಬುದು ಅಭಿವೃದ್ಧಿಶೀಲ ರಾಜ್ಯಕ್ಕೆ ಗಹನವಾದ ಸವಾಲನ್ನೇನೂ ಒಡ್ಡಲಿಲ್ಲ. ಆದರೆ ೧೯೮೦-೧೯೯೦ರ ದಶಕಗಳಲ್ಲಿ ವಿಕಸನಗೊಂಡ ಜಾಗತೀಕರಣದ ಫಲವಾಗಿ ಅಭಿವೃದ್ಧಿ ಕುರಿತ ಪ್ರಧಾನ ಪರಿಕಲ್ಪನೆಗಳಿಗೆ ಎರಡು ಆಕರಗಳಿಂದ ಟೀಕೆಗಳು ಬಂದವು. (೧) ಆಧುನಿಕೋತ್ತರವಾದ; (೨) ನವ ಉದಾರತಾವಾದ. ಇವೆರಡೂ ಮೇಲುನೋಟಕ್ಕೆ ಪರಸ್ಪರ ವಿರೋಧಿಗಳೆಂದು ಕಂಡು ಬಂದರೂ ರಾಜ್ಯ ಹಾಗೂ ಬೆಳವಣಿಗೆ ವಿರೋಧಿಸುವುದರಲ್ಲಿ ಎರಡೂ ಒಂದಾಗಿವೆ. ಆಧುನಿಕೋತ್ತರತೆಯು 'ಬೆಳವಣಿಗೆ'ಯ ಕಲ್ಪನೆಯನ್ನು 'ಉತ್ತರದೇಶಗಳಲ್ಲಿ ನಂತಾಗುತ್ತಿದೆ' ಎಂಬುದನ್ನೂ ರಾಷ್ಟ್ರ-ರಾಜ್ಯದ ಸಾಂಸ್ಥಿಕ ಪೂರ್ವಾಧಾರಗಳನ್ನೂ ವಿರೋಧಿಸಿದಲ್ಲಿ, ನವ ಉದಾರತಾವಾದವು 'ಪ್ರತಿಕ್ರಾಂತಿ'ಯ ಹೆಸರಿನಲ್ಲಿ ಬೆಳವಣಿಗೆಗೆ 'ಯೂರೋಪೇ ಕೇಂದ್ರ' ಎಂಬ ಭಾವನೆಯನ್ನು ಸಮರ್ಥಿಸುವ ಸಮಯದಲ್ಲೇ ಬೆಳವಣಿಗೆಯಲ್ಲಿ ರಾಷ್ಟ್ರ-ರಾಜ್ಯದ ಪಾತ್ರವನ್ನು ವಿರೋಧಿಸುತ್ತದೆ.

**೧. ರಾಜ್ಯ ಹಾಗೂ ಬೆಳವಣಿಗೆ ವಿರುದ್ಧ ಆಧುನಿಕೋತ್ತರತೆಯ ದಾಳಿ**

ಆಧುನಿಕೋತ್ತರತೆ ಎಂಬ ನವೀನ ಪ್ರಕಲ್ಪನೆಯು ಆರಂಭದಲ್ಲಿ ಸಾಂಸ್ಕೃತಿಕ ರಂಗ ಪ್ರವೇಶಿಸಿ ನಾನಾ ಸಾಮಾಜಿಕ ವಿಜ್ಞಾನಗಳಲ್ಲಿ ಸಾಕಷ್ಟು ಗೊಂದಲ ಉಂಟು ಮಾಡಿದ ನಂತರ ಈಗ ಆರ್ಥಿಕ ರಂಗ ಪ್ರವೇಶಿಸಿ ಬೆಳವಣಿಗೆ ಎನ್ನುವಂಥ ತನ್ನದೇ ಆಚರಣೆಗಳ ಒಂದು ಕಟ್ಟನ್ನು ಮುಂದಿರಿಸಿದೆ. ಅದು ಆಧುನಿಕತೆಯ ಮೂಲಾಧಾರವಾದ ಅರ್ಥಶಾಸ್ತ್ರವನ್ನೂ ಸಂಸ್ಕೃತಿ-ಆಧಾರಿತ ರಾಜಕೀಯ ಅರ್ಥಶಾಸ್ತ್ರವನ್ನೂ, 'ಇವೆಲ್ಲ ಪಾಶ್ಚಿಮಾತ್ಯ ರಾಷ್ಟ್ರಗಳ ಒಂದು ಹೊಸ ಮತಧರ್ಮ' ಎಂದು ತಿರಸ್ಕರಿಸುತ್ತದೆ. ಈ ಪಾಶ್ಚಿಮಾತ್ಯ ಸಾಂಸ್ಕೃತೀಕರಣವು ಪರಿಸರ ವಿನಾಶ ಉಂಟುಮಾಡುತ್ತದೆ ಎಂದದು ವಾದಿಸುತ್ತದೆ. ಅದರ ಪ್ರಕಾರ, ಬೆಳವಣಿಗೆಯ ವೈಫಲ್ಯಕ್ಕಾಗಿ ಅಂಜಬೇಕಾಗಿಲ್ಲ ಆದರೆ ಮೇಲಿನಂತಹ ಬೆಳವಣಿಗೆಯ ಯಶಸ್ಸಿಗಾಗಿ ಅಂಜಬೇಕಾಗಿದೆ!

ದ್ವಿತೀಯ ಜಾಗತಿಕ ಯುದ್ಧಾನಂತರ ತೃತೀಯ ಜಗತ್ತಿನ ರಾಷ್ಟ್ರಗಳು ಸಾಮರಸ್ಯವುಳ್ಳ ಒಂದು ಗುಂಪಾಗಿ ಬೆಳವಣಿಗೆಯತ್ತ ಸಾಗಿವೆ ಹಾಗೂ ರಾಜ್ಯವು ಈ ಪ್ರಗತಿ ಸಾಧಿಸುವುದರಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತದೆ – ಎಂಬ ಸಾಮಾನ್ಯ ನಂಬಿಕೆಯನ್ನು ಆಧುನಿಕೋತ್ತರವಾದವು ನಿರಾಕರಿಸುತ್ತದೆ. ಅದರ ಪ್ರಕಾರ 'ಪ್ರಗತಿ' ಅನ್ನುವುದು ಪಾಶ್ಚಿಮಾತ್ಯ ರಾಷ್ಟ್ರಗಳು ಇತರ ರಾಷ್ಟ್ರಗಳನ್ನು ಅಧೀನಗೊಳಿಸಿಕೊಳ್ಳಲು ಆ ರಾಷ್ಟ್ರಗಳ ಮೇಲೆ ಹೊರಗಿನಿಂದ ಹೇರಿಸಿದ ಸನ್ನಾಹ. ಈ ಬಾಹ್ಯದಾಳಿಯ ಫಲವಾಗಿ ರಾಜ್ಯಗಳು ನಿಶ್ಶಕ್ತವಾಗಿಹೋಗಿವೆ ಎಂದು ಹೇಳಿ ಈ ಆಧುನಿಕೋತ್ತರತೆಯು ಸ್ಥಳೀಯ ಸರಕಾರಗಳನ್ನೇ ಉತ್ತಮ ಆಡಳಿತಕ್ಕೆ ಉದಾಹರಣೆಗಳೆಂದು ತಿಳಿಸುತ್ತದೆ.

ಜಗತ್ತಿನ ಬಹುಸಂಖ್ಯಾತ ಜನರಿಗೆ ಮಧ್ಯಮ ವರ್ಗೀಯ ಜೀವನಶೈಲಿ ಒದಗಿಸುವುದು ಅಸಾಧ್ಯ ಎಂದು ಹೇಳಿ ಈ ಆಧುನಿಕೋತ್ತರತೆಯು ಬೆಳವಣಿಗೆ ಎಂಬ ಸಾಮಾನ್ಯ ಕಲ್ಪನೆಯ ವಿರುದ್ಧವೇ ಹೋಗುತ್ತದೆ. ಪರಿಸರ ವಿನಾಶದ ಅಂಶವನ್ನು ಮುಂದೆ ಮಾಡಿ ಅದು ಬೆಳವಣಿಗೆಯನ್ನೇ ವಿರೋಧಿಸುತ್ತದೆ. ಆದರೆ ಅದು ಬೆಳವಣಿಗೆಯ ಪರ್ಯಾಯ ವಿಧಾನಗಳನ್ನೇನೂ ಸೂಚಿಸದೆ ಕೇವಲ ಟೀಕೆಯಾಗಷ್ಟೆ ಉಳಿಯುತ್ತದೆ.

ಪರ್ಯಾಯ ಮಾರ್ಗ ಸೂಚಿಸುವ ಪಂಥವೊಂದು ಈಗ ಹುಟ್ಟಿಕೊಂಡಿದೆ. ಇದು ರಾಜ್ಯದ ಬದಲು ರಾಜ್ಯೇತರ ಸಂಘಟನೆಗಳು ಬೆಳವಣಿಗೆಯ ಆಧಾರಗಳೆಂದು ವಾದಿಸುತ್ತದೆ. ರಾಜ್ಯದ ಬದಲು ಸಮಾಜದ ಸದಸ್ಯರು ತಮ್ಮ ವೈಯಕ್ತಿಕ ಹಾಗೂ ಸಾಂಸ್ಥಿಕ ಸಾಮರ್ಥ್ಯ ಬೆಳೆಸಿಕೊಂಡು ಸಂಪನ್ಮೂಲಗಳನ್ನು ಕೂಡಿಸಿ ವ್ಯವಸ್ಥೆಗೊಳಿಸಿ ತಮ್ಮ ಸ್ವಂತ ಆಶೋತ್ತರಗಳಿಗನುಗುಣವಾಗಿ, ಜೀವನದ ಗುಣಮಟ್ಟ ಸುಧಾರಿಸಿಕೊಳ್ಳಬೇಕು, ಅನ್ನುವುದು ಈ ಪರ್ಯಾಯ ಬೆಳವಣಿಗೆ ಸಮರ್ಥಕರ ಅಂಬೋಣ. ಹೀಗೆ ಇವರು ಬೆಳವಣಿಗೆಯನ್ನು ತೃತೀಯ ಜಗತ್ತಿನ ಒಂದು ಗುರಿಯನ್ನಾಗಿ ಸಂಪೂರ್ಣವಾಗಿ ತಿರಸ್ಕರಿಸದಿದ್ದರೂ, ರಾಜ್ಯ-ನಿಯಂತ್ರಿತ ಬೆಳವಣಿಗೆಯನ್ನು ತಳ್ಳಿ ಹಾಕಿ ವಿಕೇಂದ್ರಿತ ಬೆಳವಣಿಗೆಯನ್ನು ಬೆಂಬಲಿಸುತ್ತಾರೆ.

**೨. ಪ್ರತಿಕ್ರಾಂತಿ ದಾಳಿ**

ಬೆಳವಣಿಗೆಯ ವಿರುದ್ಧ ದಾಳಿ ಹೆಚ್ಚು ಗಮನಾರ್ಹವಾಗಿ ಪ್ರತಿಕ್ರಾಂತಿ ಮೂಲದಿಂದ ಬರುತ್ತದೆ. ಇದು ರಾಜ್ಯದ ಬದಲು ಮಾರುಕಟ್ಟೆಗಳ ಮೇಲೆ ಹೆಚ್ಚು ಒತ್ತುಹಾಕುತ್ತದೆ. ಇದರ ಪ್ರಕಾರ ನಿಯಂತ್ರಣ ಹಾಗೂ ನಿರ್ಬಂಧಗಳ ರೂಪದಲ್ಲಿ ರಾಜ್ಯವು ಆರ್ಥಿಕತೆಯಲ್ಲಿ ಹಸ್ತಕ್ಷೇಪ ಮಾಡುವುದು ನಾನಾ ರೀತಿಯ ನ್ಯಾಯಬದ್ಧ ಹಾಗೂ ನ್ಯಾಯಬಾಹಿರ 'ಗೇಣಿ'ಗಳಿಗೆ ಅವಕಾಶ ಮಾಡಿಕೊಡುತ್ತದೆ. ಈ ಗೇಣಿಗಳು ಬಹುವೇಳೆ ಲಂಚ ರುಷುವತ್ತು, ಕಳ್ಳಸಾಗಾಣಿಕೆ, ಕಾಳಸಂತೆ ರೂಪ ತಾಳುತ್ತವೆ. ಇದು ಸಂಪನ್ಮೂಲಗಳ ಅಸಮರ್ಥ ಬಳಕೆಗೆ ದಾರಿ ಮಾಡಿಕೊಡುತ್ತದೆ. ತೃತೀಯ ಜಗತ್ತಿನ ದೇಶಗಳು ಬಡತನದಲ್ಲಿರುವುದಕ್ಕೆ ಅರ್ಥವ್ಯವಸ್ಥೆಯಲ್ಲಿ ರಾಜ್ಯದ ಹಸ್ತಕ್ಷೇಪವೇ ಕಾರಣ ಎಂದು ಈ ಪಂಥ ವಾದಿಸುತ್ತದೆ. ಹೀಗೆ 'ಪ್ರತಿಕ್ರಾಂತಿ'ಯು ಸಂಪನ್ಮೂಲಗಳ ಸಮರ್ಥ ಬಳಕೆ ಹಾಗೂ ಹಂಚಿಕೆಯ ಪಾತ್ರವನ್ನು ಮಾರುಕಟ್ಟೆಗಳಿಗೆ ವಹಿಸಿಕೊಟ್ಟು ಬೆಳವಣಿಗೆಯಲ್ಲಿ ರಾಜ್ಯದ ಪ್ರಾಮುಖ್ಯತೆಯನ್ನು ತಳ್ಳಿಹಾಕಿ ಮಾರುಕಟ್ಟೆಮುಖಿಯ ಆರ್ಥಿಕ ಸುಧಾರಣೆಗಳಿಗೆ ಒತ್ತು ನೀಡುತ್ತದೆ.

**೩. ಟೀಕೆಗಳ ಅಂತರಾರ್ಥಗಳು**

ಇಲ್ಲಿ ಅರ್ಥಮಾಡಿಕೊಳ್ಳಬೇಕಾದ ಒಂದು ಮುಖ್ಯಾಂಶವೆಂದರೆ, ಆಧುನಿಕೋತ್ತರತೆಯ

ಟೀಕೆಗಳೆಲ್ಲ ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳ ವ್ಯಾಪಾರಿಕ ಗುರಿಗಳ ವಿರುದ್ಧ ನಿರ್ದೇಶಿತವಾಗಿವೆ, ಅನ್ನುವುದು. ಅಲ್ಲದೆ ಇದು ತೃತೀಯ ಜಗತ್ತಿನಲ್ಲಿ ರಾಜ್ಯದ ಪಾತ್ರವನ್ನು ಸಂಪೂರ್ಣವಾಗಿ ಅಲ್ಲಗಳೆಯುವುದು ಮತ್ತು ಅದು ಜನಸಾಮಾನ್ಯರ ಹಿತಗಳಿಗೆ ವಿರುದ್ಧ ಎನ್ನುವುದು ತೀರಸಲ್ಲ. ಜನರು ಇನ್ನೂ ತಮ್ಮ ಆಶೋತ್ತರಗಳ ಈಡೇರಿಕೆಗೆ ರಾಜ್ಯಶಕ್ತಿಯಲ್ಲೇ ಹೆಚ್ಚಿನ ವಿಶ್ವಾಸ ಇರಿಸಿದ್ದಾರೆ.

ನವಉದಾರವಾದಿ ಪ್ರತಿಕ್ರಾಂತಿಯ ಟೀಕೆಗಳ ಅಂತರಾರ್ಥಗಳೂ ಸುಸ್ಪಷ್ಟ. ಅದು ಬೆಳವಣಿಗೆಯಲ್ಲಿ ರಾಜ್ಯದ ಪಾತ್ರ ಕುಗ್ಗಿಸಿ, ಮಾರುಕಟ್ಟೆಗಳ ಪಾತ್ರ ಹಿಗ್ಗಿಸಿ, ಜಾಗತೀಕರಣಕ್ಕೆ ಅಡಿಪಾಯ ಒದಗಿಸಿಕೊಡುತ್ತದೆ. 'ಅಸಮಾನತೆ'ಯು ಪ್ರಗತಿಗೆ ಸಂಪತ್ತಿಗೆ ಸೃಷ್ಟಿಗೆ ಒಳ್ಳೆಯದೇ ಎಂದದು ವಾದಿಸುತ್ತದೆ. ಆದರೆ ಕಳೆದ ಎರಡು ದಶಕಗಳಲ್ಲಿ ಜಾಗತೀಕರಣವು ದೇಶಗಳ ನಡುವೆ ಅಸಮಾನತೆಯನ್ನು ಹೆಚ್ಚಿಸಿರುವುದು ಜನರ ಆದಾಯ ಕುಸಿಯಲು, ಅಕುಶಲ ಕಾರ್ಮಿಕರ ಸಂಖ್ಯೆ ಹೆಚ್ಚಲು ನಿರುದ್ಯೋಗ ಹಾಗೂ ಕೆಲಸದ ಅಭದ್ರತೆ ಕಾಡಲು ಕಾರಣವಾಗಿದೆ. ಹಾಗಾಗಿ ಸಾಮಾಜಿಕ ಸಂರಕ್ಷಣೆ ಒದಗಿಸಲು, ಜಾಗತಿಕ ದಾಳಿಗೆ ಪ್ರತಿರೋಧ ನೀಡಲು ರಾಷ್ಟ್ರ-ರಾಜ್ಯವನ್ನು ಒಂದು ಸಾಧನವನ್ನಾಗಿ ಬಳಸುವುದು ಅತ್ಯವಶ್ಯ ಎಂಬ ಭಾವನೆ ಜನರಲ್ಲಿ ಹೆಚ್ಚು ಹೆಚ್ಚಾಗಿ ಬೇರೂರುತ್ತಿದೆ.

'ಶಿಷ್ಟ' ಕಾರ್ಯವನ್ನು ಬೆಳವಣಿಗೆಯ ಗುರಿಯನ್ನಾಗಿ ನಿರ್ಮಿಸಬೇಕಾಗಿರುವ ಈ ಚಾರಿತ್ರಿಕ ಹಂತದಲ್ಲಿ, ನವಉದಾರತಾವಾದದ ರಾಜ್ಯ-ವಿರೋಧಿ ಭಾವನೆಗಳು ಬೆಳವಣಿಗೆಗೆ ಬಾಧಕವಾಗಿ ಪರಿಣಮಿಸಿವೆ. ರಾಜ್ಯದ ಹಕ್ಕುಗಳನ್ನು ನಿರ್ಬಂಧಿಸಿ ಅವು ಶ್ರಮಜೀವಿಗಳ ಖರ್ಚಿನಲ್ಲಿ ಬಂಡವಾಳದ ಸ್ವಾತಂತ್ರ್ಯಕ್ಕೆ ಸೌಲಭ್ಯ ಒದಗಿಸಿವೆ. ದುರದೃಷ್ಟವಶಾತ್, ರಾಜ್ಯವನ್ನು ಶಾಸನಬದ್ಧ ಹಕ್ಕುಗಳ ಉಲ್ಲಂಘಕ ಶಕ್ತಿಯನ್ನಾಗಿ ಭಾವಿಸುವ ಮಾನವ ಹಕ್ಕುಗಳ ಚಳವಳಿಯೂ ಪರೋಕ್ಷವಾಗಿ ಈ ನವಉದಾರವಾದಿ ವಿಚಾರಗಳಿಗೆ ನೆರವಾಗಿದೆ. ಇದರಲ್ಲಿ ವ್ಯಕ್ತಿಯ ನಾಗರಿಕ ಹಾಗೂ ರಾಜಕೀಯ ಹಕ್ಕುಗಳಿಗೆ ಹೆಚ್ಚಿನ ಒತ್ತು ಕೊಟ್ಟು, ಅಷ್ಟೇ ಮುಖ್ಯವಾದ ಆರ್ಥಿಕ ಹಾಗೂ ಸಾಮಾಜಿಕ ಹಕ್ಕುಗಳನ್ನು ಕಡೆಗಣಿಸಲಾಗಿದೆ.

ಜಾಗತೀಕರಣವು ಸಾರ್ವಜನಿಕ ವಲಯಕ್ಕೆ ಪ್ರತಿಯಾಗಿ ಖಾಸಗಿ ವಲಯಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದರಿಂದಾಗಿ ಅನೇಕ ರಾಜ್ಯಗಳು ಗೃಹ ಆರ್ಥಿಕತೆಯ ಮೇಲೆ ಮೂಲ ನಿಷ್ಠ ನಿಯಂತ್ರಣ ಇರಿಸಿಕೊಳ್ಳಲೂ ಅಸಮರ್ಥವಾದಂತಾಗಿವೆ. ಹಾಗಾಗಿ ಪ್ರಜೆಗಳಿಗೆ ಸಾಮಾಜಿಕ ಆರ್ಥಿಕ ಹಕ್ಕುಗಳನ್ನು ಒದಗಿಸುವ ರಾಜ್ಯದ ಸಾಮರ್ಥ್ಯ ಅಪಾರವಾಗಿ ಕುಗ್ಗಿದೆ.

ರಾಜ್ಯದ ನಿಯಂತ್ರಣ ಸಾಮರ್ಥ್ಯ ಕುಗ್ಗಿರುವುದರಿಂದಾಗಿ G – ೭ ವಿಶ್ವಬ್ಯಾಂಕ್, ಐಎಂಎಫ್, ಟ್ರಾನ್ಸ್‌ನ್ಯಾಷನಲ್ ಕಾರ್ಪೊರೇಷನ್‌ಗಳು ಮುಂತಾದ ಇತರ ಜಾಗತಿಕ ಶಕ್ತಿಗಳು ರಾಜ್ಯಗಳ ಮೇಲೆ ಪ್ರಭಾವ ಬೀರಿ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳನ್ನು ಒದಗಿಸುವ ಅವುಗಳ ಸಾಮರ್ಥ್ಯಕ್ಕೆ ಬಾಧಕ ಉಂಟುಮಾಡುತ್ತಿವೆ. ಜಾಗತಿಕ ಆರ್ಥಿಕತೆಯು ಹೆಚ್ಚುಹೆಚ್ಚಾಗಿ ಐಕ್ಯಗೊಳ್ಳುತ್ತಿರುವುದು ಪ್ರಜೆಗಳಿಗೆ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳನ್ನು ಒದಗಿಸುವ ವಿವಿಧ ರಾಜ್ಯಗಳ ಸಾಮರ್ಥ್ಯವನ್ನು ಕುಗ್ಗಿಸಿದೆ, ಎಂದು ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಕಮೀಷನ್ನಿನ ವಿಶೇಷ ವರದಿಗಾರ ಡೇನಿಲೊ ಟರ್ಕ್ ವರದಿ ಮಾಡಿದ್ದಾರೆ. ಉದ್ಯೋಗ, ಆಹಾರ, ವಸತಿ, ಆರೋಗ್ಯ, ವಿದ್ಯಾಭ್ಯಾಸ ಹಾಗೂ ಬೆಳವಣಿಗೆಗೆ ಸಂಬಂಧಿಸಿ ಪ್ರಜೆಗಳ ಹಕ್ಕುಗಳಿಗೆ ವಿಶೇಷ ಹಾನಿ ಉಂಟಾಗಿದೆ ಎಂದವರು ಒತ್ತಿ ತಿಳಿಸಿದ್ದಾರೆ.

ಮುಕ್ತಮಾರುಕಟ್ಟೆ ನೀತಿಗಳ ಮೂಲಕ ಜಾಗತಿಕ ಆರ್ಥಿಕ ಐಕ್ಯತೆಯ ನೀತಿಯು ಬಹುತೇಕ ಮಾನವರ ಅಥವಾ ರಾಜ್ಯಗಳ ಆರ್ಥಿಕ ಅಥವಾ ಸಾಮಾಜಿಕ ಹಕ್ಕುಗಳನ್ನು ತೃಪ್ತಿಗೊಳಿಸಲಾರದು. ಸಾರ್ವಜನಿಕ ವಲಯದ ಖರ್ಚಿನಲ್ಲಿ (ನಷ್ಟ ಉಂಟುಮಾಡಿ) ಖಾಸಗಿ ವಲಯವನ್ನು ಮೇಲೆತ್ತಿರುವುದು ಈ ಹಕ್ಕುಗಳ ನೇರ ಉಲ್ಲಂಘನೆಯಾಗಿದೆ, ಎಂದವರು ಒತ್ತಿಹೇಳಿದ್ದಾರೆ.

### III. ಮರಳಿ ಮಾನವೀಯ ರಾಜ್ಯದತ್ತ

ಕಳೆದ ಎರಡು ದಶಕಗಳ ಕಾಲದಲ್ಲಿನ ಜಾಗತೀಕರಣದ ಋಣಾತ್ಮಕ ಪ್ರಭಾವವು ವಿಕಸಿತ ಹಾಗೂ ವಿಕಾಸಶೀಲ ದೇಶಗಳ ಎರಡರ ಜನಜೀವನದಲ್ಲಿ ಪ್ರಖರವಾಗಿ ಗೋಚರಕ್ಕೆ ಬಂದಿದೆ. ರಾಜ್ಯಸಾರ್ವಭೌಮತ್ವ ಟೊಳ್ಳುಗೊಂಡಿರುವುದು, ರಾಜಕೀಯ ಕಾರ್ಯಕ್ಷೇತ್ರ ಕುಗ್ಗಿರುವುದು, ಅಸಮಾನತೆ ಹೆಚ್ಚಿರುವುದು, ನಿರುದ್ಯೋಗ ಹೆಚ್ಚಿರುವುದು, ಉದ್ಯೋಗದ ಅಭದ್ರತೆ, ದುಡಿಯುವ ಬಡಜನರ ಸಂಖ್ಯೆ ಹೆಚ್ಚುತ್ತಿರುವುದು, ಅಕುಶಲ ಕಾರ್ಮಿಕರ ವರಮಾನದಲ್ಲಿ ಭಾರಿ ಇಳಿತಾಯ, ಪರಿಸರ ನಾಶ, ಮೂಲಭೂತ ಮಾನವ ಹಕ್ಕುಗಳ ಅಪಹರಣ – ಇವು ಜಾಗತೀಕರಣದ ಕೆಲವು ಪ್ರಮುಖ ಲಕ್ಷಣಗಳಾಗಿವೆ. ಪ್ರತಿಯೊಂದೂ ದೇಶದ ರಾಷ್ಟ್ರೀಯ ನೀತಿ ಹೆಚ್ಚು ಹೆಚ್ಚಾಗಿ ಜಾಗತೀಕರಣದ ಆರ್ಥಿಕ ಹಿತಗಳಿಂದ ನಿರ್ದೇಶಿತವಾಗುತ್ತಿದೆ. 'ಸರಕಾರಗಳು ಆಡಳಿತವನ್ನೇನೋ ನಡೆಸುತ್ತಿವೆ, ಆದರೆ ಜಾಗತಿಕ ಬಂಡವಾಳ ಶಾಸನ ಮಾಡುತ್ತಿದೆ' ಎಂಬುದು ಮನೆಮಾತಾಗಿದೆ. ಅಂತೆಯೇ 'ರಾಷ್ಟ್ರೀಯ ರಾಜ್ಯ ಸತ್ತೇನೂ ಇಲ್ಲ, ಆದರೆ ಬಹುಬೇಗ ನಿವೃತ್ತಿಗೊಳ್ಳುತ್ತಿದೆ' ಎಂಬುದೂ ಅಂತಹ ಒಂದು ಮಾತು. ಪ್ರತಿಯೊಂದೂ ದೇಶದ ಪ್ರಭುತ್ವವು ಈಗ ಜಾಗತಿಕ ಆರ್ಥಿಕತೆಯ ಅವಶ್ಯಕತೆಗಳಿಗನುಗುಣವಾಗಿ ಸ್ಥಳೀಯ ಆರ್ಥಿಕ ನೀತಿನಡವಳಿಕೆಗಳನ್ನು ಸರಿಹೊಂದಿಸುವ ಸಾಧನವಷ್ಟೆ ಆಗಿದೆ.

ಬಡದೇಶಗಳ ವ್ಯಾಪಾರ ವೃಂದಗಳು ಸಣ್ಣಪುಟ್ಟ ಯಂತ್ರಸ್ಥಾವರಗಳು ಸಾರ್ವಜನಿಕ ಬೆಂಬಲವಿಲ್ಲದೆ ಜಾಗತಿಕ ಸ್ಪರ್ಧೆಯನ್ನು ಎದುರಿಸಲಾರದಾಗಿವೆ. ಕಾರ್ಮಿಕರ ಸ್ವಂತ ಉಪಕ್ರಮದಿಂದ ನಿರ್ಮಿತವಾದ ಸುಭದ್ರತಾ ವ್ಯವಸ್ಥೆಗಳೂ, ಸಕಾಲದಲ್ಲಿ ರಾಜ್ಯ ಬೆಂಬಲ ದೊರೆಯದೆ ಹೋದಲ್ಲಿ, ನಶಿಸಿಹೋಗುವ ಭೀತಿಗೊಳಗಾಗಿವೆ. ಪ್ರಭುತ್ವವು ಶ್ರಮ ಮಾರುಕಟ್ಟೆಯಲ್ಲಿ ಕನಿಷ್ಠವೆಂದರೆ ಸಾಮೂಹಿಕ ಕ್ರಿಯೆಯನ್ನು ಖಚಿತಗೊಳಿಸಬೇಕಾಗಿದೆ, ನಿರ್ದಿಷ್ಟ ಮಟ್ಟಗಳನ್ನು ಆಚರಣೆಗೆ ತರಬೇಕಾಗಿದೆ. ರಾಜ್ಯವು ನಿಸ್ಸತ್ತ್ವವಾಗಿದೆ ಎಂಬುದು ಜಾಗತೀಕರಣವಾದಿಗಳು ಸೃಷ್ಟಿಸಿರುವ ಒಂದು ಮಿಥ್ಯೆಯಷ್ಟೆ. ರಾಜ್ಯಕ್ಕೆ ಕ್ರಿಯೆ ಜರುಗಿಸಲು ಆಸ್ಪದವಿದೆ, ಜನರು ಒಂದಾಗಿ ರಾಜ್ಯ ಕಾರ್ಯಶೀಲವಾಗುವಂತೆ ಮಾಡಬೇಕಷ್ಟೆ ಎಂದೂ ಕೆಲವರು ಭಾವಿಸಿದ್ದಾರೆ.

ನವಉದಾರವಾದಿಗಳೂ ಆಧುನಿಕೋತ್ತರವಾದಿಗಳೂ ಮಾರುಕಟ್ಟೆಗೂ ಸಂಸ್ಕೃತಿ ರಂಗಕ್ಕೂ ಅನವಶ್ಯವಾಗಿ ಅತಿಹೆಚ್ಚಿನ ಪ್ರಾಮುಖ್ಯ ನೀಡಿದ್ದಾರೆ. ಬೆಳವಣಿಗೆ ಅನ್ನುವುದು ಕೇವಲ ಬಂಡವಾಳ ಸಂಚಯವಲ್ಲ, ಸಂಪನ್ಮೂಲಗಳ ಸಮರ್ಥ ಹಂಚಿಕೆಯಲ್ಲ, ಅದು ಸಮಾಜದ ಪರಿವರ್ತನೆಯಾಗಬೇಕು ಎಂಬ ಭಾವನೆಯ ಕಡೆಗೆ ಹೆಚ್ಚಿನ ಗಮನ ನೀಡಬೇಕಾಗಿದೆ. ಕಾರ್ಲ್ ಪೊಲಾನ್ಯಿಯವರು 'ಮಹಾಪರಿವರ್ತನೆ' ಎಂಬ ತಮ್ಮ ಗ್ರಂಥದಲ್ಲಿ ಸೂಚಿಸಿರುವಂತೆ, ಮಾರುಕಟ್ಟೆ ಆರ್ಥಿಕತೆಯು ಸಮಾಜದಲ್ಲಿ ಭದ್ರವಾಗಿ ನಾಟಿದೆ, ಸಮಾಜವು 'ಮಾರುಕಟ್ಟೆ ಸಮಾಜ'ವಾಗಿ ಪರಿವರ್ತಿತವಾಗುವ ಭಾವನೆ ಸಮಂಜಸವಲ್ಲ, ಸಮಾಜವು ತನ್ನನ್ನು ಸಂರಕ್ಷಿಸಿಕೊಳ್ಳಲು ಸೂಕ್ತ ಕ್ರಮ ಕೈಗೊಳ್ಳುವ ಸಾಮರ್ಥ್ಯ ಪಡೆದಿದೆ.

ಆರ್ಥಿಕತೆಯು ನಿಯಂತ್ರಣ, ಸಾಮಾಜಿಕ ಸಂರಕ್ಷಣ ಹಾಗೂ ಪುನರ್‌ಹಂಚಿಕೆ ಎಂಬ ಮೂರು ವ್ಯವಸ್ಥೆಗಳನ್ನು ಆಧರಿಸಿ ಸಮಾಜದಲ್ಲಿ ತನ್ನನ್ನು ನೆಲೆಯೂರಿಸಿಕೊಳ್ಳುತ್ತದೆ. ಈ ಮೂರೂ ವ್ಯವಸ್ಥೆಗಳಲ್ಲಿ ರಾಜ್ಯದ ಪಾತ್ರ ಅತಿಮುಖ್ಯ. ಅದು ಶಿಷ್ಟ ಕಾರ್ಯವನ್ನಷ್ಟೆ ಅಲ್ಲ ಶಿಷ್ಟಸಮಾಜವನ್ನು ಪುನರುಜ್ಜೀವನಗೊಳಿಸಬೇಕಾಗಿದೆ. ಹಣಕಾಸು ಮಾರುಕಟ್ಟೆಗಳು ಅಂತರ್ನಿಹಿತವಾಗಿ ಅಸ್ಥಿರವಾದವು. ಮಾರುಕಟ್ಟೆ ಶಕ್ತಿಗಳಿಗೆ ಮುಕ್ತ ಆಧಿಪತ್ಯ ನೀಡುವ ಮೂಲಕ ಸಾಮಾಜಿಕ ಅಗತ್ಯಗಳನ್ನು ಪೂರೈಸಲಾಗುವುದಿಲ್ಲ. ಮಾರುಕಟ್ಟೆಗಳು ಉಂಟುಮಾಡಬಹುದಾದಂಥ ಸಾಮಾಜಿಕ ಅಸ್ಥಿರತೆಯನ್ನು ತಪ್ಪಿಸಲು ಸಾಮಾಜಿಕ ನಿಯಂತ್ರಣ ಅತ್ಯವಶ್ಯ.

ಮಾರುಕಟ್ಟೆಗಳಿಗೆ ಸಮಾಜದಲ್ಲಿ ಒಂದು ಸ್ಥಾನವಿದೆ ನಿಜ. ಆದರೆ ಈ ಮಾರುಕಟ್ಟೆಗಳನ್ನು ಅವುಗಳ ಸ್ಥಾನದಲ್ಲಿ ಇರಿಸುವುದು ಮುಖ್ಯ ಕಾರ್ಯಭಾರವಾಗಿದೆ. ಮಾರುಕಟ್ಟೆಗಳಿಗೆ ಸಾಮಾಜಿಕ ಸಂರಚನೆಯನ್ನು ನಾಶಗೊಳಿಸಲು ಅವಕಾಶ ನೀಡಬಾರದು. ಹಾಗೆ ನಾಶಗೊಂಡರೆ ರಾಜ್ಯ ಕೂಡ ಅದನ್ನು ಸುಲಭವಾಗಿ ಪುನರ್ರಚಿಸಲಾರದು. ಸಾಮಾಜಿಕ ಸ್ಫೋಟನ ಉಂಟುಮಾಡುವುದನ್ನು ತಪ್ಪಿಸಲು ಮಾರುಕಟ್ಟೆಗಳನ್ನು ನಿಯಂತ್ರಣದಲ್ಲಿರಿಸಬೇಕು. ತೃತೀಯ ಜಗತ್ತಿನಲ್ಲಿ 'ಶಿಷ್ಟಕಾರ್ಯ'ವನ್ನು ಖಚಿತಗೊಳಿಸುವುದು ಇಂದಿನ ಅಗತ್ಯ ಕಾರ್ಯಭಾರವಾಗಿದೆ. ಇದಕ್ಕೆ, ಬೆಳವಣಿಗೆಯಲ್ಲಿ ರಾಜ್ಯಕ್ಕೆ ಸುಸೂಕ್ತ ಸ್ಥಾನ ಪುನರ್ರಚಿಸಿಕೊಡುವುದು ಅತಿಮುಖ್ಯ.

('ಇಂಡಿಯನ್ ಸೊಸೈಟಿ ಆಫ್ ಲೇಬರ್ ಎಕನಾಮಿಕ್ಸ್' ಸಂಸ್ಥೆಯ ೪೬ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷೀಯ ಭಾಷಣದ ಸಾರಾಂಶ).

**ಡಾ|| ಡಿ. ನರಸಿಂಹ ರೆಡ್ಡಿ**
ನಿವೃತ್ತ ಪ್ರಾಧ್ಯಾಪಕರು, ಹೈದರಾಬಾದ್ ವಿಶ್ವವಿದ್ಯಾಲಯ, ಹೈದರಾಬಾದ್

ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ೨ನೇ ಕ್ರಾಸ್ ಸಿ.ಟಿ.ಬೆಡ್
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಪ್ರಾಯಶ್ಚಿತ್ತ

ಎಸ್. ಆರ್. ಗುರುನಾಥ್

''ಎಲೆಕ್ಷನ್ನು ಹತ್ರ ಬಂದ್ರೆ ರಜಾ ಸಿಗಲ್ಲ'' ಅಂದುಕೊಂಡು ಕೆಲವು ದಿನಗಳ ಮಟ್ಟಿಗೆ ಸ್ವಗ್ರಾಮಕ್ಕೆ ಹೋಗಿದ್ದ ಬಳ್ಳೊಳ್ಳಿ ಮಾಸ್ತರು ಬಂದು ಬರಗಾಣದೆ ಸಣ್ಣೇಗೌಡರನ್ನು ಭೇಟಿಯಾಗಿ ''ನಿಮ್ಮ ಮಗಳು ಭೂದೇವೀನ ನೋಡಿದೆ! ಹುಬ್ಬಳ್ಳಿ ಸಮೀಪದ ಹೈವೇ ಮಗ್ಗುಲದಾಗ ಡಾಬಾದಂಥ ಹೋಟಲ ಇಟಗೊಂಡಾರ್ರಿ!'' ಅಂದರು!

ಗೌಡರೇನೂ ಧಿಗ್ಗನೆ ಎದ್ದು ನಿಲ್ಲಲಿಲ್ಲ. ಏನು ?! ಏನು ?! ಮತ್ತೇನು ವಿಷಯ ?! ಎಂಬಂಥ ಆತುರವನ್ನೂ ತೋರಲಿಲ್ಲ! ಆದರೆ ಅವರ ಮನದ ಮೂಲೆ ಸೇರಿದ್ದ ಕೋಪ, ತಾಪ, ಆಕ್ರೋಶಗಳೆಲ್ಲಾ ಮತ್ತೆ ತಲೆ ಎತ್ತಲಾರಂಭಿಸಿದವು! ''ಅವಳು ಏನಾರೆ ಆಗ್ಲಿ ಎಲ್ಲಾರೆ ಸಾಯ್ಲಿ ಅದರ ಚಿಂತೀನೇ ಬ್ಯಾಡ'' ಅಂದುಕೊಳ್ಳುತ್ತಿದ್ದ ಅವರಲ್ಲಿ ಯಂಥದ್ದೋ ಒಂದು ತರಹದ ಬುಗುಲು ಶುರುವಾಯಿತು! ಮಾನ ಮರ್ಯಾದಿಗೆಟ್ಟೋಳು ಯಾವ ಸುಖ ಸುರಕಂಡೈದಾಳೋ? ಯಾವನ ಜತಿಗೈದಾಳೋ? ಹೋಗಿ ನೋಡಲೇ ಬೇಡವೇ ಎಂಬ ಗೊಂದಲ. ಗಾಯಿತ್ರವ್ವ ''ಹಾದರಗಿತ್ತಿ ಯಾವನ ಪಲ್ಲಂಗ ಸೇರೀದಾಳೋ ಏನ್ಕತೆಯೋ ತಿಳ್ಕಬಹುದಲ್ಲ...'' ಎಂಬ ರಾಗ ಎಳೆದಳು. ಸೀನಣ್ಣನೂ ''ಮಣ್ಣು ತಿಂಬೊ ಕೆಲ್ಸ ಮಾಡಿರಬೌದು. ಆದ್ರೂ ಅವಳ ಸ್ಥಿತಿಗತೀನಾದ್ರೂ ಒಂದೀಟು ನೋಡಬೌದಲ್ಲ''ಎಂದ.

ತಡಮಾಡದ ಸಣ್ಣೇಗೌಡರು ಮಾರನೆಯ ದಿನವೇ ಬಳ್ಳೊಳ್ಳಿ ಮಾಸ್ತರನ್ನು ಮುಂದಿಟ್ಟುಕೊಂಡು ಊರುಗಳ ಯಾವ ನರಪಿಳ್ಳೆಗೂ ತಿಳಿಯದಂತೆ ಹುಬ್ಬಳ್ಳಿಯ ಕಡೆಗೆ ಬಸ್ಸು ಹತ್ತಿದರು.

ಗೌಡರ ತಲೆಯೆಂಬುದು ಗೊಂದಲದ ಗೂಡಾಯಿತು!

''ನನ್ನ ಮಗಳಾಗಿ ಹುಟ್ಟಿ, ಇಂಗೆಲ್ಲಾ ಮನಸಿಗೆ ನವ್ವ ತುಂಬಿ, ವಂಶುಕ್ಕೇ ಕೆಟ್ಟೆಸರು ಮೆತ್ತುತ್ತಾಳಂಬದು ಮದ್ಲೇ ಗೊತ್ತಾಗಿದ್ದಿದ್ರೆ ಕುತ್ತಿಗೆ ಇಜುಗಿ ಸಾಯಿಸ್ಬಿಡ್ತಿದ್ದೆ... ಸುತ್ತಮುತ್ತಲ ಸಾವುಕಾರರಿಗೆಲ್ಲ ಸಾವುಕಾರನೂ; ಮರ್ಯಾದಸ್ತರಿಗೆಲ್ಲಾ ಮರ್ಯಾದಸ್ತನೂ ಆದಂಥ ನನಿಗೇ ಮಸಿ ಬಳುದುಬಿಟ್ಲು.... ಅಂಥ ಲೋಫರ್ ಮುಂಡೇ ಮಕ ನೋಡೋದೂ ಸರಿಯಲ್ಲವೇನೋ'' ಎಂದೆಲ್ಲಾ ಚಡಪಡಿಸಿ, ಬೆವರಿದ ಮುಖವನ್ನು ಒರೆಸಿಕೊಂಡರು.

''ಮತ್ತೇನೂ ಮಾಡುವಂಗಿಲ್ಲ. ಬಸ್ಸು ಹತ್ತಿದ್ದೂ ಆಗೈತೆ; ಇಬ್ಬರ ಟಿಕೇಟು ತಗಂಡದ್ದೂ ಆಗೈತೆ. ಆಗಲಿ, ರಾಜಕುಮಾರಿಯಂಗಿದ್ದೋಳು, ರಾಜಕುಮಾರನಂಥವನ್ನೇ ಮದಿವೆ ಆಗ್ಬೇಕಾಗಿದ್ದೋಳು ಈಗ ಯಂಗೈದಾಳೋ? ಆ ಸುವ್ವರ್ ಯಾರೋ? ಏನ್ಕತೆಯೋ? ನೋಡಿದ್ರಾಯ್ತು...''

ಭೂದೇವಿ ಮತ್ತು ಅವಳ ತಂಗಿ ಶ್ರೀದೇವಿ ಹೇಳಿಕೊಳ್ಳುವಂಥ ಸುಂದರಾಂಗಿಯರಲ್ಲದಿದ್ದರೂ ಪ್ಯಾಟಿ ಥರದ ಒಡವೆ ವಸ್ತ್ರಗಳಲ್ಲಿ ತಕ್ಕ ಮಟ್ಟಿಗೆ ಚಂದವಾಗಿ ಕಾಣುವ ಇವರನ್ನು ದೊಡ್ಡ ದೊಡ್ಡ ಶ್ರೀಮಂತರ ಮನೆಗಳಿಗೇ ಕೊಟ್ಟು, ಸುತ್ತೇಳು ಹಳ್ಳಿಗಳಿಗೂ ಹೆಸರಾಗುವಂಗೆ ಇಜಾಂಬ್ರಣದ ಮದಿವೆ ಮಾಡಬೇಕು. ಸಾಧ್ಯವಾದರೆ ಇಬ್ಬರು ಅಳಿಯಂದಿರಲ್ಲಿ ಒಬ್ಬನನ್ನಾದರೂ ಮನೆವಾಳ್ತನಕ್ಕೆ ಇರಿಸಿಕೊಳ್ಳಬೇಕೆಂಬ ಹಂಬಲ ಸಣ್ಣೇಗೌಡರದು. ಹೀಗಾಗಿ ಬಂದ ಹಲವಾರು ಗಂಡುಗಳನ್ನು ಅಳೆದೂ ತೂಗೀ ''ನಮ್ಮ ಮಟ್ಟಕ್ಕೆ ಸರಿಹೊಂದಲ್ಲ; ಇರಾ ಆಸ್ತಿಪಾಸ್ತಿ ಏನ್‌ಮಹಾ; ಗಂಡು ಸರಿಯಿಲ್ಲ...'' ಅಂದುಕೊಂಡು ಮುಲಾಜಿಲ್ಲದೆ ತಿರಸ್ಕರಿಸುತ್ತಿದ್ದರು. ಹೀಗೆ ತಿರಸ್ಕರಿಸಲ್ಪಟ್ಟವರಲ್ಲಿ ಕೆಲವರು ''ಯಂಥ ಗನಂದಾರಿಗಳಿಗೆ ಕೊಟ್ಟು ಮದಿವೆ ಮಾಡ್ತಾನೋ ನಾವೂ ನೋಡ್ತೀವಿ'' ಎಂದು ಮೀಸೆ ತಿರುವಿದ್ದೂ ಉಂಟು! ''ಇನ್ನಾ ಹತ್ತು ವರ್ಷ ಆದ್ರೂ ಪರವಿಲ್ಲ. ಭರ್ಜರಿ ಗಂಡುಗಳು ಬರಾತಂಕ ಕಾಯ್ತಿನಿ. ಸಣ್ಣೇಗೌಡ್ರು ಅಂದ್ರೆ ಯಾರನ್ನದ್ದ ತೋರುಸ್ತೀನಿ'' ಅನ್ನುತ್ತಿದ್ದ ಅವರ ಬಗ್ಗೆ ಭೂದೇವಿ ಶ್ರೀದೇವಿಯರು ಒಳೊಳಗೇ ನಗುತ್ತಿದ್ದರು! ಅವರ ಪ್ರಪಂಚವೇ ಬೇರೆ. ಹಿರಿಯಳಾದ ಭೂದೇವಿ ಹನ್ನೊಂದನೇ ಕ್ಲಾಸಿನಿಂದ ಸುಮಾರು ಹತ್ತು ಮೈಲು ದೂರದ ದುರ್ಗಕ್ಕೆ ದಿನಾ ಬಸ್ಸಿನಲ್ಲಿ ಓಡಾಡಿ, ಯಾವುದೋ ಹಂತದಲ್ಲಿ ಫೇಲಾಗಿ ಫೇಲಾಗಿ ಒಂದೀಟು ದಪ್ಪ ಆದಳು. ಹಳ್ಳಿ ಮನೆಯಾಗೆ ಬೇಜಾರು ಅಂತ ಹೊತ್ತು ಕಳೆಯುವುದಕ್ಕಾಗಿ ಕಂಪ್ಲೀಟರ್ ಕಲಿಯಲು ಯಥಾರೀತಿ ದುರ್ಗಕ್ಕೆ ಓಡಾಡುವುದು ಮುಂದುವರಿಸಿದಳು. ಸಣ್ಣವಳಾದ ಶ್ರೀದೇವಿ ಫೇಲಾಗದೆ ಅಕ್ಕನಂತೆಯೆ ಓಡಾಡಿಕೊಂಡಿದ್ದಾಳೆ. ಅಂದಹಾಗೆ ಬಸ್ಸು ಹತುವ ಇಳಿಯುವ ಸಮಯ ಇಬ್ಬರದೂ ಬೇರೆ ಬೇರೆ.

ಈ ನಡುವೆ ಗ್ರಾಮ ಪಂಚಾಯಿತಿ ಎಲೆಕ್ಷನ್ನಿನ ಗದ್ದಲ ಶುರುವಾಯಿತು. ಹಿಂದಿನ ಅವಧಿಗಳಲ್ಲೂ ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಸಣ್ಣೇಗೌಡರು ಮುಂದಕ್ಕೂ ಆ ಸ್ಥಾನ ಮಾನ ಉಳಿಸಿಕೊಳ್ಳಬೇಕೆಂಬ ಹಟದಲ್ಲಿ ಹಿಂಬಾಲಕರೊಂದಿಗೆ ಓಡಾಡಲಾರಂಭಿಸಿದರು. ಹೆಂಡತಿ ಗಾಯಿತ್ರವ್ವನೂ ಸುತ ಮಹಿಳಾ ಮತದಾರರೊಂದಿಗೆ ಬಲು ಅಕ್ಕರೆಯಿಂದ ಬೆರೆಯಲಾರಂಭಿಸಿದಳು.

ಹೀಗಿರುವಾಗ ಒಂದು ರಾತ್ರಿಯ ಉಂಡು ಮಲಗುವ ಹೊತ್ತಿನಲ್ಲಿ ಹಿರಿಯಳಾದ ಭೂದೇವಿ ಮನೆಯಾಗೆ ಇಲ್ಲ ಎಂಬುದು ಗಮನಕ್ಕೆ ಬಂತು! ಓಡಿ ಹೋಗಿದ್ದಾಳೆಂಬುದು ಮಾರನೆಯ ದಿನವೇ ಖಾತರಿಯಾಯಿತು! ಸಂಜೆಯ ಹೊತ್ತಿಗೆ ಇದ್ದ ದೊಡ್ಡದೊಂದು ಏರುಬ್ಯಾಗಿನಲ್ಲಿ ರೇಷ್ಮೆ ಸೀರೆ, ಕೈಗೆ ಸಿಕ್ಕ ಹಣ ಒಡವೆಗಳನ್ನೆಲ್ಲಾ ಹೊತ್ತೊಯ್ದಿದ್ದಾಳೆಂಬುದು ಮಲತಾಯಿ ಗಾಯಿತ್ರವ್ವನಿಗೆ ಗೊತ್ತಾಯಿತು! ಒಡನೆಯೇ ಲಬೊ ಲಬೊ ಬಾಯಿ ಬಡಕೊಂಡಳು! ವಿಷಯ ಏನೆಂಬುದು







ಅಕ್ಕಪಕ್ಕದವರಿಗೆಲ್ಲಾ ಡಂಗುರ ಸಾರಿದಂತಾಯಿತು !

ಸಣ್ಣೇಗೌಡರು ಕುದಿಯಲಾರಂಭಿಸಿದರು.

''ಒಂದು ಕಡೆ ಅವರ ದೊಡ್ಡಸ್ತಿಕೆಗೇ ಕಂಟಕವಾಗಿರುವ ಎಲೆಕ್ಷನ್ನು! ಇನ್ನೊಂದು ಕಡೆ ಮಾನ ಮರ್ವಾದಿಯನ್ನೆಲ್ಲಾ ನೀಗಲಿಕ್ಕಿದ್ದ ಮಗಳ ಪಲಾಯನ! ಸಣ್ಣೇಗೌಡರಂತೂ ತಲ್ಲಣಿಸಿದರು. ವಿಷಯ ಬ್ಯಾಡ ಬ್ಯಾಡ ಅಂದರೂ ಊರು ಕೇರಿಗಳಲ್ಲೆಲ್ಲಾ ತುಂಬಿ ತುಳುಕಿ ಸುತ್ತಮುತ್ತಲ ಊರುಗಳಿಗೂ ಹರಿದುಹೋಯಿತು! ಎಲೆಕ್ಷನ್ನಿನ್ನ ಗದ್ದಲದಾಗೇ ಇಂಗಾಗ ಬೇಕೆ ?! ಅದರಾಗೂ ಈ ಸಲ ಎದುರಾಳಿಗಳ ಮೆಜಾರಿಟಿಯೇ ಮೇಲಾಗುವಂಗೆ ಕಾಣ್ತೈತೆ ! ಛೆ ! ಛೆ ! ಅವುಳೇನಾದ್ರೂ ಈಗ ಕೈಗೆ ಸಿಕ್ಕರೆ ಕೊಚ್ಚಿ ಕೊಚ್ಚಿ ಹದ್ದು ಕಾಗೆಗಳಿಗೆ ಎಸೆದುಬಿಟ್ಟೇನು... ಓಡಿಸಿಕೊಂಡು ಹೋಗಿರೊ ಆ ಲೋಫರ್ ಯಾವನೋ ?! ಏನ್ಕತೆಯೋ ?! ಶಿವ ! ಶಿವ !''

ಹುಬ್ಬಳ್ಳಿಯ ಬಸ್ ನಿಲ್ದಾಣದಿಂದ ಇಬ್ಬರೂ ಆಟೋರಿಕ್ಷಾ ಹತ್ತಿ ಹೈವೇ ಮಗ್ಗುಲಲ್ಲಿಯ ತೆಂಗಿನ ಗರಿ-ತಡಿಕೆಗಳ ಜೋಪಡಿಯೊಂದನ್ನು ತಲುಪಿದರು. ಇದೇ ಭೂದೇವಿಯ ಮತ್ತು ಅವನ್ಯಾವನದೋ ಅರಮನೆ ಎಂಬುದನ್ನು ತಿಳಿದ ಸಣ್ಣೇಗೌಡರೊಳಗಿನ ತಂದೆಯ ಕರುಳು ಚುರಕ್ ಅಂದರೂ ಮಾನಗೆಟ್ಟೋಳಿಗೆ 'ಇದೇ ಸರಿಯಾದ ಶಾಸ್ತಿ! ಅನುಭವಿಸಲಿ' ಅಂದು ಕೊಂಡರು. ಮುಂದಿದ್ದ ಮೂರ್ನಾಕು ತೆಂಗಿನಹಗ್ಗದ ಮಂಚಗಳಲ್ಲಿ ಕೆಲವು ಲಾರಿ ಚಾಲಕರೂ ಕ್ಲೀನರುಗಳೂ ಯಂಗೆಂಗೋ ಕುಂತಿದ್ದರು; ಯಂಗೆಂಗೋ ಮಕ್ಕಂಡಿದ್ದರು. ಅವರಿಗೆ ಏನನ್ನೊ ಸಪ್ಲೈ ಮಾಡುವುದರಲ್ಲಿ ತಲ್ಲೀನಳಾಗಿದ್ದ ಭೂದೇವಿ ಕಾಣಿಸಿದಳು. ಯಂಥದೋ ಮಾಸಲು ಸೀರೆ! ಮಸಿ ಮಸಿಯಾದ ಕೈಮೈ! ಮನೆಕೆಲಸದವಳಿಗಿನ್ನ ಹೀನಾಯ ಸ್ಥಿತಿ! ಒಟ್ಟಾರೆ ಬೀದಿಗೆ ಬಿದ್ದ ಮಲ್ಲಿಗೆಹೂವಿನಂಗೆ ಒಣಗಿಬಿಟ್ಟಿದ್ದಾಳೆ! ಗೌಡರಿಗೆ ಸಖೇದಾಶ್ಚರ್ಯ – 'ಭೂದೇವಿ ಇವುಳಾ ?!' ಅಂದುಕೊಂಡರು. ಅಷ್ಟರಲ್ಲಿ ಇವರನ್ನು ಗಮನಿಸಿದ ಅವಳು ತತ್ರಿಬಿತ್ರಿಯಾಗಿ 'ನಿಂತ ನಿಲುವಿನಲ್ಲೇ ನಾನು ಕರಗಿಹೋಗಬಾರದೇ ; ನೆಲ ಬಾಯಿ ಬಿಡ ಬಾರದೇ' ಅಂದುಕೊಂಡಳು. ಅವುರ್ನ ಯಂಗೆ ಮಾತಾಡುಸ್ಬೇಕು ? ಎಂಗೆ ಹತ್ರ ಕರೀಬೇಕು ? ಎಲ್ಲಿ ಕುಂದ್ರಿಸಬೇಕು ? ಎಂಬುದೇ ತಿಳಿಯಲಿಲ್ಲ! ಗೌಡರು ಯಾಕೋ ನಿಂತಿರಲಾಗದೆ ಖಾಲಿಯಾದ ಒಂದು ಹಗ್ಗದ ಮಂಚದ ತುದಿಯಲ್ಲಿ ಕುಂತುಕೊಂಡರು. ಮುಖದಲ್ಲಿ ಹನಿಯುತ್ತಿದ್ದ ಬೆವರನ್ನೂ ಒರೆಸಿಕೊಳ್ಳಲಿಲ್ಲ! ಇವರ ಪರವಾಗೆಂಬಂತೆ ಬಳ್ಳೊಳ್ಳಿ ಮಾಸ್ತರೇ ಅವಳ ಬಳಿ ನಿಂತು ಅನುನಯ ತೋರಿದರು. ಅಪ್ಪಾಜಿಗೆ ಮುಖ ತೋರಿಸ ಲಾಗದೆ ಕಂಬದ ಮರೆಯಲ್ಲೇ ನಿಂತು ಕಣ್ಣೀರು ಸೀಟಿಕೊಳ್ಳುತ್ತಾ ಮಾತಾಡದಂತೆ ಬಿಕ್ಕಿದಳು.

ಅಂತೂ ಮುಖ್ಯ ವಿಷಯ ತಿಳಿಯಿತು : ದಿನವೂ ದುರ್ಗಕ್ಕೆ ಓಡಾಡುತ್ತಿದ್ದ ಭೂದೇವಿ ಬೆಳಿಗ್ಗೆ ದುರ್ಗದಲ್ಲಿ ಬಸ್ಸಿನಿಂದಿಳಿಯುತ್ತಿದ್ದ ಸಂಜೆ ಹತ್ತುತ್ತಿದ್ದ ಸ್ಟಾಂಡಿನ ಅರುಗಿನಲ್ಲೇ ಇರುವ 'ಗಾಯತ್ರಿ ಭವನ'ದಲ್ಲಿ ಸಪ್ಲೇರ್ ಆಗಿದ್ದ ಶ್ರೀನಿವಾಸ ಎಂಬುವವನು ಆಗಾಗ ಯಜಮಾನನಂತೆ ಗಲ್ಲದಲ್ಲೂ ಕುಂತುಕೊಳ್ಳುತ್ತಿದ್ದ. ಆ ಠೀವಿಗೆ ಮರುಳಾದಳೋ ಏನೋ! ಹುಟ್ಟಿ ಬೆಳೆದ ಲವ್ವು 'ನೀನಿಲ್ಲದೆ ನಾನಿಲ್ಲ; ನಾನಿಲ್ಲದೆ ನೀನಿಲ್ಲ' 'ನಾವು ಬದುಕಿದರೂ ಜೊತೆಗೇ; ಸತ್ತರೂ ಜೊತೆಗೇ' ಎಂಬಲ್ಲಿಗೆ ತಲಪಿತು ! ಕಡೆಗೆ ಭೂದೇವಿ ''ನಮ್ಮ ಮದುವೆಗೆ ಅಪ್ಪಾಜಿ ಒಪ್ಪಲ್ಲ. ವಿಷಯ ಎತ್ತಿದರೇ ನನ್ನನ್ನು ಸಾಯಿಸಿಬಿಡ್ತಾರೆ'' ಎಂಬಂಥ ಭಯದಿಂದ ಶ್ರೀನಿವಾಸನೊಂದಿಗೆ ಹುಬ್ಬಳ್ಳಿ ಕಡೆಯ ಬಸ್ಸು ಹತ್ತಿದಳು! ಅವಳ ಏರುಬ್ಯಾಗಿನಲ್ಲಿಯ ಬಂಡವಾಳ ಕರಗುವುದರೊಳಗೆ ಬಾಡಿಗೆ ನೆಲ ಹಿಡಿದು, ಈ ಗುಡಿಸಲ ಹೋಟಲು ಕಟ್ಟಿ ಕೊಂಡರು. ಉಣ್ಣುವ ಮಲಗುವ ಸಂಸಾರವೆಲ್ಲಾ ಇದರಲ್ಲಿಯೇ. ಈಗ ಶ್ರೀನಿವಾಸ ತರಕಾರಿ, ದಿನಸಿ ತರಲು ಸಿಟಿಗೆ ಹೋಗಿದ್ದಾನೆಂಬುದನ್ನು ತಿಳಿದ ಸಣ್ಣೇಗೌಡರು 'ಇಂಥ ಭಾಗ್ಯಕ್ಕಾಗಿ ಓಡಿ ಬರಬೇಕಾಗಿತ್ತಾ! ದರಿದ್ರದ್ದು ಕೆಟ್ಟೋಗಿಬಿಡ್ತು... ನಾಯಿ ಮುಟ್ಟಿದ್ದು ನಾಯಿಗೇ ಇರಲಿ' ಅಂದುಕೊಳ್ಳುತ್ತಿದ್ದಂತೆಯೇ ಅವಳು ''ನನ್ನ ಕ್ಷಮಿಸಿಬಿಡಿ ಅಪ್ಪಾಜಿ...'' ಅಂದಳು. ದನಿಯಿಲ್ಲದ ದನಿಯಲ್ಲಿ ''ನೀನು ಮಾಡಿದ್ದು ನೀನು ಅನುಭವಿಸು... ನೀನು ಕಟ್ಟಿ ಕೊಂಡಿರಾ ಲೋಫರ್ ಯಾತರವನು ?'' ಎಂದು ಕೇಳಿದರು. ''ಅವರು ನಮಗಿನ್ನ ಮೇಲು ಜಾತಿಯೋರು ಅಪ್ಪಾಜಿ'' ಅಂದಳು. ಗೌಡರು 'ಸಧ್ಯ ಕೊಚ್ಚೆಗೆ ಬೀಳ್ಲಿಲ್ವಲ್ಲ' ಅಂದುಕೊಂಡು ಮುಖದ ಬೆವರನ್ನು ಒರೆಸಿಕೊಂಡು ಬೊಕ್ಕಣಕ್ಕೆ ಕೈಹಾಕಿ, ಸಿಕ್ಕಷ್ಟು ನೋಟುಗಳನ್ನು ಅವಳ ಕೈಗಿಟ್ಟು, ಬಳ್ಳೊಳ್ಳಿ ಮಾಸ್ತರೊಂದಿಗೆ ಅಲ್ಲಿಂದ ಕಾಲ್ತೆಗೆದು ''ಈ ಕಡೆಯ ಊಟವೇ ಊಟ'' ಅಂದುಕೊಂಡು, ಇಬ್ಬರೂ ಖಾನಾವಳಿಯಲ್ಲಿ ಹೊಟ್ಟೆ ತುಂಬ ರೊಟ್ಟೆ-ಪಲ್ಲೆ ಉಂಡು, ಬಾಳೆಹಣ್ಣು ತಿಂದು, ಬೀಡಾ ಜಗಿಯುತ್ತಾ ದುರ್ಗದ ಕಡೆಯ ಬಸ್ಸು ಹತ್ತಿದರು.

'ಭೂದೇವಿ ಬಿದ್ದಿರುವುದು ಕೊಚ್ಚೆಗಲ್ಲ!' ಎಂಬಂಥ ಒಂದು ಮಟ್ಟದ ಸಮಾಧಾನದಲ್ಲಿ ಎಲೆಕ್ಷನ್ನಿನ ಓಡಾಟದತ್ತ ಧ್ಯಾಸ ಹರಿಸಿದರು. 'ಎಲೆಕ್ಷನ್ನಿನಲ್ಲಿ ಸೋಲದೂ ಒಂದೇ ಸಾಯದೂ ಒಂದೇ' ಎಂಬ ಭಯದಲ್ಲಿ ಗೆಲುವಿಗಾಗಿ ಮಾಡಬೇಕಾದ ಹಿಕ್ಮತ್ತುಗಳನ್ನೆಲ್ಲಾ ಮಾಡಿದರು; ತಂತ್ರಗಳನ್ನೆಲ್ಲಾ ಅನುಸರಿಸಿದರು. ಹಣದ ಮುಖ ನೋಡದೆ ಖರ್ಚು ಮಾಡಿದರು.

ಕಡೆಗೆ ಗೌಡರ ಅದೃಷ್ಟವೋ ಮನೆದೇವರ ದಯವೋ ಎಲೆಕ್ಷನ್ನಿನಲ್ಲಿ ಕೆಲವೇ ಕೆಲವು ಬೆಂಬಲಿಗ-ಸಹಸ್ಪರ್ಧಿಗಳೊಂದಿಗೆ ಬಲುಕಡಿಮೆ ಮತಗಳ ಅಂತರದಲ್ಲಿ ಗೆದ್ದದಾಯಿತು. ಇನ್ನು ಉಳಿದಿರುವುದೆಂದರೆ ಅಧ್ಯಕ್ಷ ಜಾಗಕ್ಕೆ ಆಯ್ಕೆ. ಅದೇ ಮುಖ್ಯ ! 'ಇನ್ನ ತಲೆಯ

## ಹೆಜ್ಜೆಗಳು

ಓ ಮರೆಯಲಾರದವನೆ
ನಿನ್ನ ಹೆಜ್ಜೆಗುರುತಗಳ ಅವಶೇಷ
ಇನ್ನೂ ಚಿರಂತನ.

ಹೇಗೆ ಬಡಿದುಕೊಳ್ಳುತ್ತಿದೆ
ಮೆದುಹೃದಯ
ನಿನ್ನೆಜ್ಜೆ ಗುರುತುಗಳಡಿಯಲ್ಲಿ.

ಹಿಂದೆ ಪುರಾಣದಲ್ಲಿ
'ವಾಮನ' ನಿದ್ದನಂತೆ, ತುಳಿತಕ್ಕೆ 'ಬಲಿ'ಯೂ ಬಲಿ.
ನೀನು 'ವಾಮನ' ನಲ್ಲ
ನಾನು ಮಾತ್ರ 'ಬಲಿ'ಯಷ್ಟೆ.

ಹೇಗೆ ತಾನೆ ಅಳೆಯಲಿ
ಅಳತೆಗೆ ಸಿಕ್ಕದ, ಹೆಜ್ಜೆಗಳ
ಹೆಜ್ಜೆ ಇಟ್ಟೊಡನೆ ನೀನು
ನನ್ನೆದೆಯ ಗರಿಕೆಯೂ ಕಮರಿತು.

ಏನು ಮಾಡಲಿ
ನಿನ್ನೆಜ್ಜೆ ಗುರುತಗಳ ಮಧ್ಯೆ
ಬದುಕಬೇಕು.

ವಿಶ್ವನಾಥ ಎಲ್. ವೇಮುಗಲ್
ವೇಮುಗಲ್ - ೫೬೩ ೧೫೭, ಕೋಲಾರ ತಾಲ್ಲೂಕು

ಮ್ಯಾಲೆ ತಲೆ, ಹೆಣದ ಮ್ಯಾಲೆ ಹೆಣ ಬಿದ್ದರೂ ಆ ಜಾಗ ಹಿಡಿಯಲೇಬೇಕು. ಊರ್‍ನ ಬ್ಯಾರೆ ಯಾವನಿಗೂ ಬಿಟ್ಟುಕೊಡಬಾರ್‍ದು. ತನ್ನ ಗತ್ತು-ಗೈರತ್ತುಗಳ್ನ ಉಳಿಸ್ಕಬೇಕು. ನಮ್ಮ ಗುರು ಹಿರೇರ ನಡಾವಳಿಗಳ್ನ ಪಾಲಿಸ್ಬೇಕು.. ಸಣ್ಣೋಳಿಗಾದ್ರೂ ಒಳ್ಳೇ ಸಮಂದ ನೋಡಿ ಎಲ್ಲರ ಕಣ್ಣು ಕುಕ್ಕುವಂಗೆ ಗೌಡ ಮದಿವೆ ಮಾಡ್ಬೇಕು.'

ಗ್ರಾಮದ ವಾತಾವರಣವನ್ನು ನೋಡಿದರೆ ಈ ಬಾರಿ ಎದುರಾಳಿಯ ಮೆಜಾರಿಟಿಯೇ ಜೋರು ಅನಿಸುತ್ತದೆ! ಬೆಂಬಲಿಗರ ಅಭಿಪ್ರಾಯವೂ ಅದೇ! ಸಣ್ಣೇಗೌಡರಂತೂ ಭಯ ಭೀತರಾಗಿದ್ದಾರೆ. ಈ ಗ್ರಾಮ ಪಂಚಾಯಿತಿಗೆ ಸೇರಿರುವ ಐದಾರು ಹಳ್ಳಿಗಳ ಸುಮಾರು ಇಪ್ಪತ್ತು ಮಂದಿ ಚುನಾಯಿತ ಸದಸ್ಯರನ್ನು ಸೆಳೆಯುವುದೇ ಒಂದು ಹರಸಾಹಸ! ಇದರಲ್ಲಿ ಯಾವಾಗ ಮನೆ-ಬಾಗಿಲು ನೋಡುತ್ತಿದ್ದರೋ ಯಾವಾಗ ಅನ್ನ-ನೀರನ್ನು ಮುಟ್ಟುತ್ತಿದ್ದರೋ...

ಒಂದು ಸಂಜೆ. ಶ್ರೀದೇವಿ ಮಾಮೂಲಿನಂತೆ ಮಾದೇವಿ ಬಸ್ಸಿಗೆ ಬರಲಿಲ್ಲ. ಕಡೇ ಲಾಸ್ಟು ಗೌರಿಶಂಕರಕ್ಕಾದರೂ ಬರೋದು ಬೇಡವೆ ?! ಯಡವಟ್ಟುಗಳಿಂದ ಬಸ್ಸುಗಳೆಲ್ಲಾ ಮಿಸ್ಸಾದಾಗ ಆಟೋರಿಕ್ಷಾ ಮಾಡಿಕೊಂಡಾದರೂ ಬರುವುದಿತ್ತು. ಇನ್ನೂ ಒಂದೊಂದಿನ ಯಾವನೋ ಒಬ್ಬ ಪಟರು ಬೈಕಿನಲ್ಲಿ ತಂದು ಊರಬಾಗಿಲಲ್ಲಿ ಬಿಟ್ಟು ಹೋಗುತ್ತಿದ್ದುದೂ ಉಂಟಂತೆ! ಆದರೆ ಇವಾಗ ಯಾವ ರೀತಿಯಲ್ಲೂ ಅವಳ ಸುಳಿವಿಲ್ಲವೆಂದರೆ! ಗಾಯಿತ್ರವ್ವಗೆ ಗಾಬರಿಯಾಯಿತು. ಸರಸರನೆ ಒಡವೆ-ವಸ್ತ್ರಗಳನ್ನೆಲ್ಲಾ ಗಬರ್‍ಯಾಡಿದಳು. ಸಧ್ಯ ಏನೂ ಕಣ್ಮರೆಯಾಗಿರಲಿಲ್ಲ. ಬೀಗದ ಕೈಗೊಂಚಲೂ ಸುಭದ್ರವಾಗೇ ಇದೆ! ಮುಗುಳು ನಕ್ಕಳು! ಯಥಾಪ್ರಕಾರವಾಗಿ, ಹೆಚ್ಚು ರಂಪಾಟವಿಲ್ಲದೆ ಎಲ್ಲಾ ಕಡೆಯೂ ವಿಚಾರಿಸಿದ್ದಾಯಿತು. ಮೂರು-ನಾಕು ದಿನಗಳ ನಂತರ ಅವಳೂ ಕಂಬಿ ಕಿತ್ತಿದ್ದಾಳೆಂಬುದು ನಿಚ್ಚಳವಾಯಿತು!

ಸಣ್ಣೇಗೌಡರಿಗೆ – ಏನು ಮಾಡಬೇಕು ಎಂಬುದೇ ತಿಳಿಯದಂಗಾಯಿತು! ಹುಚ್ಚು ಹಿಡಿಯುವುದೊಂದೇ ಬಾಕಿ! ಅಧ್ಯಕ್ಷ ಜಾಗಕ್ಕೆ ನಡೆದಿರುವ ಪೈಪೋಟಿಯ ಹೊತ್ತಿನಲ್ಲೇ ಇಂಗೆಲ್ಲಾ ಆಗಬೇಕಾ! ಬೆಂಕಿ ಬಿದ್ದ ಒಣಬಣವೆಯಂತೆ ಒಳಗೊಳಗೇ ಉರಿಯ ಲಾರಂಭಿಸಿದರು. 'ಇದೆಲ್ಲಾ ಯಾವ ಜಲ್ಮದ ಪಾಪದ ಫಲವೋ!'

ಸಣ್ಣೇಗೌಡರೆಂದರೇನು ಸಾಮಾನ್ಯರಲ್ಲ. ತಲೆತಲಾಂತರದಿಂದ ಬಂದ ಊರ ಗೌಡಿಕೆ; ಮೆಜಾರಿಟಿಯಿಂದ ಸಂದ ಅಧ್ಯಕ್ಷಗಿರಿ! ಯಾವಾಗಲೂ ಯಾರಿಗೂ ತಲೆತಗ್ಗಿಸದ ಗತ್ತು; ಯಾವ ವಿಷಯಕ್ಕೂ ಅಂಜದ ಗೈರತ್ತು! ಬಂಗಲೆಯಂಥ ಮನೆ, ಎರಡೋ ಮೂರೋ ಟ್ಯಾಕುಟ್ರ, ನೂರಾರು ಯಕರೆ ಅಡಿಕೆ ತೋಟ, ಇನ್ನೂರು ಯಕರೆ ಹೊಲ! ಯಂಥ ಫಲಾತ್ಮನನ್ನೂ ನಿಂತ ನಿಲುವಿನಲ್ಲೇ ಖರೀದಿಸಿಬಿಡುವಂಥ ತಾಕತ್ತುಳ್ಳ ಇವರ ಮಾತೆಂದರೆ ಮಾತು; ನೀತಿಯೆಂದರೆ ನೀತಿ! ಇವರ ದರ್ಬಾರಿನಲ್ಲಿ ಯಾರು ಯಾರು ಎಲ್ಲೆಲ್ಲಿರಬೇಕೋ ಅಲ್ಲಲ್ಲೇ ಇರಬೇಕು; ಯಾರು ಯಾರು ಯಂಗೆಂಗಿರಬೇಕೋ ಅಂಗಂಗೇ ಇರಬೇಕು! ಈ ಸಂಪ್ರದಾಯವನ್ನು ಮೀರಿದವರು ಇವರ ಕಟ್ಟೆಪಂಚಾತಿಯಲ್ಲಿ ದಂಡ ಕಕ್ಕಿದ್ದಾರೆ. ಈಚಲ ಬರಲು ತುಂಡು ತುಂಡಾಗುವಂತೆ ಬಡಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ, ಹೆದರಿ ಊರನ್ನೇ ಬಿಟ್ಟು ಓಡಿಹೋದವರೂ ಉಂಟು! ಆದ್ದರಿಂದ ಈ ಗ್ರಾಮದಲ್ಲಿ ಜಾತಿ ಮೀರಿದ ನಡವಳಿಕೆ ಗಳಾಗಲೀ ಅಕ್ರಮ ಸಂಬಂಧಗಳಾಗಲಿ ಬೆಳಕಿಗೆ ಬರುವುದೇ ವಿರಳ! ಇಂಗಾಗಿ ಸಣ್ಣೇಗೌಡರ ಬಗ್ಗೆ ಗ್ರಾಮಸ್ಥರಿಗೆಲ್ಲಾ ಒಂದು ತರಹದ ಭಯದಂಥ ಗೌರವ! ಬದುಕಿನಲ್ಲಿ ಯಾವುದೇ ಅರೆ-ಕೊರೆ ಇಲ್ಲದ ಇವರ ಮೊದಲ ಹೆಂಡತಿ ಯಾವುದೋ ಕಾಯಿಲೆಯ ನಿಮಿತ್ತ ಶಿವನ ಪಾದ ಸೇರಿದಾಗ ಭೂದೇವಿ ಶ್ರೀದೇವಿ ಇನ್ನಾ ಸಣ್ಣವರು. ಇವರ ಲಾಲನೆ-ಪಾಲನೆಗೆಂದು ತಿರುಪತಿಯಲ್ಲಿ ಮದುವೆ ಮಾಡಿಕೊಂಡು ಗಾಯಿತ್ರವ್ವನನ್ನು ತಂದು ಮನೆಯಾಗೆ ಇಟ್ಟು ಕೊಂಡರು. ಈಕೆ ಭೂದೇವಿ ಶ್ರೀದೇವಿಯರ ಪಾಲಿಗೆ ಕೇವಲ ಮಲತಾಯಿಯಾದಳೇ ವಿನಾ ಹೆತ್ತ ತಾಯಿಯಂತಾಗಲೇ ಇಲ್ಲ. ಅಂದಹಾಗೆ ಗಾಯಿತ್ರವ್ವ ಗೌಡರ ಜಾತಿಯವಳಲ್ಲ ಇನ್ನೂ ಮೇಲು ಜಾತಿಯವಳಂತೆ! ಗೌಡರಿಗಂತೂ ಅದೇ ಒಂದು ಹೆಮ್ಮೆಯ ಸಂಗತಿ!

'ದೊಡ್ಡೋಳ ಕಥೆ ಗೊತ್ತಾಯ್ತು. ಇನ್ನು ಸಣ್ಣೋಳ ಪುರಾಣ ?!' ಇಡೀ ಗ್ರಾಮಕ್ಕೆ ಕುತೂಹಲವೋ ಕುತೂಹಲ.

ಮಗಳು ಅಳಿಯ ಇರುವ ಬೆಂಗಳೂರಿಗೆ ಆಗಾಗ ಹೋಗಿ ಬರುವ ಗ್ರಾಮಲೆಕ್ಕಿಗ ಸೀನಣ್ಣನು ಬಳ್ಳೊಳ್ಳಿ ಮಾಸ್ತರಂತೆಯೇ ವಿಷಯವೊಂದನ್ನು ಹೊತ್ತು ತಂದ : ಬೆಂಗಳೂರು ಪೇಟೆಯಲ್ಲಿ ಶ್ರೀದೇವಿ ಹಾಗೂ ಅವಳ ಕೈಹಿಡಿದಿದ್ದ ಹುಡುಗನೂ ಸಿಕ್ಕಿದ್ದರಂತೆ! ಅವಳು ತನ್ನ ಅಪ್ಪಾಜಿಯ ಬಗ್ಗೆ ಬಲು ವಿಚಾರಿಸಿಕೊಂಡು, ಮನೆಯ ವಿಳಾಸ ಬರೆದುಕೊಟ್ಟಳಂತೆ! ಅವರಿಬ್ಬರು ತುಂಬಾ ಅವಸರದಲ್ಲಿದ್ದುದರಿಂದ ಹೆಚ್ಚು ಮಾತಾಡಲು ಆಗಲಿಲ್ಲವಂತೆ.

ಸಣ್ಣೇಗೌಡರ ಸ್ಥಿತಿಯನ್ನು ಹೇಳುವುದೇ ಬೇಡ.

''ಮಂತ್ಯಾನದ ಗೌರವಕ್ಕೆ ಬೆಂಕಿ ಇಕ್ಕಿದ್ದಲ್ಲದೆ ವಿಳಾಸಾನೂ ಕೊಟ್ಟಿದಾಳಲ್ಲ! ನಾಚಿಕೆ ಗೆಟ್ಟೋಳಿಗೆ ಎಷ್ಟು ಧೈರ್ಯ! ಯಂಗಾದ್ರೂ ಹಾಳಾಗ್ಲಿ ಎಲ್ಲಾದ್ರೂ ಸಾಯ್ಲಿ ಅಂದ್ಕೊಂಡು ಮನಸಂಬದು ಕೇಳಂಗಿಲ್ವಲ್ಲ!... ದೊಡ್ಡೋಳು ದೊಡ್ಡ ಜಾತೀನ ಸೇರಿಕೊಂಡ್ಳು. ಸಣ್ಣೋಳು ಯಾವ ಕೊಚ್ಚಿಗೆ ಬಿದ್ದುಬಿಟ್ಳೋ...'' ನೋಡಬೇಕು, ತಿಳಿಯಬೇಕೆಂಬ ಕುತೂಹಲ ಹುಟ್ಟಿಕೊಂಡಿತು.

ಯಥಾಪ್ರಕಾರವಾಗಿ, ಗ್ರಾಮಲೆಕ್ಕಿಗ ಸೀನಣ್ಣನನ್ನು ಎಳೆದುಕೊಂಡು, ಬೆಂಗಳೂರಿಗೆ ಹೋಗಿ, ವಿಳಾಸದ ಪ್ರಕಾರ 'ಕಪ್ಪು ಸೂರ್ಯ' ಎಂಬ ಹೆಸರಿನ ಮನೆಯನ್ನು ಕಂಡರು. ಸೀನಣ್ಣನೇ ಮುಂದಾಗಿ ಕದ ತಟ್ಟಿದಾಗ ಬಾಗಿಲು ತೆರೆದ ಶ್ರೀದೇವಿ ಅವನನ್ನೂ ಗೇಟಿನ ಬಳಿ ನಿಂತಿದ್ದ ಅಪ್ಪಾಜಿಯನ್ನೂ ಕಂಡು ಸಿಡಿಲು ಬಡಿದವಳಂತೆ ತತ್ತರಿಸಿ, ಕ್ಷಣದಲ್ಲೇ ಚೇತರಿಸಿಕೊಂಡು, ಒಳಕ್ಕೆ ಆಹ್ವಾನಿಸಿದಳು. 'ಒಳಕ್ಕೋಗಿ ಸೋಪಾದಲ್ಲಿ ಕುಂತ್ಗಂಡು ಕಷ್ಟ ಸುಖ ವಿಚಾರಿಸಬೇಕಾ ?!' ಅಂದುಕೊಂಡ ಸಣ್ಣೇಗೌಡರು ನಿಂತಲ್ಲೇ ನಿಂತುಕೊಂಡು ''ಅಕ್ಕ ತಂಗೇರಿಬ್ರೂ ಒಳ್ಳೆ ಯಲಕ್ಷನ್ ಟೈಮಿನಾಗೇ ನನ್ನ ಮಾನ ಮರ್ವಾದೀನೆಲ್ಲಾ ಹರಾಜಾಕಿಬಿಟ್ರಿ... ನಿಮ್ಮನ್ನ ಇಲ್ಲೀತಂಕ ಬೆಳೆಸಿದ ನನ್ನನ್ನೇ ನಾನು ಯಕ್ಕಡದಾಗೆ ಹೊಡ್ಕೋಬೇಕು. ಥೂ, ನಿಮ್ಮ ಜನ್ಮಕ್ಕಿಷ್ಟು...'' ಎಂದು ಮುಂತಾಗಿ ಸಿಟ್ಟಿನ ಜ್ವಾಲೆಯನ್ನೆ ಹರಿಸಿಬಿಟ್ಟರು! ಸೀನಣ್ಣ ಏನೂ ಮಾಡಲಾಗದೆ ಆ ಅಂದ-ಚಂದದ ಬಾಗಿಲ ಬಳಿ ನಿಂತುಕೊಂಡು ಅವಳೊಂದಿಗೆ ಮಾತನಾಡಿ ಮುಖ್ಯ ವಿಷಯಗಳನ್ನು ತಿಳಿದುಕೊಂಡ.

ಪ್ರೀತಿಸಿದ ಪ್ರಭಾಕರ ಎಂಬುವವನು ಸಂಪ್ರದಾಯದ ಮದುವೆ ಈ ಜನ್ಮದಲ್ಲೇ ಸಾಧ್ಯವಿಲ್ಲ ಎಂಬುದನ್ನು ತಿಳಿದು, ಸ್ವಇಚ್ಛೆಯಿಂದ ತೊಟ್ಟ ಬಟ್ಟೆಯಲ್ಲೇ ತನ್ನೊಂದಿಗೆ ಬಂದ ಶ್ರೀದೇವಿ ಯನ್ನು ಗೆಳೆಯರ ಸಮ್ಮುಖದ ಸಮಾರಂಭವೊಂದರಲ್ಲಿ ವಿವಾಹವಾಗಿ, ಸ್ವಂತ ಮನೆಯಲ್ಲಿ ಚಂದದ ಸಂಸಾರ ಆರಂಭಿಸಿದ್ದಾನೆ. ಹೆಸರಾಂತ ಕಂಪನಿಯಲ್ಲಿ ದೊಡ್ಡ ಇಂಜಿನಿಯರ್ ಆಗಿರುವ ಅವನು ಇವಳನ್ನು ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಸುತ್ತಾನೆ. ದೂರದ ತಮ್ಮೂರಿನಲ್ಲಿರುವ ಅತ್ತೆ-ಮಾವಂದಿರು ಅಕ್ಕರೆಯಲ್ಲಿ ತಂದೆ-ತಾಯಿಗಳಿಗಿಂತ ಹೆಚ್ಚು. ನಾದಿನಿ ಮೈದುನರೂ ಒಡಹುಟ್ಟಿದವರ ಹಾಗೇ. ಒಟ್ಟಿನಲ್ಲಿ ಶ್ರೀದೇವಿ ಸುಖವಾಗಿ – ನೆಮ್ಮದಿಯಾಗಿ – ಮಹಾರಾಣಿಯಂತಿದ್ದಾಳೆಂಬುದು ಮೇಲುನೋಟದಲ್ಲೇ ತಿಳಿಯುತ್ತದೆ. ಉಟ್ಟು ತೊಟ್ಟ ಒಡವೆ ವಸ್ತ್ರಗಳಂತೆ ಕೆನ್ನೆಯಲ್ಲಿ ಕಾಂತಿ; ಕಣ್ಣುಗಳಲ್ಲಿ ಹೊಳಪು! ಸಣ್ಣೇಗೌಡರಿಗೆ ಇದೆಲ್ಲಾ ಮುಖ್ಯ ಅನಿಸಲಿಲ್ಲ. ನಿಂತಲ್ಲೇ ನಿಂತುಕೊಂಡು ''ನಿನ್ನ ಗಂಡ ಯಾರು ?'' ಎಂಬ ಪ್ರಶ್ನೆ ಎಸೆದರು! ಶ್ರೀದೇವಿ ಒಂದು ಹೆಜ್ಜೆ ಹಿಂದೆ ಸರಿದು ''ಎಸ್ಸಿ'' ಎಂದಳು!

ಸಣ್ಣೇಗೌಡರಿಗಂತೂ ಹತ್ತಾರು ಸಿಡಿಲುಗಳು ಒಂದೇ ಸಲ ಬಡಿದಂತಾಯಿತು! ಪ್ರಜ್ಞೆ ತಪ್ಪಿ ಬೀಳುವುದೊಂದೆ ಬಾಕಿ!

ಈ ಆಘಾತದಲ್ಲಿ ಊರನ್ನು ಹೇಗೆ ತಲಪಿದರೋ ಅವರಿಗೇ ತಿಳಿಯದು!

ಮನೆಯಲ್ಲಿ ತಲೆಯ ಮೇಲೆ ಕೈ ಹೊತ್ತು ಕುಂತದ್ದಾಯಿತು. ಒಂದು ಕಡೆ ಸ್ಥಾನ-ಮಾನದ ಪ್ರಶ್ನೆ, ಇನ್ನೊಂದು ಕಡೆ ಮಾನ-ಮರ್ಯಾದೆಯ ಚಿಂತೆ. 'ಕಟ್ಟೆ ಮ್ಯಾಲೆ ಕುಂತು ಪಂಚಾತಿ ಮಾಡಿ, ಎಷ್ಟೋ ಜನಕ್ಕೆ ಮುಲಾಜಿಲ್ಲದೆ ಶಿಕ್ಷೆ ವಿಧಿಸಿದ ನನ್ನ ಮನೆಯಾಗೇ ನಡೀಬಾರದ್ದು ನಡೀತಲ್ಲ! ಇನ್ನ ಊರಾಗೆ ತೆಲೆ ಎತ್ತಿಕೊಂಡು ಓಡ್ಯಾಡದೆಂಗೆ? ಉಸುರೆತ್ತಿ ಮಾತಾಡದೆಂಗೆ? ಜೀವ ಇಟ್ಕಂಡು ಇರಾದಾದ್ರೂ ಎಂಗೆ?' ಎಂಬ ಚಿಂತೆಯಲ್ಲಿ ಸ್ನಾನ ಪೂಜಾದಿಗಳ ವಿಷಯ ಹಾಗಿರಲಿ, ಅನ್ನ ನೀರನ್ನೂ ಮುಟ್ಟದಾದರು. ಗಾಯಿತ್ರವ್ವ ''ಇಂಗಾಗ ಬಹುದೂಂತ ನನಗೆ ಮೊದಲೇ ಗೊತ್ತಿತ್ತು. ಬಂದ ಯಾವ ಯಾವನಿಗಾದ್ರೂ ಅವಾಗಲೇ ಕಟ್ಟಿ ಅತ್ತ ಸಾಗಹಾಕ್ಬೇಕಾಗಿತ್ತು. ನನ್ನ ಮಾತುಗಳ್ನ ನೀವು ಕಿವಿಗೇ ಹಾಕ್ಕೊಳ್ಳಿಲ್ಲ.. ಆದರೂ ನಷ್ಟವೇನೂ ಇಲ್ಲ ಬಿಡ್ರಿ. ಶ್ರೀದೇವಿ ಸುಖದಾಗೇ ಇದ್ದಾಳಲ್ಲಾ...'' ಎನ್ನುತ್ತಿದ್ದಂತೆಯೇ ಸಣ್ಣೇಗೌಡರು ಸಿಡಿಮದ್ದಿನಂತೆ ಸಿಡಿದು ಕೆನ್ನೆಗೆ ಪಠೀರನೆ ಬಾರಿಸಿಬಿಟ್ಟರು!

ಗ್ರಾಮದಲ್ಲಿ ಏನು ನಡೆಯುತ್ತಿದೆ ಎಂಬುದರತ್ತಲೂ ಅವರು ಗಮನ ಹರಿಸಲಿಲ್ಲ.

ಒಂದು ದಿನ ಅವರ ಬೆಂಬಲಿಗ ಸದಸ್ಯರು ಸಂಭ್ರಮದಿಂದ ಬಂದು, ಗೌಡರ ಕುತ್ತಿಗೆಗೆ ಹಾರಗಳನ್ನು ಹಾಕಿ, ''ಇನ್ನು ಮುಂದೆಯೂ ನೀವೇ ನಮ್ಮ ಗ್ರಾಮ ಪಂಚಾಯಿತಿ ಅಧ್ಯಕ್ಷರು'' ಎಂಬ ಖುಷಿಯಲ್ಲಿ ಜಯಕಾರ ಕೂಗಿ, ಗಾಯಿತ್ರವ್ವ ಕೊಟ್ಟ ಮಜ್ಜಿಗೆ ಕುಡಿದು, ಒಬ್ಬರ ಹಿಂದೊಬ್ಬರು ಜಾಗ ಖಾಲಿ ಮಾಡಿದರು.

''ದೇವುರ ದೈದಿಂದ ಯಲಕ್ಷನ್ನಂಬುದು ಈ ಸಾರಿ ಗಲಾಟಿ ಗದ್ಲ ಇಲ್ದೆ ಮುಗೀತಪ! ಸಧ್ಯ ಊರು ತಣ್ಣಗೈತೆ'' ಎಂದು ಮುಂತಾಗಿ ಜನ ಸಮಾಧಾನದ ನಿಟ್ಟುಸಿರುಬಿಟ್ಟರು. ಮುಂಜಾನೆ ತಣ್ಣನೆಯ ಗ್ರಾಮದಲ್ಲಿ ಸುದ್ದಿಯೊಂದು ಸಿಡಿಯಿತು :

''ಸಣ್ಣೇಗೌಡರು ನೇಣು ಹಾಕಿಕೊಂಡು ಸತ್ತರಂತೆ!''

ಎಸ್. ಆರ್. ಗುರುನಾಥ್
೧೧ನೇ ತಿರುವು, ಐ.ಯು.ಡಿ.ಪಿ. ಬಡಾವಣೆ, ಚಿತ್ರದುರ್ಗ

# ಬುದ್ಧ ಕೆಲವು ನೋಟಗಳು

ಮಲ್ಲಿಗಹಳ್ಳಿ ನರೇಂದ್ರಕುಮಾರ್



***(ಬುದ್ಧನ ಬದುಕಿನ ಪ್ರಸಂಗಗಳನ್ನು ಇಲ್ಲಿ ಕಾಣ ಬಹುದು. ಇದು ನಾಟಕವಲ್ಲ. ಬುದ್ಧನ ಹಿರಿಮೆಯನ್ನು ಸೂಚಿಸುವ ಕೆಲವು ನೋಟಗಳು)***

**ಒಂದು**

(ಸಿದ್ಧಾರ್ಥ ಗೌತಮನಿಗೆ ಹದಿನೇಳು ಹದಿನೆಂಟರ ತುಂಬು ಹರೆಯ. ಗೆಳೆಯರೊಟ್ಟಿಗೆ ಬೆರೆತು ಆಡುವ, ಚರ್ಚಿಸುವ ಆತ ಎಲ್ಲದರಲ್ಲೂ ತೀವ್ರ ಕುತೂಹಲಿಯಾಗಿದ್ದ. ಕೆಲವೊಮ್ಮೆ ಏಕಾಂಗಿತನವನ್ನು ಅವನು ಹೆಚ್ಚು ಇಷ್ಟಪಡುತ್ತಿದ್ದ. ಆತನ ಗೆಳೆಯರು ಅವರವರ ಮನೆಯವರ ಪ್ರೇರೇಪಣೆಯಿಂದ ಆಗಾಗ ಬೇಟೆಯ ಸಾಹಸದಲ್ಲೂ ತೊಡಗಿದ್ದರು. ಸಿದ್ಧಾರ್ಥ ಯಾಕೋ ಅಂತಹ ಸಂದರ್ಭಗಳಲ್ಲಿ ಅವರಿಂದ ದೂರ ಸರಿಯುತ್ತಿದ್ದ. ಜೊತೆಗಾರರು ಈ ಕುರಿತು ಆತನನ್ನು ರೇಗಿಸುತ್ತಿದ್ದರು; ಕೀಟಲೆ ಮಾಡುತ್ತಿದ್ದರು. ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿಸುತ್ತಿದ್ದ ಆತನ ಸಾಕುತಾಯಿ ಗೌತಮಿ ಒಮ್ಮೆ ಸಿದ್ಧಾರ್ಥನ ಬಳಿ ಕುಳಿತು –)

**ಗೌತಮಿ :** ಸಿದ್ಧಾರ್ಥ, ನಿನಗೆ ಬೇಟೆಯಾಡಲು ಭಯವೇ ?... ಹೆದರಬಾರದು ಮಗು, ಮುಂದೆ ನೀನು ಯುದ್ಧ ಮಾಡಲು ಸಿದ್ಧನಾಗಬೇಕು. ಯುದ್ಧಕ್ಕೆ ಬೇಟೆಯೊಂದು ಸ್ಫೂರ್ತಿ; ಅದೊಂದು ಸಾಹಸ... ಬೇಟೆಯು ನಿನಗೆ ವೈರಿಯನ್ನು ಸದೆಬಡಿಯಲು ಒಳ್ಳೆಯ ಗುರಿ ಹಾಗೂ ಚಾಕಚಕ್ಯತೆಯನ್ನು ಕಲಿಸುತ್ತದೆ. ನಿನ್ನ ಗೆಳೆಯರೊಡನೆ ಹೋಗು ಮಗು.

**ಸಿದ್ಧಾರ್ಥ :** (ಸ್ವಲ್ಪ ನಿಧಾನಿಸಿ) ಅಮ್ಮಾ... ನನಗೆ ಅದೊಂದು ಹಿಂಸೆ ಎನಿಸುತ್ತದೆ. ಹಿಂಸೆಯಲ್ಲಿ ಯಾವ ಚಾಕಚಕ್ಯತೆ, ಸಾಹಸ, ಸಂತಸ !... ಅದಿರಲಿ, ನಾನೇಕೆ ಯುದ್ಧಕ್ಕೆ ಸಿದ್ಧನಾಗಬೇಕು ?... ಏತಕ್ಕಾಗಿ ಯುದ್ಧ ಮಾಡಬೇಕಮ್ಮಾ ?

**ಗೌತಮಿ :** (ನಕ್ಕು) ಅದು ನಿನ್ನ ಕರ್ತವ್ಯ... ರಾಜನ ಧರ್ಮ, ಸಿದ್ಧಾರ್ಥ.

**ಸಿದ್ಧಾರ್ಥ :** (ನೋವಿನ ದನಿಯಲ್ಲಿ) ಅಲ್ಲ ಅಮ್ಮಾ... ಒಬ್ಬ ಮನುಷ್ಯ ಇನ್ನೊಬ್ಬನನ್ನು ಕೊಲ್ಲುವುದು ಕರ್ತವ್ಯವೆ ? ಅದೂ ಧರ್ಮವೆ ? ಇದು ನನಗೆ ಸರಿಯಾಗಿ ಅರ್ಥವಾಗದು !

**ಗೌತಮಿ :** ಹೌದು ಮಗು. ಕೊಲ್ಲುವುದು ರಾಜರುಗಳ ಧರ್ಮ. ಅವರು ಯುದ್ಧ ಮಾಡದಿದ್ದರೆ ರಾಷ್ಟ್ರವನ್ನು ರಕ್ಷಿಸುವವರು ಯಾರು ? ಯೋಚಿಸು.

**ಸಿದ್ಧಾರ್ಥ :** (ಒಮ್ಮೆಗೇ ಗಹಗಹಿಸಿ ನಕ್ಕು... ಸಮಾಧಾನದಿಂದ) ಅಮ್ಮಾ ಇದು ತೀರಾ ಹಾಸ್ಯಾಸ್ಪದ. ಎಲ್ಲಾ ರಾಜರು ಪರಸ್ಪರ ನಿಸ್ವಾರ್ಥ ದಿಂದ ಪ್ರೀತಿಸುವುದಾದರೆ ಯಾವ ಹಿಂಸೆಯೂ ಇಲ್ಲದೆ ತಮ್ಮ ತಮ್ಮ ರಾಷ್ಟ್ರವನ್ನು ರಕ್ಷಿಸಲು ಸಾಧ್ಯವಾಗುವುದಿಲ್ಲವೆ ?... ಅಮಾಯಕರ ಸಾವು-ನೋವುಗಳಿಗೆ ಯುದ್ಧ ಕಾರಣವಲ್ಲವೆ ? ಅಮ್ಮಾ... ರಾಜ ತನ್ನ ರಾಜ್ಯದ ನೊಂದ ಜನರ ಸಂಕಟಗಳಿಗೆ ಸ್ಪಂದಿಸುವುದು ನಿಜವಾದ ಧರ್ಮವಲ್ಲವೆ ?

(ಗೌತಮಿ ಮೌನವಾಗಿ ಯೋಚಿಸತೊಡಗಿದಳು.)

**ಎರಡು**

(ತನ್ನ ಸತ್ಯಶೋಧನೆಗಳನ್ನು ಬೋಧಿಸುತ್ತ ಪ್ರೇಮಯಾತ್ರೆ ಹೊರಟಿದ್ದ ಬುದ್ಧ; ಒಮ್ಮೆ ತನ್ನ ಸಂಘದ ಸಂಗಾತಿಗಳೊಡನೆ ಕೇಶಪುತ್ತ ಪಟ್ಟಣದ ವನದಲ್ಲಿ ಉಳಿದಿದ್ದ. ಆ ಪಟ್ಟಣದ ನಿವಾಸಿ ಕಾಲಮನು ತಥಾಗತ ಬಂದಿರುವ ವಿಷಯ ತಿಳಿದು ಕೂಡಲೇ ಅಲ್ಲಿಗೆ ಓಡೋಡಿ ಬಂದ.

ಅದೇ ತಾನೇ ಮೊದಲಿಗೆ ಬುದ್ಧನನ್ನು ನೋಡಿದ ಆತನಿಗೆ ಬುದ್ಧನ ಮನಮೋಹಕ ರೂಪು ಬೆರಗಾಗಿಸಿತು; ಕಣ್ಣುಕಣ್ಣು ಬಿಡುತ್ತಾ ನಿಂತಿದ್ದ ಆತನನ್ನು ಬುದ್ಧ ತನ್ನ ಹತ್ತಿರ ಕರೆದ. ಬುದ್ಧನ ಮಾತಿನಲ್ಲಿ ಆತ್ಮೀಯತೆ ತುಂಬಿ ತುಳುಕುತ್ತಿತ್ತು. ಕಾಲವು ಯಾಂತ್ರಿಕವಾಗಿ ಸಮೀಪ ಬಂದು ಕುಳಿತ. ಬುದ್ಧ ಕೆಲಹೊತ್ತು ಆತನ ಯೋಗಕ್ಷೇಮ ವಿಚಾರಿಸಿದ. ಕ್ಷಣದಲ್ಲೇ ಅತ್ಯಂತ ಆಪ್ತನಾದ ಬುದ್ಧನ ಜೊತೆ, ತನಗಿರುವ ಗೊಂದಲಗಳನ್ನು ಹೇಗೆ ಹೇಳಬೇಕೆಂದೆ ಕಾಲಮ ಗೊಂದಲಕ್ಕೆ ಒಳಗಾದ. ಇದನ್ನು ಸೂಕ್ಷ್ಮವಾಗಿ ಗಮನಿಸಿದ ಬುದ್ಧ ನಸುನಕ್ಕು–)

**ಬುದ್ಧ :** ಪ್ರಿಯ ಕಾಲಮ, ಗೊಂದಲಕ್ಕೆ ಒಳಗಾಗದೆ ನಿನಗೆ ಏನನಿಸುತ್ತದೆ ಅದನ್ನು ಹಾಗೇ ಹೇಳು.

**ಕಾಲಮ :** (ತಡವರಿಸುತ್ತ) ಗುರುಗಳೇ... ಅದು... ಈ ಕೇಶಪುತ್ತಕ್ಕೆ ಅನೇಕ ಸನ್ಯಾಸಿಗಳು, ವಿರಕ್ತರು, ಜ್ಯೋತಿಷಿಗಳು ಬರುತ್ತಾರೆ. ಬಂದವರು ತಮ್ಮ ತಮ್ಮ ವಿಚಾರಗಳನ್ನು ನಮಗೆ ತಿಳಿಸಿ ಅನುಸರಿಸಲು ಹೇಳುತ್ತಾರೆ. ಆದರೆ ಹಾಗೆ ಬಂದವರು ತಮಗಿಂತ ಮೊದಲು ಬಂದಿದ್ದ ಸನ್ಯಾಸಿಯ ಬಗೆಗೆ ಜೋರಾಗಿ ನಕ್ಕು, ಅಪಹಾಸ್ಯ ಮಾಡಿ, ಕಟುವಾಗಿ ಟೀಕಿಸುತ್ತಾರೆ. ಅವರು ತಮ್ಮ ವಿಷಯವನ್ನು ಮಾತ್ರ ಯೋಗ್ಯವೆಂದು ತಿಳಿಸಿ ಅನುಸರಿಸಲು ಹೇಳುತ್ತಾರೆ. ನಮ್ಮ ಊರಿನ ಅನೇಕರಿಗೆ ಇದರಿಂದ ಯಾರದು ನಿಜ ? ಯಾರದು ಸುಳ್ಳು ? ಎಂದು ಪರಿಗಣಿಸಲಾಗದೆ ತಲೆ ಚಿಟ್ಟು ಹಿಡಿದಿದೆ... ಇವರಲ್ಲಿ ಯಾರ ಮಾತನ್ನು ನಂಬುವುದು... ನಮಗೆ ಗೊಂದಲವಾಗಿದೆ.

**ಬುದ್ಧ :** (ನಿಧಾನಕ್ಕೆ ನಗುವನ್ನು ಚೆಲ್ಲುತ್ತ, ಆತನತ್ತ ದೃಷ್ಟಿ ನೆಟ್ಟು) ಪ್ರಿಯ ಕಾಲಮ... ಕೇವಲ ನೀನು ಕೇಳಿರುವುದನ್ನೇ ನಂಬ ಬೇಡ. ಕೇವಲ ಒಬ್ಬರಿಂದ ಒಬ್ಬರಿಗೆ ಹೇಳಿಕೆಯಿಂದ ಬಂದುದನ್ನೇ ಸತ್ಯವೆಂದು ಪರಿಗಣಿಸಬೇಡ. ಧರ್ಮ ಗ್ರಂಥಗಳು ಪವಿತ್ರವಾದವು ಎಂಬ ಕಾರಣಕ್ಕೇ ಅವುಗಳನ್ನು ಒಪ್ಪಬೇಡ. ಆ ಕ್ಷಣದಲ್ಲಿ ನಿಜವೆಂದು ಕೆಲವು ಕಂಡರೂ ಅವು ನಿರಂತರವಲ್ಲ. ಹಾಗೆಯೇ ಯಾರೋ ಊಹಾತ್ಮಕವಾಗಿ ಹೇಳಿದುದನ್ನೇ ದಿಟವೆಂದು ಭ್ರಮಿಸಬೇಡ. ಸನ್ಯಾಸಿ, ಜ್ಯೋತಿಷಿ, ಗುರುವರ್ಯ ಯಾರೇ ಹೇಳಿದರೆಂಬ ಕಾರಣಕ್ಕೆ ನೀನು ಪ್ರಶ್ನಿಸದೆ, ಯೋಚಿಸದೆ ಅದು ನಿನಗೇ ಮನವರಿಕೆಯಾಗದೆ ಕುರುಡಾಗಿ ಅವನ್ನು ನಂಬಬೇಡ. ಗೆಳೆಯಾ... ಇನ್ನೂ ಹೇಳಬೇಕೆಂದರೆ ನಿನಗೆ ಸರಿ ಎನಿಸಿದ್ದು ಇನ್ನೊಬ್ಬರಿಗೆ ನಿರಂತರ ಶೋಷಣೆ ಅನಿಸುವುದಾದರೆ ಅದನ್ನು ಸಂಪೂರ್ಣವಾಗಿ ನಿರಾಕರಿಸು. ನಿನಗೇ ಮತ್ತು ನಿನ್ನ ಸುತ್ತಮುತ್ತಲವರಿಗೆ ಒಳಿತಾಗುವುದೆಂದು ಸಾಬೀತಾದರೆ ಅದೇ ಸತ್ಯ. ಅದನ್ನು ಅನುಸರಿಸು. ಅದನ್ನು ಇತರರಿಗೂ ಹೇಳು... (ಮತ್ತೆ ನಸುನಗುತ್ತಾ) ಮಿತ್ರ ಕಾಲಮ, ನಿನಗೆ ನೀನೇ ಗುರು, ನೀನೇ ಸನ್ಯಾಸಿ, ಜ್ಯೋತಿಷಿ ಎಲ್ಲಾ.

(ಬುದ್ಧನ ಕಣ್ಣಲ್ಲಿ ಕಣ್ಣಿಟ್ಟು ಇದನ್ನು ಕೇಳಿದ ಕಾಲಮನ ಕಣ್ಣುಗಳು ಹೊಳೆದುವು; ಆತನ ಮನಸ್ಸು ನಿರಾಳವಾಯಿತು.

ಬುದ್ಧ ಆತನಲ್ಲಾದ ಈ ಬದಲಾವಣೆ ಗಮನಿಸಿ ತಾನೂ ಇನ್ನಷ್ಟು ಸಂತಸಗೊಂಡ.)

## ಮೂರು

(ಪ್ರೇಮತತ್ತ್ವಗಳನ್ನು ಎಡೆಬಿಡದೆ ಚಿಂತಿಸಿ, ಬೋಧಿಸುತ್ತಿದ್ದ ಬುದ್ಧ ಗೆಳೆಯರೊಟ್ಟಿಗೆ ಹೀಗೇ ಒಮ್ಮೆ ಶ್ರಾವಸ್ತಿಯ ಜೇತವನದಲ್ಲಿ ತಂಗಿದ್ದ.

ಬೆಳಿಗ್ಗೆ ಕೆಂಬಣ್ಣದ ಸೂರ್ಯೋದಯವನ್ನ ಮುಗ್ಧವಾಗಿ, ತದೇಕಚಿತ್ತದಿಂದ ನೋಡಿ ಹರ್ಷಿತನಾದ.

ಆತ ಎಂದಿನಂತೆ ಭಿಕ್ಷೆಗೆ ಹೋಗಿದ್ದಾಗ ಊರಿನಲ್ಲಿ ಗುಸುಗುಸು ಪಿಸಪಿಸನೆ ಆತಂಕದಿಂದ ಮಾತನಾಡುತ್ತಿದ್ದ ಜನರನ್ನು ಗಮನಿಸಿದ.

ಏನೆಂದು ತಿಳಿಯುವ ತವಕದಲಿ ಕೆಲವರಿಂದ ಮಾಹಿತಿಯನ್ನು ಕೇಳಿದ.)

(ಜನರು : 'ಇಲ್ಲೊಬ್ಬ ನರಭಕ್ಷಕನಿದ್ದಾನೆ' 'ನಿರ್ದಯಿ' 'ಕೊಲೆಗಡುಕ' 'ಮನುಷ್ಯರ ಬೆರಳುಗಳನ್ನು ಕತ್ತರಿಸಿ ಮಾಲೆ ಮಾಡಿ ಹಾಕಿಕೊಳ್ಳುತ್ತಾನೆ' ಇತ್ಯಾದಿ ಇತ್ಯಾದಿಯಾಗಿ ಹೇಳಿದರು.)

**ಬುದ್ಧ :** (ಒಮ್ಮೆಗೇ) ಆತ ಎಲ್ಲಿರುವನು ಗೆಳೆಯರೆ ?

(ಭಯಗೊಂಡು ಮಾತೂ ಬಾರದ ಕೆಲವರು ತಮ್ಮ ತೋರು ಬೆರಳಿನಿಂದ ಆ ಕಾಡಿನತ್ತ ತೋರಿದರು.)

(ನಿರ್ಭೀತ ಬುದ್ಧ ಕೂಡಲೇ ಅತ್ತ ಚಲಿಸಿದ; ಸಮೃದ್ಧ ವೃಕ್ಷ ರಾಶಿಯ ನಡುವೆ 'ಬೆರಳುಗಳ ಮಾಲೆಯನ್ನು ಧರಿಸಿದವ'ನನ್ನು ಹುಡುಕತೊಡಗಿದ. ಆ ಕ್ಷಣ ಮಿಂಚಿನಂತೆ ಒರಟು ಮನುಷ್ಯ ನೊಬ್ಬ ಬುದ್ಧನತ್ತ ಬಿರುಸಿನಿಂದ ಧಾವಿಸುತ್ತಿದ್ದ: ಆತನ ಕೈಯಲ್ಲಿ ಬಲವಾದ, ಹರಿತವಾದ ಕತ್ತಿ, ಇನ್ನೊಂದು ಕೈಯಲ್ಲಿ ಯಾವುದೋ ಮಾರಕಾಸ್ತ್ರ ಆ ಒರಟು ವ್ಯಕ್ತಿಯ ಕಣ್ಣುಗಳಲ್ಲಿ ಕ್ರೌರ್ಯ ಮಿಂಚುತ್ತಿತ್ತು. ಬುದ್ಧನನ್ನು ತಡೆದ ಆತನೆ ಅಂಗುಲಿಮಾಲ.)

**ಅಂಗೂಲಿಮಾಲ :** (ಆರ್ಭಟಿಸಿ) ಯೇ ನಿಲ್ಲು ಯಾರು ನೀನು ? ಇಲ್ಲಿಗ್ಯಾಕೆ ಬಂದೆ ?

**ಬುದ್ಧ :** (ನಿರ್ಲಿಪ್ತನಾಗಿ) ಪ್ರಿಯ ಬಂಧು, ನಿನಗೋಸ್ಕರವೆ ಹುಡುಕುತ್ತ ಬಂದೆ.



(ಬುದ್ಧನ ಮಾತಿನ ಆಪ್ತತೆ ಆತನಿಗೆ ತನ್ನ ಚಿಕ್ಕಂದಿನಲ್ಲಿ ಕಳೆದುಕೊಂಡ ಅವ್ವನ ಪ್ರೇಮವನ್ನು ನೆನಪಿಸಿತು. ಅಷ್ಟು ಹೊತ್ತಿಗಾಗಲೇ ಧೈರ್ಯಶಾಲಿಗಳಾಗಿರುವ ಊರಿನ ಕೆಲವರು ಬುದ್ಧನಿಗೆ ಗೊತ್ತಾಗದಂತೆ ಹಿಂಬಾಲಿಸಿ ಬಂದು ಪೊದೆಗಳಲ್ಲಿ ಅವಿತು, ಇಣುಕಿ ಇಣುಕಿ ಏನಾಗಬಹುದೆಂದು ನೋಡತೊಡಗಿದ್ದರು. ದೂರದಿಂದ ಅವರಿಗೆ ಬುದ್ಧ ಹಾಗೂ ಅಂಗೂಲಿಮಾಲಾರ ಮಾತುಗಳು ಕೇಳಿಸಿಯೂ ಕೇಳಿಸದಂತಿತ್ತು. ಇಬ್ಬರೂ ಏನೇನು ಮಾತನಾಡಿದರೋ; ಒಂದಷ್ಟು ಸಮಯ ಹೀಗೇ ಸಾಗಿತು. ಈ ನೋಡುಗರಿಗೇ ನಿಬ್ಬೆರಗಾಗುವಂತೆ ಒಮ್ಮಿಂದೊಮ್ಮೆಗೇ ಅಂಗೂಲಿಮಾಲಾ ತನ್ನ ಕೈಯಲಿದ್ದುದನ್ನ ದೂರ ಎಸೆದ. ಅವು ಬಿದ್ದ 'ಢಣ್' 'ಢಣ್' ಶಬ್ದ ಕೇಳಿಸಿತು.)

(ನಂತರ ಬುದ್ಧನನ್ನ ಅಪ್ಪಿಕೊಂಡ. ಇದು ಸೋಜಿಗವೆನಿಸಿತು ! ಇಬ್ಬರೂ ಮಾತನಾಡುತ್ತ ಜೇತವನದತ್ತ ಬರತೊಡಗಿದರು. ಜನರೂ ಗುಂಪಾಗಿ ಪರಸ್ಪರ ಪಿಸುಗುಟ್ಟುತ್ತ ಇಬ್ಬರನ್ನು ಸಮೀಪಿಸಿದರು. ಆಗ ಬುದ್ಧನು ಎಲ್ಲರಿಗೂ ''ನಿಜಕ್ಕಿಂತಲೂ ಸುಳ್ಳು ಮತ್ತು ಊಹೆಯೇ ಹೆಚ್ಚು ಭಯ ಆತಂಕ ಮೂಡಿಸುತ್ತದೆ ಅಲ್ಲವೇ ?'' ಎಂದು ಹೇಳುತ್ತಾ – ಅದಕ್ಕೆ ಸಂಬಂಧಿಸಿದ ವಿಷಯವನ್ನು ಕುರಿತು ಜೋರುದನಿಯಲ್ಲಿ ಮಾತನಾಡುತ್ತಾ ಆ ಗುಂಪಿನೊಂದಿಗೆ ಸಾಗಿದ.

ಅಷ್ಟರಲ್ಲಾಗಲೇ ಬುದ್ಧ ಕಾಡಿನತ್ತ ಹೋದ ವಿಷಯ ತಿಳಿದ ರಾಜ ಪ್ರಸೇನಜಿತು ತನ್ನ ಸೈನ್ಯದೊಡನೆ ಬುದ್ಧನ ಗುಂಪನ್ನು ಸಮೀಪಿಸಿದ. ಕೂಡಲೇ ತನ್ನ ಆತಂಕ ವ್ಯಕ್ತಪಡಿಸಿದ. ತಥಾಗತನಿಗೆ ಏನೂ ಆಗದಿರುವುದನ್ನು ಕಂಡು ಸಮಾಧಾನಗೊಂಡ. ಗಾಬರಿ ಆತನನ್ನು ನೋಡಿದ ಯಾರಿಗೂ ಗೋಚರವಾಗುತ್ತಿತ್ತು.)

**ಬುದ್ಧ :** (ನೆಮ್ಮದಿಯಿಂದ) ಪ್ರಸೇನಜಿತು, ಈತನೇ ಅಂಗೂಲಿಮಾಲಾ. ಪಾಪ ನೊಂದವನು.

– ಎಂದು ಪಕ್ಕದಲ್ಲೇ ಇದ್ದ ಅಂಗೂಲಿಮಾಲಾನ ಬೆನ್ನನ್ನು ಸವರಿದ. ಆತ ನಾಚಿಕೆಯಿಂದ ತಲೆ ತಗ್ಗಿಸಿದ್ದ.

**ಪ್ರಸೇನಜಿತು :** (ಮತ್ತಷ್ಟು ಗಾಬರಿಯಿಂದ) ಅರೆ ! ಏನು ? ಅಂಗೂಲಿಮಾಲಾ ಈತನೇ ? ಹೌದೆ !... ತಥಾಗತ ನಿಮಗೆ ಏನಾದರೂ ಆಗಿದ್ದರೆ ಏನು ಗತಿ ? ಅದಕ್ಕೇ ನನ್ನ ಸೈನ್ಯದೊಡನೆ ಬಂದೆ... ಗುರುವೇ ಇದು ಹೇಗೆ ಸಾಧ್ಯ ? ನಿಜವೇ ?

(ಕರುಣಾಳು ಬುದ್ಧ ಹಸನ್ಮುಖಿಯಾಗಿ ಹೇಳಿದ) – ''ಗೆಳೆಯಾ, ಪ್ರೀತಿಯೊಂದಿದ್ದರೆ ಎಲ್ಲವೂ ಸಾಧ್ಯ !''

(ಪ್ರಸೇನಜಿತು, ಅಂಗೂಲಿಮಾಲಾ ಎಲ್ಲರೂ ಬುದ್ಧನ ಮಾತಿಗೆ ಆಕರ್ಷಿತರಾದರು.)

## ನಾಲ್ಕು

(ಬುದ್ಧದೇವನಿಗೆ ಸುತ್ತಾಟದ ಆನಂದದಲ್ಲಿ ಎಂಭತ್ತು ವರ್ಷಗಳು ತುಂಬಿಹೋಗಿತ್ತು. ಆತ ಪ್ರಕೃತಿಪ್ರೇಮಿ; ಆತನ ಸೌಂದರ್ಯಪ್ರಜ್ಞೆ ಅಪಾರವಾದುದು. ಅವನು ಪ್ರಕೃತಿಯ ನದಿ, ಚಿಗುರು, ಹೂವು, ಹಣ್ಣು, ಚಿಟ್ಟೆ, ಹಕ್ಕಿ ಹಾಗೂ ಬಗೆಬಗೆಯ ಅಸಂಖ್ಯ ಜೀವಿಗಳನ್ನು ಮುಗ್ಧವಾಗಿ ನೋಡುತ್ತಾ, ಅನುಭವಿಸುತ್ತ ಸಂತೃಪ್ತಗೊಳ್ಳುತ್ತಿದ್ದ; ಹಾಗೇ ಸಂಘದ ಒಡನಾಡಿಗಳಿಗೂ ಅವುಗಳ ಕುರಿತು ಆಸಕ್ತಿ ಹೆಚ್ಚಿಸಿದ್ದ.

ಕುಶಿನಾರದ ಪ್ರಶಾಂತ ವನದಲ್ಲಿ ಉಳಿದಿದ್ದ ಆತ ಈಗ ಬಹಳ ನಿತ್ರಾಣಗೊಂಡಿದ್ದ. ಚುಂದನ ಮನೆಯಲ್ಲಿ ಊಟ ಮಾಡಿದ ನಂತರ, ಆತನಿಗೆ ಅಜೀರ್ಣದಿಂದಾಗಿ ಭೇದಿ ಆಗತೊಡಗಿತ್ತು.

ತಾನು ಇನ್ನು ಹೆಚ್ಚು ಸಮಯ ಬದುಕಲಾರೆನೆಂದು ಆತನಿಗೇ ಗೊತ್ತಿತ್ತು. ಆಗತಾನೆ ಬಂದಿದ್ದ ಸುಬದ್ಧನಿಗೆ ತನ್ನ ಚಿಂತನೆಗಳನ್ನು ಸಂಕ್ಷಿಪ್ತವಾಗಿ ಹೇಳಿ ವಿಶ್ರಮಿಸಿಕೊಳ್ಳುತ್ತಿದ್ದ.

ಅಂದು ವೈಶಾಖದ ಬೆಳದಿಂಗಳ ರಾತ್ರಿ. ಪೂರ್ಣಚಂದ್ರ ತೆಳುಮೋಡದ ಪರದೆಯೊಳಗಿನಿಂದ ಬೆಳಕು ಚೆಲ್ಲುತ್ತಿದ್ದ. ಸಂಘದ ಗೆಳೆಯರು ದೂರದಲ್ಲಿ ಬಿಕ್ಕಳಿಸುತ್ತಿದ್ದರು. ಕೆಲವರು ಮರೆಯಲ್ಲಿ ಅಳುತ್ತಿದ್ದರು; ಅನೇಕರ ಕಣ್ಣಾಲಿಗಳು ತೇವಗೊಂಡಿದ್ದುವು. ಆನಂದನಿಗಂತೂ ಮಾತನಾಡಲು ಹೋದರೆ ಅಳುವೇ ಬರುತ್ತಿತ್ತು. 'ಇನ್ನು ಯಾರು ತಮಗೆ ದಿಕ್ಕು' ಎನ್ನುವ ಪ್ರಶ್ನೆ ಅವರೆಲ್ಲರ ಮುಂದಿತ್ತು. ಬುದ್ಧದೇವ ಪ್ರೀತಿಯಿಂದ ಮೆಲ್ಲನೆ ಎಲ್ಲರನ್ನೂ ತನ್ನ ಬಳಿ ಕರೆದ.)

**ಬುದ್ಧ :** (ಮೆದುವಾಗಿ) ಪ್ರಿಯ ಸ್ನೇಹಿತರೆ, ನೀವೆಲ್ಲರೂ ಊಟ ಮಾಡಿದಿರಾ ?... ಬನ್ನಿ ಹತ್ತಿರ... ಸಾವು ನನ್ನನ್ನು ಸಮೀಪಿಸುತ್ತಿದೆ... ಪುನರ್ಜನ್ಮವಿಲ್ಲದ ಕಾರಣ ಸತ್ತ ನಂತರ ನಾವು ಯಾರೂ ಮತ್ತೊಮ್ಮೆ ಎಂದಿಗೂ ಸಂಧಿಸ ಲಾರೆವು. ನಾನು ಅನೇಕ ಬಾರಿ ಹೇಳಿದಂತೆ ಸಾವು ಸ್ವಾಭಾವಿಕ... ನೀವು ಆತಂಕಪಡುವ ಅಗತ್ಯವಿಲ್ಲ, ನಾವೆಲ್ಲರೂ ಪರಸ್ಪರ ಆಲೋಚಿಸಿ ಆಚರಿಸಿದ ಚಿಂತನೆಗಳನ್ನು ಜನರಿಗೆ ತಿಳಿಸಿರಿ. ಹಿಂಸೆ ಹಾಗೂ ಒಣ ಆಡಂಬರವಿಲ್ಲದೆ ಮನುಷ್ಯ ತನ್ನ ಮೂಲಭೂತ ಅಗತ್ಯಗಳೊಟ್ಟಿಗೆ ಬದುಕಲು ಸಾಧ್ಯವಾಗಬೇಕು; ಜೀವನ ಪ್ರೀತಿ ಅತ್ಯಂತ ಮೌಲಿಕವಾದುದು. ಜನತೆಗೆ ದುರಾಸೆ ಕೆಟ್ಟದೆಂಬ ಅರಿವು ಬಂದರೆ ಸಾಕು ಎಷ್ಟೋ ಬದಲಾವಣೆ ಸಾಧ್ಯ... ಗೆಳೆಯರೆ, ನಾವು ಒಟ್ಟಾಗಿ ಚಿಂತಿಸಿ ಹರಡುತ್ತಿರುವ ಯಾವುದೇ ಅತಿರೇಕಗಳಿಲ್ಲದ 'ಮಧ್ಯಮ ಮಾರ್ಗ'ವನ್ನು ನೀವು ಇನ್ನಷ್ಟು ಮುಕ್ತವಾಗಿ ಚರ್ಚಿಸಿ, ಅದನ್ನು ವಿಸ್ತರಿಸಿ. ದೇವರು, ಆತ್ಮ, ಕರ್ಮಸಿದ್ಧಾಂತ ಇವುಗಳನ್ನು ಕುರಿತು ಸುಮ್ಮನೆ ಮಾತ ನಾಡುತ್ತ ಕಾಲಹರಣ ಮಾಡಬೇಡಿ. ನೀವು ಮಾಡಬೇಕಾದ ಕೆಲಸ ಬಹಳಷ್ಟಿದೆ... ಸಂಗಾತಿಗಳೇ... ನೀವೆಲ್ಲರೂ ಈವರೆಗೆ ಕಂಡ ಸತ್ಯಗಳನ್ನು ಸಂತಸದಿಂದ ಜನರತ್ತ ತಲುಪಿಸಿ... ಸಕಲರ ಏಳಿಗೆಗಾಗಿ ಮತ್ತು ಯಾವುದು ಅತ್ಯಂತ ಹಿತಕಾರಿಯೋ ಅಂತಹ ಕಡೆಗೇ ನಾವು ಸದಾ ಸಾಗುತ್ತಿರಬೇಕು... (ಸ್ವಲ್ಪ ಸುಧಾರಿಸಿಕೊಳ್ಳುತ್ತ) ಇನ್ನೂ ಏನಾದರೂ ಅನುಮಾನಗಳಿದ್ದರೆ, ಕೇಳಿ ಮಿತ್ರರೆ.

(ಎಲ್ಲರೂ ಮೌನವಾಗಿದ್ದರು; ಎಲ್ಲೆಲ್ಲೂ ನೀರವತೆ. ಬೆಳದಿಂಗಳು ಗಿಡಮರಗಳ ಎಲೆಗಳ ಮೇಲೆ ಬಿದ್ದು ಪ್ರತಿಫಲಿಸುತ್ತಿದ್ದ ಸೊಬಗನ್ನು ನೋಡುತ್ತ ಬುದ್ಧ ತಲ್ಲೀನನಾದ; ತಂಗಾಳಿಗೆ ಎಲೆಗಳು ತಲೆದೂಗಿದುವು.

ದುಃಖತಪ್ತ ಸಂಘದ ಸಂಗಾತಿಗಳಿಗೆ ತಥಾಗತನ ಮಾತಿನಿಂದ ಈಗ ದಿಕ್ಕು ತೋಚತೊಡಗಿತು. ಎಲ್ಲೆಲ್ಲೂ ಹಾಲು ಚೆಲ್ಲಿದಂತೆ ದಟ್ಟವಾಗಿದ್ದ ಆ ತುಂಬು ಬೆಳದಿಂಗಳಲ್ಲಿ ಅವರೆಲ್ಲರಿಗೂ 'ಮಧ್ಯಮ ಮಾರ್ಗ'ದ ಆಳ ಅಗಲಗಳು ಇನ್ನಷ್ಟು ಸ್ಪಷ್ಟವಾಗತೊಡಗಿದುವು.)

**ಮಲ್ಲಿಗಹಳ್ಳಿ ನರೇಂದ್ರಕುಮಾರ್**

ಅಧ್ಯಾಪಕ, ಡಾ॥ ಬಿ. ಆರ್. ಅಂಬೇಡ್ಕರ್ ಸಂಶೋಧನ ಹಾಗೂ ವಿಸ್ತರಣ ಕೇಂದ್ರ, ಮಾನಸಗಂಗೋತ್ರಿ, ಮೈಸೂರು

# ಮುಷ್ಕರಗಳು ಪ್ರಜಾಪ್ರಭುತ್ವಕ್ಕೆ ಪೋಷಕವಾಗಿರುತ್ತವೆ

**ಬಿಜು ಲಾಂಫಿನೋಸ್**
(ಪ್ರಾಧ್ಯಾಪಕ, ಯೂನಿವರ್ಸಿಟಿ ಕಾಲೇಜು,
ತಿರುವನಂತಪುರ)

**ಸ್ವಾ**ತಂತ್ರ್ಯದ ಹಕ್ಕುಗಳು ಪ್ರಜಾಸತ್ತಾತ್ಮಕ ರಾಜ್ಯವೊಂದರ ಆಧಾರ ಸ್ತಂಭಗಳು. ಈ ಸ್ತಂಭಗಳು ಬಲಗುಂದಿದರೆ ಪ್ರಜಾಸತ್ತಾತ್ಮಕ ಮೌಲ್ಯಗಳು ಕುಸಿಯುತ್ತವೆ. ಪ್ರಜಾಸತ್ತಾತ್ಮಕ ಮೌಲ್ಯಗಳು ಒಂದು ರೀತಿಯಲ್ಲಿ ಸ್ಥಿತ್ಯಂತರ ಸ್ಥಿತಿ ತಲಪುತ್ತವೆ.

ಇಂದು ತೃತೀಯ ಜಗತ್ತಿನ ದೇಶಗಳು ಈ ರೀತಿ ಸ್ಥಿತ್ಯಂತರ ಸ್ಥಿತಿಯಲ್ಲಿವೆ. ವಸಾಹತು ಆಡಳಿತದಿಂದ ಮುಕ್ತಗೊಂಡು ಸ್ವತಂತ್ರಗೊಳ್ಳಲು ನಡೆಸಿದ ಹೋರಾಟದಲ್ಲಿ ಅವು ಒಂದು ಹೊಸ ಸಾಮಾಜಿಕ ವ್ಯವಸ್ಥೆಯ ಕನಸು ಕಂಡಿದ್ದವು. ಏಷ್ಯ, ಆಫ್ರಿಕ, ಲ್ಯಾಟಿನ್ ಅಮೆರಿಕ ಖಂಡಗಳಲ್ಲಿರುವ ಈ ದೇಶಗಳು ಕಳೆದ ಶತಮಾನದ ಮಧ್ಯ ಭಾಗದಲ್ಲಿ ನಶಿಸುತ್ತಿದ್ದ ಸಾಮಾಜಿಕ ವ್ಯವಸ್ಥೆಯನ್ನು ಪುನಶ್ಚೈತನಗೊಳಿಸಲು ಪ್ರಜಾಪ್ರಭುತ್ವವನ್ನು ಒಂದು ವಿಧಾನವನ್ನಾಗಿ ಅಂಗೀಕರಿಸಿದವು. ಎಲ್ಲ ಪ್ರಜೆಗಳಿಗೂ ಸಮಾನತೆ, ಭ್ರಾತೃತ್ವ ಹಾಗೂ ಆತ್ಮಗೌರವ ಒದಗಿಸುವುದು ಈ ಪುನಶ್ಚೇತನ್ಯಗೊಳಿಸುವ ಕ್ರಮಗಳಲ್ಲಿ ಕೆಲವಾಗಿದ್ದವು. ಪ್ರಜೆಗಳ ಹಾಗೂ ರಾಜ್ಯದ ಹಕ್ಕುಗಳನ್ನೂ ಕರ್ತವ್ಯಗಳನ್ನೂ ಪಾಲಿಸುವುದು ಈ ನಿಟ್ಟಿನಲ್ಲಿ ಅತ್ಯಂತ ಮುಖ್ಯ ಕ್ರಮವಾಗಿದ್ದಿತು. ಇದನ್ನು ಈ ದೇಶಗಳು ತಮ್ಮ ದೇಶದ ಸಂವಿಧಾನದಲ್ಲೂ ವಿಶೇಷ ಒತ್ತಿನೊಂದಿಗೆ ಒಡಮೂಡಿಸಿವೆ.

ಇಂದು, ಇನ್ನೂ ಪ್ರಜಾಸತ್ತಾತ್ಮಕತೆಯ ಹರೆಯದ ಸ್ಥಿತಿಯಲ್ಲಿರುವ ಈ ಹೊಸ ಗಣತಂತ್ರಗಳು ಪ್ರಜಾಪ್ರಭುತ್ವದ ಒಳಸಾರವನ್ನು ಉಳಿಸಿಕೊಂಡು ಬರಲೇ ಹೆಣಗಾಡುತ್ತಿರುವ ಸ್ಥಿತಿಯಲ್ಲಿವೆ. ಕೈಗಾರಿಕೋನ್ನತಿ, ಆರ್ಥಿಕ ರಾಷ್ಟ್ರೀಯತೆ, ಸಾಮಾಜಿಕ ಜವಾಬ್ದಾರಿ, ವ್ಯಕ್ತಿ-ಸಮಾಜ ನಡುವಿನ ಸಂಬಂಧಗಳು – ಇವುಗಳಿಗೆ ಸಂಬಂಧಿಸಿ ಈ ದೇಶಗಳಲ್ಲಿ ಗ್ರಹಿಕೆಗಳು ಕಳೆದ ಎರಡು ದಶಕಗಳಲ್ಲಿ ಅಸಂಖ್ಯಾತ ಬದಲಾವಣೆಗಳನ್ನು ಕಂಡಿವೆ. ಇವೇ ಆ ದೇಶಗಳಲ್ಲಿನ ಪರಿಸ್ಥಿತಿ ಹದಗೆಡುವುದಕ್ಕೆ ಕಾರಣವಾಗಿವೆ ಎಂದೂ ಹೇಳಬಹುದು.

ಇಂದು ತೃತೀಯ ಜಗತ್ತಿನ ದೇಶಗಳಲ್ಲಿ ಹಿಂದುಳಿದಿರುವಿಕೆಯ ಸ್ಥಿತಿಯು ರಾಜ್ಯವು ಪ್ರಜೆಗಳಿಗೆ ನೀಡಿರುವ ಸ್ವಾತಂತ್ರ್ಯದ ಮಟ್ಟಗಳಿಗೆ ಅನುಗುಣವಾಗಿದೆ ಎಂದು ಹೇಳುವುದು ಒಂದು ಫ್ಯಾಷನ್ ಆಗಿಬಿಟ್ಟಿದೆ. ಈ ದೇಶಗಳಲ್ಲಿ ತಾಂತ್ರಿಕ ಬೆಳವಣಿಗೆಯು ಸಾಕಷ್ಟು ಆಗದಿರುವುದಕ್ಕೆ ಜನರಿಗೆ ತುಂಬ ಉನ್ನತಮಟ್ಟದ ಸ್ವಾತಂತ್ರ್ಯ ನೀಡಿರುವುದೇ ಕಾರಣ ಎಂದು ತಪ್ಪಾಗಿ ವ್ಯಾಖ್ಯಾನಿಸಲಾಗುತ್ತಿದೆ. ಸರಕಾರಕ್ಕೂ ಜನರಿಗೂ ನಡುವೆ ಅನೇಕಾನೇಕ ಘರ್ಷಣೆಗಳು ಉಂಟಾಗುತ್ತಿರುವುದು ಇಂತಹ ಭಾವನೆಗೆ ಎಡೆಮಾಡಿಕೊಟ್ಟಿದೆ. ಸರಕಾರವೂ ಜನರೂ ಎರಡು ವಿಭಿನ್ನ ಘಟಕಗಳಲ್ಲ ಎಂದು ಹೇಳುವ ಪ್ರಜಾಪ್ರಭುತ್ವ ಕುರಿತ ಸುಪ್ರಸಿದ್ಧ ವ್ಯಾಖ್ಯಾನವನ್ನು ಕಾಲಕ್ರಮೇಣ ಮರೆತು ನೈತಿಕ ವಿರೂಪತೆ ಹಾಗೂ ಘರ್ಷಣೆಗಳನ್ನು ಮುಂದೆ ತರಲಾಗುತ್ತಿದೆ. ಇಂದು ಈ ದೇಶಗಳಲ್ಲಿ ಅನೇಕ ವೇಳೆ ಸರಕಾರಗಳು ಹಿಂದಿನ ರಾಜಪ್ರಭುತ್ವದ ಅಥವಾ ವಸಾಹತು ಆಡಳಿತದ ಪ್ರತಿರೂಪಗಳಾಗಿ ಕಾಣಿಸಿಕೊಳ್ಳತೊಡಗಿವೆ. ಇದರಿಂದಾಗಿ ಈ ಸರಕಾರಗಳು ತಮ್ಮ ಸ್ವಂತ ಜನರಿಗೇ ವಿರುದ್ಧವಾಗಿ ಎದ್ದುನಿಂತಿವೆ. ಸರಕಾರೀ ಹೇಳಿಕೆಗಳಲ್ಲಿ ಜನರ ಅಭೀಪ್ಸೆಗಳು ವ್ಯಕ್ತವಾಗುತ್ತಿಲ್ಲವಾದ ಕಾರಣ ಜನರ ಕಡೆಯಿಂದ, ವಿಶೇಷವಾಗಿ ಜನತೆಯ ತಿರುಳಾದ ಕಾರ್ಮಿಕ ವರ್ಗದಿಂದ, ಗಹನವಾದ ಘರ್ಷಣೆಗಳು ಜರುಗುತ್ತಿವೆ. ಸರಕಾರವು 'ಬೆಳವಣಿಗೆ'ಗೆ ಸಂಬಂಧಿಸಿ ಏನೇ ಹೇಳಿಕೆ ನೀಡಿದರೂ ಜನರು ಅದನ್ನು ಅಪನಂಬಿಕೆಯಿಂದ ನೋಡುವುದು ಸಾಮಾನ್ಯವಾಗಿಬಿಟ್ಟಿದೆ.

ನಿಜ, ಅಲ್ಪವಿಕಸಿತ ದೇಶಗಳಲ್ಲಿ ಬೆಳವಣಿಗೆ ಚಟುವಟಿಕೆಗಳ ಕುರಿತು ವಿಶೇಷ ಕಾಳಜಿ ಹೆಚ್ಚುತ್ತಿದೆ. ಸಂಪನ್ಮೂಲಗಳ ಅಸಮರ್ಪಕ ಬಳಕೆಯಾಗುತ್ತಿರುವ ಹಾಗೂ ಪ್ರತಿಫಲದ ವಿತರಣೆ ಸರಿ ಇಲ್ಲದಿರುವ ಪರಿಸ್ಥಿತಿಗಳಲ್ಲಿ ಈ ದೇಶಗಳು ತಮ್ಮ ಆರ್ಥಿಕ ಚೌಕಟ್ಟನ್ನು ನಿರ್ಮಿಸಿಕೊಳ್ಳಬೇಕಾಗಿರುವುದು ಇದಕ್ಕೆ ಕಾರಣವಾಗಿರಬಹುದು. ಇದೂ ಅಲ್ಲದೆ ದೇಶದ ಯೋಜನೆ ಹಾಗೂ ಕಾರ್ಯಕ್ರಮ ನಿರ್ಮಾಣದಲ್ಲಿ ವಿದೇಶಿ ಸಂಸ್ಥೆಗಳು ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿರುವುದನ್ನು ಜನ ಕಾಣುತ್ತಿದ್ದಾರೆ. ಈ ವಿದೇಶೀ ಸಂಸ್ಥೆಗಳ ಪಾತ್ರ ಹಾಗೂ ಅದಕ್ಕೆ ಆಸ್ಪದ ನೀಡಿರುವ ಸ್ಥಳೀಯ ಸರಕಾರಗಳ ನಿಜವಾದ ಉದ್ದೇಶಗಳ ಬಗೆಗೆ ಜನರಲ್ಲಿ ಸಂಶಯ ತೀವ್ರಗೊಂಡಿದೆ. ರಾಜ್ಯದ ಬೆಳವಣಿಗೆಗೆ ಸಂಬಂಧಿಸಿ ಇಂತಹ ಅಹಿತ ಮಾರ್ಗಗಳನ್ನು ಬಳಸಿಕೊಳ್ಳುತ್ತಿರುವುದು ಜನರ ಹಾಗೂ ಸರಕಾರಗಳ ಮಧ್ಯೆ ಘರ್ಷಣೆ ಉಲ್ಬಣಗೊಳ್ಳುವಂತೆ ಮಾಡಿದೆ. ಸರಕಾರದ ಈ ನೂತನ ಮಾರ್ಗಗಳು ಪ್ರಜಾಪ್ರಭುತ್ವ ತತ್ವಕ್ಕೆ ವಿರೋಧಿಗಳಾಗಿವೆ. ಏಕೆಂದರೆ ಅವು ಕೆಲವೇ ಜನರ, ನವ ಉದಾರವಾದ ಪ್ರತಿಪಾದಕರ, ಹಿತಗಳಿಗೆ ಉತ್ತೇಜಕವಾದವಾಗಿವೆ. ಇದರಿಂದ ಜನ ಪೇಚಿಗೊಳಗಾಗಿದ್ದಾರೆ. ವಿದೇಶಗಳ ಮೇಲೆ ಹೆಚ್ಚು ಅವಲಂಬನೆ ಮತ್ತು ಅವುಗಳಿಂದ ಸಂಪನ್ಮೂಲಗಳ ಕಬಳಿಕೆಗಳು ಹೊಸದಾಗಿ ಸ್ವತಂತ್ರಗೊಂಡ ದೇಶಗಳನ್ನು ಘರ್ಷಣೆಯ ಕೆಸರಿನಲ್ಲಿ ಸಿಕ್ಕಿಹಾಕಿಸಿವೆ. ಈ ದೇಶಗಳಲ್ಲಿ ಜನರ ನಡುವೆ ಪ್ರತಿಯೊಬ್ಬರೂ ಇನ್ನೊಬ್ಬರನ್ನು ಅಪರಾಧಿ ಎಂದು ದೂಷಿಸತೊಡಗಿದ್ದಾರೆ, ನಿಜವಾದ ಸಮಸ್ಯೆಗಳ ಮೇಲೆ ಗಮನ ಕೇಂದ್ರೀಕರಿಸಲು ವಿಫಲರಾಗಿದ್ದಾರೆ.

ಇವೆಲ್ಲ ದೇಶವು ಒಂದು ಸಾಮಾಜಿಕ ವ್ಯವಸ್ಥೆಯಿಂದ ಮತ್ತೊಂದಕ್ಕೆ ಪರಿವರ್ತನೆಯಾಗಿರುವುದರ ಪರಿಣಾಮ ಎನ್ನಬಹುದು. ಇದರಿಂದ ಒಂದು ಸಂದೇಶವನ್ನೂ ಗ್ರಹಿಸಬಹುದು. ಪ್ರಜಾಪ್ರಭುತ್ವವು ಆತ್ಮವಿಕಾಸಕ್ಕೂ ವಿಮೋಚನೆಗೂ ವೇದಿಕೆ ಒದಗಿಸುತ್ತದೆ. ಅಲ್ಪವಿಕಸಿತ ದೇಶಗಳಲ್ಲಿ ಒಮ್ಮೆ ಬಂಧನಕ್ಕೊಳಗಾಗಿದ್ದ ಜನರೀಗ ಬೌದ್ಧಿಕವಾಗಿಯೂ ಭೌತಿಕವಾಗಿಯೂ ವಿಮೋಚನೆಗೊಂಡಿದ್ದಾರೆ. ಸಮಾಜದ ಉತ್ತಮೀಕರಣದಲ್ಲಿ ತಮ್ಮ ಪಾತ್ರದ ಬಗೆಗೆ ಚಿಂತಿಸಗೊಡಗಿದ್ದಾರೆ. ಹಿಂದೆ ಅವರು ಜ್ಞಾನ ವಿಕಸನದ ಅವಕಾಶದಿಂದ ವಂಚಿತರಾಗಿದ್ದರು. ಈಗ ಪ್ರಜಾಪ್ರಭುತ್ವವು ಅವರನ್ನು ಚಿಂತಿಸುವಂತೆ, ವಿಶ್ಲೇಷಿಸುವಂತೆ ಹಾಗೂ ಪ್ರಶ್ನಿಸುವಂತೆ ಮಾಡಿದೆ. ಬಡತನದ ಬಗೆಗೆ



ಅದು ಅವರಿಗೆ ಸ್ಪಷ್ಟ ನಿರೂಪಣೆ ಒದಗಿಸಿದೆ. ನೈಸರ್ಗಿಕ ಹಾಗೂ ಇತರ ಆರ್ಜಿತ ಸಂಪತ್ತಿನ ಅಸಮಾನ ವಿತರಣೆ ಬಡತನಕ್ಕೆ ಕಾರಣವೆಂದು ಅವರೀಗ ಅರಿತಿದ್ದಾರೆ. ಹೀಗೆ ಪ್ರಜಾಪ್ರಭುತ್ವವು ಈ ದೇಶಗಳಲ್ಲಿ ಒಂದು ರೀತಿಯ ಸಾಮಾಜಿಕ- ರಾಜಕೀಯ ಕ್ರಾಂತಿಗೆ ದಾರಿ ಮಾಡಿಕೊಟ್ಟಿದೆ.

ಒಂದು ಕಡೆ ಪ್ರಜಾಪ್ರಭುತ್ವವು ಜನರನ್ನು ಮೇಲ್ಮಟ್ಟಕ್ಕೊಯ್ಯುತ್ತಿರುವಾಗಲೇ ಇನ್ನೊಂದು ಕಡೆ ಆರ್ಥಿಕ ರಾಷ್ಟ್ರೀಯತಾವಾದವೂ ಅವರಿಗೆ ಬೆಂಬಲವಾಗಿ ನಿಂತಿತು. ಆರ್ಥಿಕ ಚಟುವಟಿಕೆಗಳ ಮೂಲಕ ಸಾಮಾಜಿಕ ನೀತಿ ಹಾಗೂ ವ್ಯಕ್ತಿ ವಿಕಸನಗಳನ್ನು ಒತ್ತಿಹೇಳುವ ಹೊಸ ಸಾಮಾಜಿಕ ವ್ಯವಸ್ಥೆಯನ್ನು ಅನುಷ್ಠಾನಕ್ಕೆ ತರುವುದು ಅದರ ಮುಖ್ಯ ಗುರಿಯಾಗಿದ್ದಿತು. ಆದರೆ ದ್ವಿತೀಯ ಜಾಗತಿಕ ಯುದ್ಧಾನಂತರದ ಕಾಲದಲ್ಲಿ ವಿಕಸಿತ ಹಾಗೂ ಅವಿಕಸಿತ ದೇಶಗಳ ನಡುವೆ ಯಂತ್ರತಾಂತ್ರಿಕತೆಯ ಅಂತರ ಹೆಚ್ಚಿತು. ಅವಿಕಸಿತ ದೇಶಗಳು ಪರೋಕ್ಷವಾಗಿ ಪಶ್ಚಿಮ ಯುರೋಪಿನ ದೇಶಗಳ ಮಾರ್ಗ ದರ್ಶನದ ಕೆಳಗೆ ಬರತೊಡಗಿದವು. ಅವುಗಳಲ್ಲಿ ಬಂಡವಾಳ ಹೊಂದಿದ ಉದ್ಯಮಿಗಳು ರಾಷ್ಟ್ರೀಯ ಯೋಜನೆಯಲ್ಲೂ ಕಾರ್ಯಕ್ರಮ ರೂಪಣೆಯಲ್ಲೂ ಪ್ರಧಾನಪಾತ್ರ ವಹಿಸತೊಡಗಿದರು. ಅವರು ಲಾಭವನ್ನೇ ಗುರಿಯನ್ನಾಗುಳ್ಳ ಪುನರ್ ನಿರ್ಮಾಣದ ಹೊಸ ಮಂತ್ರವನ್ನು ಪಠಿಸ ತೊಡಗಿದರು. ಇದು ಜನರ ಮಧ್ಯೆ ಗಹನವಾದ ಸಂದೇಹ ಮೂಡಿಸಿತು. ಅವರು ಸಾಮಾಜಿಕ ಪರಿವರ್ತನೆಯ ಪ್ರಜಾಸತ್ತಾತ್ಮಕ ಕಾರ್ಯಕ್ರಮ ವೊಂದರ ಬಗೆಗೆ ಚಿಂತಿಸತೊಡಗಿದರು.

> ನವ ಉದಾರತಾವಾದಿಗಳ ಪ್ರಜಾಪ್ರಭುತ್ವ ವಿರೋಧೀ ಪ್ರಚಾರವು ಅಲ್ಪ ವಿಕಸಿತ ದೇಶಗಳ ಮಧ್ಯಮ ವರ್ಗದ ಜನರ ಮಧ್ಯೆ ಸುಲಭವಾಗಿ ಪ್ರಚುರಗೊಳ್ಳುತ್ತಿದೆ. ಆರ್ಥಿಕ ರಾಷ್ಟ್ರೀಯತೆ ಮುರಿದುಬೀಳುವುದರಿಂದ ತಮ್ಮ ಅಂತಸ್ತು ಎಲ್ಲಿ ಕುಗ್ಗಿಹೋಗುತ್ತದೋ ಎಂದು ಇಂದಿನ ಸಮಾಜದ ನಿರ್ಧಾರಕ ಅಂಶಗಳಾದ ಮಧ್ಯಮ ವರ್ಗದವರು ಅಂಜತೊಡಗಿದ್ದಾರೆ.

ಭಾರತದಲ್ಲಿ ಇಂಥ ಭೀತಿಗೆ ಚಾರಿತ್ರಿಕವಾದ ಕಾರಣಗಳೂ ಇವೆ. ಜಾಮೊರಿನ್‌ರ ಕಾಲದಿಂದ ಹಿಡಿದು ಚಕ್ರವರ್ತಿ ಜಹಂಗೀರನವರೆಗೆ ಘಟನೆಗಳು ದೇಶವು ಕ್ರಮೇಣ ಪಾಶ್ಚಿಮಾತ್ಯರ ಗುಲಾಮಗಿರಿಗೆ ಒಳಗಾದುದನ್ನು ಎತ್ತಿ ತೋರಿಸುತ್ತವೆ. ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಈ ಪ್ರಕ್ರಿಯೆ ಪರಾಕಾಷ್ಠೆ ತಲುಪಿತು. ವಿದೇಶೀ ಶೋಷಣೆ ಹಾಗೂ ಸಂಕೋಲೆಗಳಿಂದ ಮುಕ್ತಗೊಂಡು ಇಂದಿನ ಸಾರ್ವಭೌಮ ಸ್ಥಿತಿ ಸಾಧಿಸಲು ಭಾರತಕ್ಕೆ ಸುಮಾರು ತೊಂಬತ್ತು ವರ್ಷಗಳೇ (ಕ್ರಿ. ಶ. ೧೮೫೭ರಿಂದ ಎಣಿಸಿದಂತೆ) ಬೇಕಾದವು. ಈ ಘಟ್ಟದಲ್ಲಿ ದೇಶದ ಬೆಳವಣಿಗೆಗೆ ಶೋಷಣೆ ಹಾಗೂ ಸಂಪನ್ಮೂಲಗಳ ಕುಗ್ಗಿಕೆಗಳೇ ಮುಖ್ಯ ಅಡಚಣೆಗಳೆಂದು ಭಾವಿಸಲಾಗಿದ್ದಿತು. ಇದರ ಜೊತೆಗೆ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಗಳು ರಾಜ್ಯದ ಆಧುನೀಕರಣಕ್ಕೆ ದೊಡ್ಡ ತೊಡಕಾಗಿದ್ದವು. ರಾಜಪ್ರಭುತ್ವ ಹಾಗೂ ವಸಾಹತು ಆಳ್ವಿಕೆಗಳ ದೀರ್ಘ ಕಾಲಾವಧಿಯಲ್ಲಿ ದೇಶದಲ್ಲಿ ವ್ಯಾಪಿಸಿದ್ದ ಅಸಮಾನತೆಯ ಕೆಡುಕನ್ನು ತೊಡೆದುಹಾಕಲು ಪ್ರಜಾಪ್ರಭುತ್ವದ ಮಾರ್ಗವೊಂದೇ ಅನುಷ್ಠಾನಯೋಗ್ಯವೆಂದು ನಾವು ತೀರ್ಮಾನಕ್ಕೆ ಬಂದೆವು.

ದೀರ್ಘಕಾಲ ಇರುವಂಥ ಕಲ್ಯಾಣ ರಾಜ್ಯ ಸ್ಥಾಪನೆಗೆ ಸ್ವಾತಂತ್ರ್ಯದ ಹಕ್ಕುಗಳನ್ನು ಆಧಾರಸ್ತಂಭಗಳನ್ನಾಗುಳ್ಳ ಪ್ರಜಾಪ್ರಭುತ್ವವೊಂದೇ ಮೂಲಭೂತ ಸಾಧನವೆಂಬುದು ಪ್ರತಿಯೊಬ್ಬ ಭಾರತೀಯನ ಹೃನ್ಮನಗಳಲ್ಲಿ ಬೇರುಬಿಟ್ಟಿತು. ನಮ್ಮ ಪೂರ್ವಜರ ದೃಷ್ಟಿಯಲ್ಲಿ ಹಕ್ಕುಗಳು ಹಾಗೂ ಕರ್ತವ್ಯಗಳು ಎಂದರೆ ಆರ್ಥಿಕ ವಿಭಜನೆ ಹಾಗೂ ಸಾಮಾಜಿಕ ವ್ಯತ್ಯಾಸಗಳಿದ್ದರೂ ಎಲ್ಲ ಪ್ರಜೆಗಳಿಗೂ ಸಮಾನ ಅವಕಾಶ ಸೃಷ್ಟಿಸಿ ಕೊಡುವ ರಾಜ್ಯಸ್ಥಾಪನೆ ಎಂದೇ ಆಗಿದ್ದಿತು.

ಆದರೆ ಈಗ ವಿಶ್ವ ವಾಣಿಜ್ಯೀಕರಣ ಭಾವನೆಯ ಉಗಮದೊಂದಿಗೆ ಒಮ್ಮೆ ಉದಾತ್ತವೆಂದೂ ಅತ್ಯವಶ್ಯವೆಂದೂ ಭಾವಿಸಲಾಗಿದ್ದ ಅನೇಕ ಮೌಲ್ಯಗಳು ಕಣ್ಮರೆ ಯಾಗತೊಡಗಿವೆ. ಆಧುನಿಕ ವ್ಯಾಪಾರಗಾರರಿಗೆ ಅನುಕೂಲವಾಗುವಂತೆ ರೂಪಿಸಿದ ನವ ಉದಾರತಾವಾದಿ ಸಿದ್ಧಾಂತವು ಈ ಬದಲಾವಣೆಗೆ ಮೂಲ ಕಾರಣವಾಗಿದೆ. ಈ ಸಿದ್ಧಾಂತವು ರಾಜ್ಯ ಬಂಡವಾಳವು ಖಾಸಗಿ ಉದ್ಯಮಿಗಳ ಕೈಗಳಿಗೆ ಸವುರಾಗಿ ವರ್ಗ ವಾಗುವುದಕ್ಕೆ ಪ್ರಯೋಜನಕಾರಿಯಾಗುವಂಥ ಹೊಸ ನೀತಿ ನಿಯಮಗಳನ್ನು ಸೃಷ್ಟಿಸಿತು. ವಿದ್ಯಾಭ್ಯಾಸ, ಆರೋಗ್ಯ ಹಾಗೂ ಸಾಮಾಜಿಕ ಸುಭದ್ರತೆಗಳು ಮೂಲಾಧಾರವಾದ ಕಲ್ಯಾಣ ರಾಜ್ಯದ ಪ್ರತಿಯೊಂದು ಅಂಶಗಳ ವಿರುದ್ಧವೂ ಅದು ಯುದ್ಧ ಘೋಷಿಸಿತು. ದೇಶದಲ್ಲಿ ಕೈಗಾರಿಕಾ ಪ್ರಗತಿ ನಿಧಾನವಾಗಿರುವುದಕ್ಕೆ ಅದು ಹೊಸ ಕಾರಣಗಳನ್ನು ನೀಡಿತು. ರಾಜ್ಯವು ಹೆಚ್ಚು ಉತ್ತಮ ಸಮಾಜವಾಗಿ ಪರಿವರ್ತನೆಯಾಗುವುದು ನಿಧಾನ ವಾಗುತ್ತಿರುವುದಕ್ಕೆ ನಿಜವಾದ ಕಾರಣ ಕೈಗಾರಿಕಾ ಪ್ರಗತಿಯೂ ಹಣಕಾಸು ಬೆಳವಣಿಗೆಯೂ ನಿಧಾನವಾಗಿರುವುದು ಎಂದು ಅದು ವಾದಿಸಿತು. ಅದರ ಪ್ರಕಾರ ಉನ್ನತ ಮಟ್ಟದ ಹಣದ ಮುಕ್ತ ಹರಿವು ಹಾಗೂ ಉದ್ಯಮಿಗಳ ವೈಯಕ್ತಿಕ ಸಾಮರ್ಥ್ಯ ಗಳಷ್ಟೇ ಪ್ರಬಲವಾದ ರಾಜ್ಯ ಹಾಗೂ ಪ್ರಬಲವಾದ ಸಮಾಜವನ್ನು ಸೃಷ್ಟಿಸಬಲ್ಲವು. ಹಣಕಾಸಿನ ಪುನಶ್ಚೇತನವಾಗುವುದಕ್ಕೆ ಬಂಡವಾಳದ ಹರಿವಿಗೆ ಹೆಚ್ಚು ಸ್ವಾತಂತ್ರ್ಯ ಒದಗಿಸಬೇಕು ಎಂಬುದು ಅವರ ಹೊಸ ಮಂತ್ರವಾಗಿದೆ. ಸಾಮಾಜಿಕ ಆವಶ್ಯಕತೆ ಎಷ್ಟೇ ಇರಲಿ ಬಿಡಲಿ, ಪ್ರತಿಫಲ ನೀಡದ ಅಂಶಗಳ ಮೇಲೆ ಖರ್ಚು ಮಾಡುವುದನ್ನೂ ಅವರು ತಿರಸ್ಕರಿಸುತ್ತಾರೆ. ಹಣಕಾಸಿನ ಹರಿವನ್ನೂ ಬೆಳವಣಿಗೆಯ ಗುರಿಯನ್ನೂ ಸಾಧಿಸಲು ಈ ನವ ಉದಾರತಾವಾದಿಗಳು ಪರಿಣಾಮಕಾರಿ ಧನವ್ಯಯ ಹಾಗೂ ವ್ಯಕ್ತಿ ವಿಕಸನದ ವಿಚಾರಗಳನ್ನು ಮುಂದಿಡುತ್ತಾರೆ. ಎಲ್ಲ ಸಾಮೂಹಿಕ ಚಳುವಳಿಗಳನ್ನೂ ಅವರು ಅನಪೇಕ್ಷವೆಂದು, ಉತ್ಪಾದಕ ಸಮಯದ ವ್ಯರ್ಥವೆಂದು, ಅಲ್ಲಗಳೆಯುತ್ತಾರೆ.

ಅಲ್ಪ ವಿಕಸಿತ ದೇಶಗಳಲ್ಲಿ ವೈಯಕ್ತಿಕ ಉದ್ಯಮಿಗಳಿಗೆ ಅಡೆತಡೆ ಇಲ್ಲದ ಸ್ವಾತಂತ್ರ್ಯ ನೀಡುವುದರಿಂದಷ್ಟೆ ಕೈಗಾರಿಕಾ ಬೆಳವಣಿಗೆ ಸಾಧ್ಯವೆಂದು ಅವರು ಭಾವಿಸುತ್ತಾರೆ. ಅಲ್ಪ ವಿಕಸಿತ ದೇಶಗಳಲ್ಲಿ ಪ್ರಜೆಗಳ ನಾಗರಿಕ ಹಕ್ಕು ಗಳಿಗೆ ಮಿತಿಮೀರಿದ ಗಮನ ನೀಡುತ್ತಿರುವುದೇ ಅವುಗಳ ಹಿಂದುಳಿದಿರುವಿಕೆಗೆ ಕಾರಣವೆಂದು ನವ ಉದಾರತಾವಾದಿಗಳು ಪ್ರತಿಪಾದಿಸುತ್ತಾರೆ. ಜನಸಮೂಹಗಳು ಅನುಭವಿಸುತ್ತಿರುವ ಹಕ್ಕುಗಳು ಉದ್ಯಮಿಗಳ ಹಾಗೂ ವೃತ್ತಿಪರರ ಸ್ವತಂತ್ರ ಚಟುವಟಿಕೆಗಳಿಗೆ ತಡೆಗಳಾಗಿವೆ, ಆದ್ದರಿಂದ, ನವ ಉದಾರತಾವಾದವನ್ನು ಜಾರಿಗೆ ತರಲು ಅನುಸರಿಸಬೇಕಾದ ಮುಖ್ಯ ಕಾರ್ಯ ಭಾರವೆಂದರೆ ಜನಸಮೂಹಗಳ ಹಕ್ಕುಗಳನ್ನು ಮೊಟಕುಗೊಳಿಸುವುದು ಎಂದವರು ವಾದಿಸುತ್ತಾರೆ. ಇದಕ್ಕಾಗಿ ಅವರು ನಾನಾ ಅಂತಾರಾಷ್ಟ್ರೀಯ ವೇದಿಕೆಗಳನ್ನು ಪ್ರಚಾರಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ, ಉದಾರವಾದಿ, ವಾಮಪಕ್ಷದ ಸಮವಸ್ತ್ರ ವೇಷತೊಟ್ಟು ಜನ ಸಮೂಹಗಳ ಸ್ವಾತಂತ್ರ್ಯದ ಹಕ್ಕುಗಳನ್ನು ಹತ್ತಿಕ್ಕುವಂತೆ ಸರಕಾರಗಳನ್ನು ಒತ್ತಾಯಿಸುತ್ತಿದ್ದಾರೆ.

ದ್ವಿತೀಯಕ ಆರ್ಥಿಕ ವಿಭಾಗ ವಿಕಾಸಗೊಳ್ಳುತ್ತಿರುವ ದೇಶಗಳಲ್ಲಿ ಕಾರ್ಮಿಕರು ಉದ್ಯಮಿಗಳ ಸ್ವತಂತ್ರ ಸ್ವಾರ್ಥಸಾಧಕ ಕಾರ್ಯನಿರ್ವಹಣೆಗೆ ದೊಡ್ಡ ಸವಾಲಾಗಿದ್ದಾರೆ. ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹಾಗೂ ಅಧಿಕ ವೇತನಗಳಿಗಾಗಿ ನಡೆಸುತ್ತಿರುವ ಐಕ್ಯ ಚಳವಳಿಗಳನ್ನು ಉದ್ಯಮಿಗಳು ಎದುರಿಸಬೇಕಾಗಿದೆ. ಈ ದೇಶಗಳಲ್ಲಿ ಭವಿಷ್ಯತ್ತಿನಲ್ಲಿ ಜರುಗಲಿರುವ ಕಾರ್ಮಿಕ ಕ್ಷೋಭೆಗಳು ಎಷ್ಟು ತೀಕ್ಷ್ಣ ವಾಗಿರಬಲ್ಲವು ಎಂಬುದು ಆ ದೇಶಗಳಲ್ಲಿ ಚಾಲ್ತಿಯಲ್ಲಿರುವ ಪ್ರಜಾಸತ್ತಾತ್ಮಕ ಹಕ್ಕುಗಳ ಮಟ್ಟವನ್ನು ಅವಲಂಬಿಸಲಿರುವುದು. ಈ ಹಕ್ಕುಗಳ ಅರಿವು ಹೆಚ್ಚಾದಷ್ಟೂ ಕಾರ್ಮಿಕರ ಐಕ್ಯತೆ ಹೆಚ್ಚಲಿರುವುದು ಮತ್ತು ಸಾಮಾಜಿಕ ಪರಿವರ್ತನೆಗೆ ಅನುಕೂಲಕರವಾದ ಬದಲಾವಣೆಗಳು ಹೆಚ್ಚಲಿರುವುವು. ಮುಷ್ಕರಗಳು, ಇಂದು ಇರುವಂತೆ, ಮುಂದೆಯೂ ಎಲ್ಲ ರೀತಿಯ ಮರ್ದನಗಳ ವಿರುದ್ಧವೂ ಸಾಮಾನ್ಯ ಸಾಮೂಹಿಕ ಅಭಿವ್ಯಕ್ತಿಯ ರೂಪ ತಳೆಯುವುವು. ಅವು ಮಾಲೀಕರ ಅಮಾನುಷ ಕ್ರಿಯೆಗಳ ವಿರುದ್ಧ ಕೋಪ, ಕ್ರೋಧಗಳನ್ನು ಉಕ್ಕಿಸುವುವು ಮತ್ತು ಸಭ್ಯ ಜೀವನ ನಡೆಸಲು ಅವಕಾಶಗಳನ್ನು ತೆರೆಯುವುವು. ಬೇರೆ ಮಾತುಗಳಲ್ಲಿ ಮುಷ್ಕರಗಳು ಭವಿಷ್ಯತ್ತಿನಲ್ಲೂ ಸಾಮೂಹಿಕ ಆಗ್ರಹಗಳ ಮೂಲಕ ಜನರಿಗೆ ಅನುಕೂಲವಾಗುವಂಥ ಸಕಾಲಿಕ ಬದಲಾವಣೆಗಳನ್ನು ತರುವ ವೇದಿಕೆಯಾಗಲಿರುವುವು. ಆದರೆ ಬಂಡವಾಳದ ಸ್ವತಂತ್ರ ಹರಿವನ್ನು ಪ್ರತಿಪಾದಿಸು ವವರು ಮುಷ್ಕರಗಳ ಬಲವನ್ನು ಕಂಡು ಅಂಜುತ್ತಾರೆ, ಜನರ ಹಾಗೂ



ಈ ಮಳೆಗಾಲದಲ್ಲಿ ಹಾರ್ನ್ ಮಾಡೋದೇ ಬೇಕಾಗಿಲ್ಲ... ಜನರೇ ದಾರಿ ಬಿಡ್ತಾರೆ ಅಲ್ವಾ?

ರಾಷ್ಟ್ರಗಳ (ನಾಲ್ಕನೆಯ ಜಗತ್ತು ಎಂಬ ಸಿದ್ಧಾಂತದಲ್ಲಿ ವರ್ಣಿಸಲಾಗದಂಥ ರಾಷ್ಟ್ರಗಳ) ನಡುವೆ ತೆರೆಯಲಿರುವ ಸಂವಾದವನ್ನು – ನಮ್ಮ ಸಾಮಾಜಿಕ ಒಡಕುಗಳ ಪ್ರತ್ಯೇಕತೆಗಳೊಳಗೆ ಮುಚ್ಚಿಹೋಗಿರುವಂಥ ಸಂವಾದವನ್ನು – ಕಂಡು ಅಂಜುತ್ತಾರೆ.

ಮುಷ್ಕರಗಳು ಪ್ರಜಾಪ್ರಭುತ್ವ ವಿಕಸನದ ವಿವಿಧ ಘಟ್ಟಗಳ ಸೂಚಕಗಳು. ಅವು ಸುಸಂಘಟಿತ ಯೂನಿಯನ್‌ಗಳ ಕೆಳಗೆ ಸಾಮೂಹಿಕ ಚರ್ಚೆ ಕೊಡುಕೊಳ್ಳುವಿಕೆ ಹಾಗೂ ಒಪ್ಪಂದಗಳ ಮೂಲಕ ಜನರನ್ನು ಬೆಳವಣಿಗೆಯ ಒಂದು ಹೊಸ ಮಜಲಿನತ್ತ ಕರೆದೊಯ್ಯುವುವು. ಆದರೆ ಉದ್ಯಮಿಗಳ ದೃಷ್ಟಿಯಲ್ಲಿ ಮುಷ್ಕರಗಳು ಅವರ ಆದಾಯ ಲಾಭಗಳ ಮೇಲೆ ಋಣಾತ್ಮಕ ಪ್ರಭಾವ ಬೀರುತ್ತವೆ. ಮುಷ್ಕರಗಳ ಬಂಡವಾಳದ ಮುಕ್ತ ಹರಿವಿಗೆ ಹಾಗೂ ಉದ್ಯಮಕ್ಕೆ ಪ್ರತಿಕೂಲವಾಗಿರುತ್ತವೆಂದು ಅವರು ಭಾವಿಸುತ್ತಾರೆ. ಮುಷ್ಕರಕ್ಕೆ ಅಂಜಿ ಬಂಡವಾಳಗಾರ ಕೈಕಟ್ಟಿ ಕುಳಿತುಕೊಂಡಿರಲಾರ. ಸ್ಥಗಿತಗೊಂಡ ಬಂಡವಾಳದಿಂದ ಅವನಿಗೆ ವರಮಾನ ಹುಟ್ಟದು. ಆದ್ದರಿಂದ ಯಾವುದೇ ಮಟ್ಟದ ಸಾಮೂಹಿಕ ಚರ್ಚೆ ಒಪ್ಪಂದಗಳಿಗೂ ಮಿತಿ ಹಾಕುವುದು ಬಂಡವಾಳಗಾರರಿಗೆ ಅನುಕೂಲಕರ. ಇದಕ್ಕೆ ಸಹಕಾರಿಯಾಗಿ ಹಾಗೂ ಸಾಮೂಹಿಕ ಒಡಂಬಡಿಕೆಯ ಶಕ್ತಿಗಳನ್ನು ನಿರ್ವೀರ್ಯಗೊಳಿಸಲು ನವ ಉದಾರತಾವಾದಿಗಳು 'ಬೆಳವಣಿಗೆಗಾಗಿ ಸ್ಪರ್ಧೆ' ಎಂಬ ಒಂದು ಹೊಸ ಮಂತ್ರವನ್ನು ಉಚ್ಚರಿಸತೊಡಗಿದ್ದಾರೆ. ಅವರು ಈ ಹೊಸ ಮಂತ್ರಕ್ಕೆ ನೈಸರ್ಗಿಕ ಸ್ಪರ್ಧೆಯಲ್ಲಿ ಹೆಚ್ಚು ಶಕ್ತಿಯುತವಾದ ಹಾಗೂ ಸುಲಭವಾಗಿ ಹೊಂದಿಕೊಳ್ಳುವ ಜೀವಿಗಳಷ್ಟೆ ನಶಿಸಿಹೋಗದೆ ಉಳಿಯಬಲ್ಲವು ಎಂಬ ಡಾರ್ವಿನ್ನನ ಸೂತ್ರವನ್ನು ಆಧಾರವಾಗಿ ಬಳಸಿಕೊಳ್ಳಲು ಹೊರಟಿದ್ದಾರೆ. ಹಾಗಾಗಿ ಮಾರುಕಟ್ಟೆಯಲ್ಲಿ ಉಳಿವಿಗಾಗಿ ಸ್ಪರ್ಧೆಯು ಸಮಾಜದ ಸಾರಸತ್ವ ಎಂದವರು ಉದ್ಘರಿಸುತ್ತಾರೆ. ಮಾರುಕಟ್ಟೆಯಲ್ಲಿ ಗೆದ್ದವ ಉಳಿಯುತ್ತಾನೆ. ಅದರ ಪರಿಣಾಮವೇ ಬೆಳವಣಿಗೆ. ಆದರೆ ಈ ಬೆಳವಣಿಗೆ ಹೆಚ್ಚು ವ್ಯಕ್ತಿಗತ ಅಷ್ಟೆ. ಇಂತಹ ನವ ಉದಾರತಾವಾದಿಗಳ 'ಮೊದಲು ಉಳಿಯುವುದು ಅನಂತರ ಬೆಳೆಯುವುದು' ಎಂಬ ಸೂತ್ರವು ವ್ಯೂಹಾತ್ಮಕವಾಗಿ ಕಾರ್ಮಿಕರ ವಿರುದ್ಧ ನಿರ್ದೇಶಿತವಾದುದು. ತಮ್ಮ ಉಳಿಕೆಗೂ ಬಂಡವಾಳವೇ ಮುಖ್ಯ, ಈ ಬಂಡವಾಳವನ್ನು ಕರುಣೆಯಿಂದ ಕೊಡುವವರು ಬಂಡವಾಳಗಾರರೇ, ಎಂದು ಕಾರ್ಮಿಕರು ನಂಬುವಂತೆ ನವ ಉದಾರತಾವಾದಿಗಳು ಒತ್ತಾಯಿಸುತ್ತಿದ್ದಾರೆ.

ಆದರೆ ಪ್ರಗತಿಯನ್ನು ಯಾವುದೇ ಸಿಹಿ ಸೂತ್ರಗಳ ಮೂಲಕ ಸಾಧಿಸಲಾಗದು. ಅದಕ್ಕೆ ನಿರ್ದಿಷ್ಟ ಒಪ್ಪಂದ ಅವಶ್ಯ. ಬಂಡವಾಳವನ್ನು ಎರಡು ಕಡೆಯವರೂ ಇಡಿಯಾಗಿ ಯೋಜಿಸಿ ಅಳವಡಿಸಿದರಷ್ಟೆ ಪ್ರಗತಿ ಸಾಧ್ಯ. ಇದನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುತ್ತ ನವ ಉದಾರತಾವಾದಿಗಳು ಸಮಾಜದಲ್ಲಿನ ಸಾರ್ವಜನಿಕ ವಿಭಾಗದ ಉದ್ಯಮಗಳು ಇಲ್ಲವಾಗಬೇಕೆಂದು ವಾದಿಸುತ್ತಾರೆ. ಇದಕ್ಕಾಗಿ ಅವರು ಸಾರ್ವಜನಿಕ ವಿಭಾಗದಲ್ಲಿ ಉದ್ಯಮಗಳ ವಿರುದ್ಧ ಸಾಮೂಹಿಕ ಪ್ರಚಾರ ಪ್ರಾರಂಭಿಸಿದ್ದಾರೆ. ಈ ಉದ್ಯಮಗಳು ಅಸಮರ್ಥವಾದವು, ಆರ್ಥಿಕವಾಗಿ ಅನುತ್ಪಾದಕವಾದವು, ರಾಜ್ಯ ತೊಡಗಿಸಿದ ಬಂಡವಾಳಕ್ಕೆ ಇವು ಎಷ್ಟು ಮಾತ್ರವೂ ಜವಾಬ್ದಾರಿಯುತವಾಗಿಲ್ಲ ಎಂದೆಲ್ಲ ಅವರು ಬಣ್ಣಿಸತೊಡಗಿದ್ದಾರೆ. ಅನೇಕ ಪ್ರಸಂಗಗಳಲ್ಲಿ ಈ ಪ್ರಚಾರ ಅರೆಸತ್ಯವಷ್ಟೆ ಆಗಿರುತ್ತದೆ. ಆದರೆ ಅದು ಎರಡಲಗಿನ ಕತ್ತಿಯಂತೆ ಕಾರ್ಯ ನಿರ್ವಹಿಸುತ್ತದೆ. ಸರಕಾರೀ ಹಾಗೂ ಸಾರ್ವಜನಿಕ ಉದ್ಯಮಗಳನ್ನು ಒಂದು ಕಡೆ, ಅವುಗಳಿಗೆ ಆಧಾರವಾದ ನೈತಿಕತೆಯನ್ನು ಇನ್ನೊಂದು ಕಡೆ ನಾಶಗೊಳಿಸುತ್ತದೆ. ದೀರ್ಘಕಾಲದ ವಸಾಹತು ಆಡಳಿತ, ತಡವಾಗಿ ಕೈಗಾರಿಕೀಕರಣದ ಪ್ರಾರಂಭ, ಇವುಗಳ ಪರಿಣಾಮವಾಗಿ ರಾಜ್ಯದ ಅಂತಶ್ಶಕ್ತಿ ಕುಗ್ಗಿ ದೇಶದಲ್ಲಿ ಕೈಗಾರಿಕೋನ್ನತಿಯೂ ಸಾಮಾಜಿಕ ಪರಿವರ್ತನೆಗಳೂ ತೀರ ನಿಧಾನಗತಿಯಲ್ಲಿ ಜರುಗುತ್ತಿವೆ. ನವ ಉದಾರತಾವಾದಿಗಳು ಇದನ್ನು ಎತ್ತಿ ತೋರಿಸುತ್ತಾ ತಮ್ಮ ''ಸ್ಪರ್ಧೆ, ಅದರ ಪರಿಣಾಮವಾಗಿ ಪ್ರಗತಿ'' ಎಂಬ ಸಿದ್ಧಾಂತಕ್ಕೆ ಅದನ್ನು ಪ್ರಚಾರ ಸಾಧನವನ್ನಾಗಿ ಬಳಸಿಕೊಳ್ಳುತ್ತಿದ್ದಾರೆ.

ಇವರ ಈ ಪ್ರಜಾಪ್ರಭುತ್ವ ವಿರೋಧಿ ಪ್ರಚಾರವು ಅಲ್ಪವಿಕಸಿತ ದೇಶಗಳ ಮಧ್ಯಮ ವರ್ಗದ ಜನರ ಮಧ್ಯೆ ಸುಲಭವಾಗಿ ಬೆಂಬಲ ಗಳಿಸುತ್ತಿದೆ. ಆರ್ಥಿಕ ರಾಷ್ಟ್ರೀಯತೆ ಮುರಿದು ಬೀಳುವುದರಿಂದ ತಮ್ಮ ಅಂತಸ್ತು ಎಲ್ಲಿ ಕುಗ್ಗಿಹೋಗುತ್ತದೋ ಎಂದು ಇಂದಿನ ಸಮಾಜದ ನಿರ್ಧಾರಕ ಅಂಶಗಳಾದ ಮಧ್ಯಮ ವರ್ಗದವರು ಅಂಜ ತೊಡಗಿದ್ದಾರೆ. ಹಾಗಾಗಿ ಅವರು ನವ-ಬಲಪಂಥವಾದಿ ಸೂತ್ರಗಳತ್ತ ಹೊರಳ ತೊಡಗಿದ್ದಾರೆ, ತಮ್ಮ ಪರಮಾವಧಿ ಹಿತಗಳಿಗೇ ಹೆಚ್ಚಿನ ಒತ್ತು ನೀಡುತ್ತಿದ್ದಾರೆ. ಹೀಗೆ ಕಲ್ಯಾಣ ರಾಜ್ಯದ ವಿಸ್ತರಣೆಯಿಂದ ತುಂಬ ಲಾಭ ಪಡೆದವರೇ ಸಾಮುದಾಯಿಕ ಚಳವಳಿಗಳ ಮೂಲಕ ಸಾಮಾಜಿಕ ಬೆಳವಣಿಗೆ ಉಂಟುಮಾಡುವುದಕ್ಕೆ ಎದುರು ನಿಂತಿದ್ದಾರೆ. ತನ್ಮೂಲಕ ಮಧ್ಯಮ ವರ್ಗವು ಪ್ರಜಾಪ್ರಭುತ್ವದ ತಿರುಳಿಗೇ ದ್ರೋಹ ಬಗೆಯತೊಡಗಿದೆ. ಇದಕ್ಕೂ ಹೆಚ್ಚಿನ ದುಃಖದ ಸಂಗತಿ ಎಂದರೆ, ಭಾರತದಂಥ, ದೇಶದಲ್ಲಿ ಮಧ್ಯಮ ವರ್ಗದ ಜನರೇ ಕಾರ್ಮಿಕ ಚಳವಳಿಗಳ ಹಾಗೂ ಸುಸಂಘಟಿತ ಮುಷ್ಕರಗಳ ಅತ್ಯಂತ ಕಟು ವಿಮರ್ಶಕರಾಗಿ ಹೊರಹೊಮ್ಮಿದ್ದಾರೆ.

ಇಂದು ನವ ಬಲಪಂಥವಾದದ ಆಶ್ರಯದಲ್ಲಿ ಮೇಲಿನ ಶಕ್ತಿಗಳು ದೇಶದಾದ್ಯಂತ ಕಾರ್ಮಿಕ ಬಲವನ್ನು ಬಗ್ಗುಬಡಿಯಲು ಒಂದುಗೂಡುತ್ತಿವೆ. ಬೆಳವಣಿಗೆ ಕೆಳಮಟ್ಟದಲ್ಲಿ ರುವುದಕ್ಕೆ ಮುಷ್ಕರಗಳು ಹಾಗೂ ಎಲ್ಲ ರೀತಿಯ ಪ್ರತಿಭಟನೆಗಳೇ ಕಾರಣ ಎಂದು ನಂಬುವಂತೆ ಮಾಡಲು ಸತ್ಯಸಂಗತಿಗಳನ್ನು ವಿಕೃತಗೊಳಿಸಿ ಅವರು ವಿಶಾಲ ವೇದಿಕೆಗಳ ಮೇಲಿನಿಂದ ಪ್ರಚಾರ ಮಾಡುತ್ತಿದ್ದಾರೆ. ಮುಷ್ಕರಗಳು ಪಾತಕ ಪಿತೂರಿಗಳು ಎಂದು ಕರೆಯುವ ಅವರ ಪ್ರಚಾರ ಸಾಧನೆಗಳೂ ಸುಭದ್ರ ಭಾರತದ ಬಗೆಗೆ ನಾವು ಹೊಂದಿರುವ ಉದಾತ್ತ ಸೂತ್ರಗಳನ್ನೆಲ್ಲ ಗಾಳಿಗೆ ತೂರುತ್ತಿವೆ. ಜನ ಸಮುದಾಯಗಳ ನಡುವೆ ಸಾಮೂಹಿಕ ಮಾತುಕತೆಗಳ ಮೂಲಕ ಎತ್ತಿಹಿಡಿದ ಮೌಲ್ಯಗಳನ್ನೂ ಉತ್ತಮ ಬಾಳುವೆಯ ನಿಯಮಗಳನ್ನೂ ಅವು ನಿಷ್ಕ್ರಿಯಗೊಳಿಸುತ್ತಿವೆ, ನಿಸ್ಸತ್ವಗೊಳಿಸುತ್ತಿವೆ. ಇಡೀ ಜನ ಸಮುದಾಯದ ಬಗೆಗೆ ಕಾಳಜಿ ಎಲ್ಲರೊಂದಿಗೆ ಹಂಚಿಕೊಳ್ಳುವ ಸದ್ಭಾವನೆ ಹಾಗೂ ಸಮಾನತೆಯೊಂದಿಗೆ ಬೆಳವಣಿಗೆಯಂಥ ಉದಾತ್ತ ಭಾವನೆಗಳನ್ನು ಈ ರೀತಿ ನಿರರ್ಥಕಗೊಳಿಸಲಾಗುತ್ತಿದೆ. ಕಾರ್ಮಿಕನೊಬ್ಬ ತನ್ನ ಕೆಲಸದ ಬಗೆಗೆ ಅಥವಾ ಕಾರ್ಯ ಪರಿಸರದ ಬಗೆಗೆ ಏನೂ ಹೇಳಬೇಕಾದುದಿಲ್ಲ, ನಮ್ಮ ಸಂವಿಧಾನ ಗೊತ್ತು ಪಡಿಸಿರುವ ಮೂಲಭೂತ ಹಕ್ಕುಗಳನ್ನೂ ಅವನು ಅನುಭವಿಸಬೇಕಾದುದಿಲ್ಲ, ಎಂಬಂಥ ನವ ಉದಾರತಾವಾದಿ ಹೇಳಿಕೆಗಳು ಸಮಾಚಾರ ಮಾಧ್ಯಮಗಳಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳತೊಡಗಿವೆ. ಪ್ರಜಾಪ್ರಭುತ್ವದ ಅಸ್ತ್ರವೆನಿಸಿಕೊಂಡ ನ್ಯಾಯಾಂಗವೂ ನವ ಬಲಪಂಥವಾದಿ ವಿಚಾರಗಳಿಗೆ ಅನುಗುಣವಾದಂಥ ಭಾವನೆಗಳನ್ನು ವ್ಯಕ್ತಪಡಿಸತೊಡಗಿದೆ. ನೈಜ ಸಮಸ್ಯೆಗಳಿಗೆ ಸಂಬಂಧಿಸಿ ನಡೆಸುವ ಮುಷ್ಕರಗಳನ್ನೂ ಪ್ರತಿಭಟನೆಗಳನ್ನೂ ಟೀಕಿಸುವ ನ್ಯಾಯಾಂಗ ತೀರ್ಮಾನಗಳು ಕಾರ್ಮಿಕ ಶಕ್ತಿಯೂ ಹಣಕಾಸು ಬಂಡವಾಳದಷ್ಟೇ ಮುಖ್ಯ ಮತ್ತೆ ಅದಕ್ಕೆ ಸರಿಸಮಾನ ಎಂಬ ತಿಳಿವಳಿಕೆಯನ್ನು ಮಂದಗೊಳಿಸುತ್ತವೆ. ಇದರಿಂದ ದೇಶದ ಜನಸಮುದಾಯದ ಬಹುಭಾಗವಾದ ಕಾರ್ಮಿಕ ವರ್ಗವನ್ನು ಅಧೀನಶಕ್ತಿಯನ್ನಾಗಿಸುವ ಹಳೆಯ ಪರಿಸ್ಥಿತಿಯನ್ನೇ ಮತ್ತೆ ತರುವಂತಾಗುತ್ತದೆ. ಇಂಥ ಅಧೀನತೆಯು ಪ್ರಜಾಪ್ರಭುತ್ವವನ್ನೂ ಆಚರಣೆಗೆ ತರಲು ನಾವು ಯಾವ ವ್ಯವಸ್ಥೆಯ ವಿರುದ್ಧ ಹೋರಾಡಿದೆವೋ ಆ ಹತ್ತೊಂಬತ್ತನೆಯ ಶತಮಾನದ ವ್ಯವಸ್ಥೆಯನ್ನೇ ಪುನಶ್ಚೇತನಗೊಳಿಸುತ್ತದಷ್ಟೆ.

ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್
ನಂ. ೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್,
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮



# ಚೌತಿ ಚಂದ್ರನ ವಿಶೇಷ

ವಿನಾಯಕ ಚೌತಿಯಂದು ಚಂದ್ರನನ್ನು ನೋಡ ಬಾರದಂತೆ. ಇದು ತಲೆತಲಾಂತರದಿಂದ ಬಂದಿರುವ ರೂಢಿಯಂತೆ. ಅದೇನೇ ಆದರೂ ಈ ಬಾರಿ ಚೌತಿಯ ಚಂದ್ರ ಒದಗಿಸಲಿರುವ ದೃಶ್ಯ ಅದ್ಭುತವಾದದ್ದು; ನೋಡಲೇಬೇಕಾದದ್ದು. ಕ್ಯಾಮರಾ ಇದ್ದವರು ಚಿತ್ರೀಕರಿಸಲೂ ಪ್ರಯತ್ನಿಸ ಬಹುದಾದಂತಹುದು. ಪಶ್ಚಿಮದತ್ತ ದೃಷ್ಟಿ ಹಾಯಿಸಿದರೆ ಸಾಕು, ತೆಳ್ಳನೆಯ ಗೆರೆಯಂತಹ ಮುಗುಳ್ನಗುವ ಚಂದ್ರ, ಅದರ ಕೆಳಗೆ ಬೆಳ್ಳಿ (ಶುಕ್ರಗ್ರಹ); ಇನ್ನೂ ಸ್ವಲ್ಪ ಕೆಳಕ್ಕೆ ಗುರು ಗ್ರಹ. ಗಮನಿಸಿ ನೋಡಿದಿರಾದರೆ ಬೆಳ್ಳಿಯ ಕೆಳಗೆ ಚಿತ್ರಾ ನಕ್ಷತ್ರವೂ ಕಾಣುವುದು. ಈ ಪುಟ್ಟ ಗುಂಪು ದುರ್ಬೀನಿನ ವ್ಯಾಪ್ತಿಯೊಳಗೇ ನಿಲುಕಲಿದೆ. ಆದ್ದರಿಂದ ಚಿಕ್ಕ ದೂರದರ್ಶಕ ಅಥವಾ ದುರ್ಬೀನು ಬಳಸಿ ಚಿತ್ರ ತೆಗೆದರೆ ನಾಲ್ಕೂ ಆಕಾಶಕಾಯಗಳು ಮೂಡುವುವು.

ಚಂದ್ರನನ್ನು ನೋಡುವುದರಿಂದ ಉಂಟಾಗುವ ''ದೋಷ''ಕ್ಕೆ ಪರಿಹಾರವೂ ಇದೆಯಲ್ಲವೇ? ಬಿದಿಗೆಯ ಚಂದ್ರನನ್ನು ಮೊದಲೇ ನೋಡಿದ್ದರಾಯಿತು. ೫ರಂದು ಸಂಜೆ ಚಂದ್ರನನ್ನು ಹುಡುಕಿ. ಚಂದ್ರ ಕಾಣುತ್ತದೆಯೋ ಇಲ್ಲವೋ, ಖಚಿತವಾಗಿ ಹೇಳಲು ಬಾರದು. ಆದರೆ ಶುಕ್ರ, ಗುರು ಮತ್ತು ಚಿತ್ರಾ ನಕ್ಷತ್ರಗಳ ಪುಟ್ಟ ತ್ರಿಕೋಣವಂತೂ ಸುಂದರವಾಗಿ ಕಾಣುತ್ತದೆ. ದಿಗಂತದ ಅಂಚಿನಲ್ಲಿ ತೆಳ್ಳನೆಯ ಗೆರೆಯಂತೆ ರೇಖಾ ಚಂದ್ರ ಇರುತ್ತದೆ. ಗುರುತಿಸಲು 'ಚಂದ್ರಶಾಖಾನ್ಯಾಯ'ದ ಮೊರೆ ಹೋಗಬೇಕಾಗಬಹುದು. ಹೀಗೆ ಚಂದ್ರನನ್ನು ''ನೋಡಿಯೇ ಬಿಟ್ಟೆ'' ಎಂದು ಕಲ್ಪಿಸಿಕೊಂಡು ೭ರ ನೋಟಕ್ಕೆ ''ಶಾಸ್ತ್ರೋಕ್ತ''ವಾಗಿ ಸಿದ್ಧರಾಗಿ. ಶುಕ್ರ ಮತ್ತು ಗುರು ಎರಡೇ ದಿನಗಳಲ್ಲಿ ದೂರ ಸರಿದಿವೆ ಎಂಬ ಅಂಶ ಮನದಟ್ಟುಮಾಡಿಕೊಳ್ಳಲು ಇದು ಒಳ್ಳೆಯ ಅವಕಾಶ. ಎರಡನೆಯ ತಾರೀಖು ಗುರು-ಶುಕ್ರಗಳ ಹಸ್ತಲಾಘವ. ಅಂದು ಅವೆರಡರ ನಡುವಿನ ಕೋನ ಕನಿಷ್ಠ – ಕೇವಲ ೧.೨ ಡಿಗ್ರಿ. ಅಂದರೆ ಎರಡು ಚಂದ್ರಗಳನ್ನು ನಡುವೆ ಕೂಡಿಸುವಷ್ಟು.

ಉ
ಧ್ರುವ
ಡ್ರಾಕೋ
ರಾಜಹಂಸ
ಲೈರಾ
ಬೂಟಿಸ್
ನಕುಲ
ಹರ್ಕುಲೆಸ್
ಪೂ
ಪ
ಗರುಡ
ಕನ್ಯಾ
ಗುರು
ಒಫಿಯೂಕಸ್
ಕುಂಭ
ತುಲಾ
ಮಕರ
ಶುಕ್ರ
ವೃಶ್ಚಿಕ
ದ

ಈಗ ರಾತ್ರಿಯ ಆಕಾಶದತ್ತ ಗಮನಹರಿಸಿ. ಪಶ್ಚಿಮದಲ್ಲಿ ಚಿತ್ರಾ ನಕ್ಷತ್ರದ ಹೊರತಾಗಿ ಯಾವುದೇ ಪ್ರಕಾಶಮಾನ ನಕ್ಷತ್ರವಿಲ್ಲ. ದಕ್ಷಿಣಕ್ಕೆ ದೃಷ್ಟಿ ಹಾಯಿಸಿ. ಅಂಚಿನಲ್ಲಿ ಎರಡು ಪ್ರಕಾಶಮಾನ ನಕ್ಷತ್ರಗಳು ಕಾಣುತ್ತವೆ. ಇವು 'ಬಕ' ಎಂಬ ಪುಂಜದವು. ಇಂಗ್ಲಿಷ್ ಹೆಸರು Grus (ಗ್ರುಸ್) ಎಂದು. ದಕ್ಷಿಣದ ಅಂಚಿನಿಂದ ನೆತ್ತಿಯತ್ತ ದೃಷ್ಟಿ ಹೊರಳಿಸಿ. ದಾರಿಯಲ್ಲೇ ನಿಮ್ಮ ನೋಟವನ್ನು ಬಂಧಿಸುವ ಸುಂದರ ಪುಂಜಗಳು ಧನು ಮತ್ತು ವೃಶ್ಚಿಕ. ಚಂದ್ರನ ಬೆಳಕು ಇಲ್ಲದಾಗ, ಮೋಡಗಳೂ ಇಲ್ಲದಾಗ, ಈ ಭಾಗ ಬಹು ಸುಂದರವಾಗಿ ಕಾಣುತ್ತದೆ. ವೃಶ್ಚಿಕದ ಆಕಾರ ಮಾತ್ರ ಹೆಸರಿಗೆ ಅನ್ವರ್ಥವಾಗಿದೆ ಎಂದು ಕಾಣ ಬಹುದು. ಭೂಮಿಯ ಮೋಡಗಳ ಬದಲು ಖಗೋಳೀಯ ಮೋಡಗಳು ಆ ಭಾಗವನ್ನು ಶೃಂಗರಿಸಿವೆ.

ನೆತ್ತಿಯ ಸಮೀಪವೇ ಕಾಣುವುದು ಭೀಮಸೇನ ಅಥವಾ ಹರ್ಕ್ಯುಲೆಸ್. ಇದನ್ನು ಪೂರ್ಣವಾಗಿ ಗುರುತಿಸಲು ಪೂರ್ವಕ್ಕೆ ತಿರುಗಿ. ಮಕರ, ಕುಂಭ – ಕ್ಷೀಣ ರಾಶಿಗಳು. ಗುರುತಿಸಲು ಪ್ರಯತ್ನಿಸಿ. ಕುಂಭ ದಿಗಂತದ ಅಂಚಿನಲ್ಲಿರುವು ದರಿಂದ ನಿಮ್ಮ ಪ್ರಯತ್ನ ಸಾರ್ಥಕ ವಾಗದು. ಸುಮಾರು ಏಳು ಗಂಟೆಗೆ ಎರಡು ಪ್ರಖರ ನಕ್ಷತ್ರ ಗಳು ಈಶಾನ್ಯದಂಚಿನಲ್ಲಿ ಕಾಣಿಸಿ ಕೊಳ್ಳುವುವು. ಇವು ನಕುಲ ಅಂದರೆ ಪೆಗಸಸ್ ಪುಂಜದ ಚೌಕದ ಎರಡು ಮೂಲೆಗಳು. ಪೂರ್ವಾಭಾದ್ರ, ಉತ್ತರಾಭಾದ್ರ ಎಂದು ಹೆಸರು. ಹುಣ್ಣಿಮೆ (೧೮ರಂದು) ಚಂದ್ರ ಈ ನಕ್ಷತ್ರಗಳ ನೇರಕ್ಕೆ ಇರುವುದರಿಂದ ಈ ತಿಂಗಳ ಹೆಸರು ಭಾದ್ರಪದವೆಂದಾಗಿದೆ. ಸುಮಾರು ೯ ಗಂಟೆಗೆ ಚೌಕದ ಪೂರ್ಣ ಆಕಾರ ಸ್ಪಷ್ಟವಾಗಿ ಕಾಣುವುದು.

ಈಗ ಉತ್ತರಕ್ಕೆ ತಿರುಗಿ. ತಲೆ ಎತ್ತಿದರೆ ಕಾಣುವ ಮೂರು ಪ್ರಕಾಶಮಾನ ನಕ್ಷತ್ರಗಳೇ ''ಬೇಸಿಗೆ ತ್ರಿಕೋಣ''ವನ್ನು ರಚಿಸುವ ಹಂಸಾಕ್ಷಿ (ದೆನೆಬ್), ಶ್ರವಣ (ಆಲ್ಟೇರ್) ಮತ್ತು ಅಭಿಜಿತ್ (ವೇಗಾ). ಈ ಮೂರು ಕ್ರಮವಾಗಿ ಸಿಗ್ನಸ್ (ರಾಜಹಂಸ), ಅಕ್ವಿಲಾ (ಗರುಡ) ಮತ್ತು ಲೈರಾ (ವೀಣಾ) ಈ ಪುಂಜಗಳಲ್ಲಿವೆ. ದಕ್ಷಿಣದ ಧನು ವೃಶ್ಚಿಕಗಳ ಮೂಲಕ ಹಾದುಹೋಗುವ ''ಹಾಲು ಹಾದಿ''- ಲೈರಾ ಮತ್ತು ಶ್ರವಣಗಳ ನಡುವೆ ನದಿಯಂತೆ ಮುಂದುವರೆಯುವುದನ್ನು ಕಾಣಬಹುದು. ಹಾಗಾಗಿ ವೇಗಾ ಮತ್ತು ಆಲ್ಟೇರ್ ಕುರಿತ ಪುರಾಣದ ಕತೆಯೂ ಹುಟ್ಟಿಕೊಂಡಿದೆ. ನಮ್ಮ ಪುರಾಣದ ಊರ್ವಶಿ-ಪುರೂರವರಂತೆ ಇವರಿಬ್ಬರೂ ಚಿರವಿರಹಿಗಳು. ನಡುವಿನ ದೇವ ನದಿಯನ್ನು ದಾಟಲು ಇಬ್ಬರಿಗೂ ಸಾಧ್ಯವಿಲ್ಲ. ಹಾಗಾಗಿ ಅಂಚೆ (ಹಂಸ)ಯ ಮೊರೆ ಹೊಕ್ಕಿದ್ದಾರೆ.

ಆಕಾಶ ಶುಭ್ರವಾಗಿದ್ದಾಗ ಲೈರಾದ ಪಕ್ಕ ಪುಟ್ಟ ಗುಂಪೊಂದು ಕಾಣುವುದು. ಡೆಲ್ಫಿನಿಸ್ ಎಂದರೆ ಡಾಲ್ಫಿನ್ ಮೀನು. ಹಾಲು ಹಾದಿ ಅಥವಾ ಆಕಾಶಗಂಗೆಯ ನೀರಿನಲ್ಲಿ ಕಾಣುವುದು ಸಹಜವೇ.

ಇದಿಷ್ಟೂ ಸಂಜೆಯ ನೋಟ. ನಕ್ಷೆಯೂ ಸಂಜೆಗೆ ಅನ್ವಯವಾಗುವಂತಹದೇ. ಮುಂಜಾವಿನಲ್ಲಿ ಕಾಣುವ ಗ್ರಹಗಳು ಮಂಗಳ, ಶನಿ ಮತ್ತು ಬುಧ (ಸ್ವಲ್ಪ ದಿನ ಮಾತ್ರ). ಮಂಗಳ ರಾತ್ರಿ ಹತ್ತು-ಹನ್ನೊಂದು ಗಂಟೆಗೇ ಕಾಣತೊಡಗುತ್ತದೆ. ತಿಂಗಳ ಕೊನೆಗೆ ಒಂಬತ್ತು ಗಂಟೆಗೇ ಉದಯಿಸುವುದು. ಅದರ ಪ್ರಕಾಶ ದಿನೇ ದಿನೇ ಹೆಚ್ಚುತ್ತಿರುವುದನ್ನು ಸ್ಫುಟವಾಗಿ ತಿಳಿಯಬಹುದು. ೨೧ರಂದು ಚಂದ್ರನ ಪಕ್ಕ ಅದನ್ನು ಗುರುತಿಸಿಕೊಳ್ಳಿ.

ತಿಂಗಳ ಇನ್ನೊಂದು ವಿಶೇಷ ೨೨ರಂದು. ಅಂದು ಶರದ್‌ವಿಷುವ ಎಂಬ ಕಾರಣಕ್ಕಲ್ಲ, ರಾತ್ರಿ ೧೦ ಗಂಟೆಯ ಹೊತ್ತಿಗೆ ಉದಯಿಸುವ ಚಂದ್ರನನ್ನು ಗಮನಿಸಿ.



ವಿನಾಯಕ ಚೌತಿಯ ಸಂಜೆಯ ನೋಟ, ಚಂದ್ರ, ಶುಕ್ರ, ಚಿತ್ರಾ ಮತ್ತು ಗುರುಗ್ರಹ



ಸೆಪ್ಟೆಂಬರ್ ೨೨ರಂದು ರಾತ್ರಿ ಸುಮಾರು ೧೦:೩೦ಗಂಟೆಗೆ ಪೂರ್ವ ದಿಕ್ಕಿನಲ್ಲಿ ಕಾಣುವ ನೋಟ, ಚಂದ್ರನ ಹಿಂದಿನದು ಕೃತ್ತಿಕಾ; ಮೇಲಿನದು ಮಂಗಳ.

ಅದಕ್ಕೆ ಅಂಟಿಕೊಂಡಂತೆ ಕಾಣುವ ಕೃತ್ತಿಕಾ ಸುಂದರ ದೃಶ್ಯವನ್ನು ತೆರೆದಿಡುತ್ತದೆ. ಇದು ಪೂರ್ಣಚಂದ್ರ ಅಲ್ಲ. ಚಂದ್ರನ ಮರೆಯಾದ ಭಾಗದಿಂದ ಕೃತ್ತಿಕೆಯ ನಕ್ಷತ್ರಗಳು ಒಂದೊಂದಾಗಿ ಉದ್ಭವವಾಗುವಂತೆ ಕಾಣುವ ದೃಶ್ಯ ನೋಡಲು ಚೆನ್ನ. ಛಾಯಾ ಗ್ರಹಣಕ್ಕೂ ಪ್ರಯತ್ನಿಸಬಹುದು. ೧೨ ಗಂಟೆಯ ಹೊತ್ತಿಗೆ ಇಡೀ ಗುಚ್ಛ ಕಾಣ ತೊಡಗುತ್ತದೆ. ಪಕ್ಕದಲ್ಲಿಯೇ ಕೆಂಪು ಬಣ್ಣದ ಮಂಗಳ ಗ್ರಹವೂ ಕಾಣುವುದು.

೨೮ರಂದು ಚಂದ್ರ-ಶನಿಯ ಜೊತೆಗೂಡುವುದು. ಈ ಸಂದರ್ಭ ಬಳಸಿ ಶನಿ ಗ್ರಹವನ್ನು ಗುರುತಿಸಿ. ಶನಿಯ ಆಸುಪಾಸನ್ನು ದುರ್ಬೀನಿನಲ್ಲಿ ಗಮನಿಸಿ. ಕ್ಷೀಣವಾದ ಪ್ರೆಸಿಪಿ ಎಂಬ ನಕ್ಷತ್ರ ಪುಂಜವೂ ಕಾಣುವುದು.

### ಖಗೋಳ ದಿನಚರಿ

೧ ಭೂಮಿ-ಚಂದ್ರ ದೂರ ಗರಿಷ್ಠ
೨ ಗುರು-ಶುಕ್ರ ನಡುವೆ ಕನಿಷ್ಠ ಕೋನ (ಕೇವಲ ೧.೨ ಡಿಗ್ರಿ)
(ಸಂಜೆಯ ನೋಟ)
ಬುಧ-ಚಂದ್ರ ನಡುವೆ ಕನಿಷ್ಠ ಕೋನ ಮುಂಜಾವಿನ ನೋಟ
೪ ಅಮಾವಾಸ್ಯೆ ೦೦.೧೫ ಗಂಟೆಗೆ
೫ ಶುಕ್ರ-ಚಿತ್ರಾ ನಕ್ಷತ್ರದ ನಡುವೆ ಕನಿಷ್ಠ ಕೋನ*
೬ ಗುರು-ಚಂದ್ರ ನಡುವೆ ಕನಿಷ್ಠ ಕೋನ
೭ ಶುಕ್ರ-ಚಂದ್ರ ನಡುವೆ ಕನಿಷ್ಠ ಕೋನ*
(ಆಚ್ಛಾದನೆ ಮಧ್ಯಾಹ್ನ ನಡೆಯುತ್ತದೆ – ನಮಗೆ ಕಾಣುವುದಿಲ್ಲ)
ಶುಕ್ರ-ಚಂದ್ರ-ಚಿತ್ರಾ-ಗುರು -- ಇವುಗಳನ್ನು ನೋಡಲು ಒಳ್ಳೆಯ ಅವಕಾಶ.
೧೧ ಚಾಂದ್ರಮಾಸದ ಮೊದಲನೆಯ ಪಾದ-ಚಂದ್ರಾಸ್ತ ನಡುರಾತ್ರಿಗೆ
೧೬ ಚಂದ್ರ-ಭೂಮಿ ದೂರ ಕನಿಷ್ಠ ಸಂಜೆ ೭ ಗಂಟೆಗೆ
೧೭ ಹುಣ್ಣಿಮೆ ಬೆಳಿಗ್ಗೆ ೭.೩೧ಕ್ಕೆ
೨೧ ರಾತ್ರಿ ಚಂದ್ರ-ಮಂಗಳ ಜೋಡಿ
೨೨ ಗುರು-ಚಿತ್ರಾ ಜೋಡಿ
ಕೃತ್ತಿಕಾ ನಕ್ಷತ್ರ ಪುಂಜದ ಆಚ್ಛಾದನೆ*
(ಅಂತ್ಯದ ಭಾಗ ಚಂದ್ರೋದಯದೊಡನೆ ಕಾಣುವುದು)
೨೩ ಶರದ್‌ವಿಷುವ (ಹಗಲು-ರಾತ್ರಿಗಳ ಅವಧಿ ಸಮ) ಬೆಳಗಿನ ೦೩.೫೩ಕ್ಕೆ
೨೫ ಚಾಂದ್ರಮಾಸದ ಕೊನೆಯ ಪಾದ-ಚಂದ್ರೋದಯ ನಡುರಾತ್ರಿಗೆ
೨೮ ಶನಿ-ಚಂದ್ರ ಕನಿಷ್ಠಕೋನ
ಭೂಮಿ-ಚಂದ್ರ ದೂರ ಗರಿಷ್ಠ.

* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

## ಸಾದರ ಸ್ವೀಕಾರ

**ಜಲಕೃಷಿಯಲ್ಲಿ ನವೀನ ತಾಂತ್ರಿಕತೆಗಳು** (ಲೇಖನ ಸಂಕಲನ)
ಡಾ|| ಟಿ. ಜೆ. ರಮೇಶ
ವಿಜಯಕುಮಾರ್ ಸಿ. ಯರಗಾಲ್, ಎ. ಸಿ. ಸುಧಾಕರ್
ಪುಟ : ೫೬ ಬೆಲೆ : ರೂ. ೩೦

**ಮುಸ್ಸಂಜೆಯಲ್ಲೊಂದು ಗ್ರಹಣ** (ಕಥಾ ಸಂಕಲನ)
ಸುಶೀಲಾ ಆರ್. ರಾವ್
ಪುಟ : ೯೬ ಬೆಲೆ : ರೂ. ೫೦

**ರಾಯಭಾರ** (ನಾಟಕ ಸಂಕಲನ)
ಪಾರಂಪಳ್ಳಿ ನರಸಿಂಹ ಐತಾಳ್
ಪುಟ : ೮೦ ಬೆಲೆ : ರೂ. ೨೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಪುಸ್ತಕನಿಧಿ**, ಗಾವಳಿ ಶಾಲೆ ಹತ್ತಿರ, ಹಳ್ನಾಡಿ-ಹರ್ಕಾಡಿ ಅಂಚೆ, ಕುಂದಾಪುರ ತಾಲ್ಲೂಕು - ೫೭೬ ೨೧೦

**ನೆತ್ತರುನಾದ** (ಕಥಾ ಸಂಕಲನ) ಕೋನಳ್ಳಿ ರಾಜೀವ ನಾಯ್ಕ
ಪುಟ : ೫೬ ಬೆಲೆ : ರೂ. ೩೬

**ಗುಬ್ಬಿಗೂಡು** (ಮಕ್ಕಳ ಕವನಗಳು)
ನಾಗೇಂದ್ರ ನಾಯಕ ತೊರ್ಕೆ
ಪುಟ : ೮೨ ಬೆಲೆ : ರೂ. ೪೫

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಕೋಲಾ - ೫೮೧ ೩೧೪

**ವಂದನೆ** (ಕವನ ಸಂಕಲನ) ಭಾರತೀಪುತ್ರ
ಪುಟ : ೧೧೬ ಬೆಲೆ : ರೂ. ೪೫
**ಭಾರತೀಯ ಸಾಹಿತ್ಯ**, ಹಳೇ ಅಂಚೆ ಕಛೇರಿ ರಸ್ತೆ, ನಾಗಮಂಗಲ - ೫೭೧ ೪೩೨

**ಪವಾಡಗಳ ಒಳಗುಟ್ಟುಗಳು**
(50ಚಮತ್ಕಾರಗಳಿಗೆ ವೈಜ್ಞಾನಿಕ ವಿವರಣೆ) ಸಿದ್ದರಾಜು, ಕೊತ್ತತ್ತಿ
ಪುಟ : ೧೨೬ ಬೆಲೆ : ರೂ. ೫೦
**ವಿಕಾಸ ಪ್ರಕಾಶನ**, ಕೊತ್ತತ್ತಿ - ೫೭೧ ೪೦೨ ಮಂಡ್ಯ ತಾಲೂಕು

**ಕುವೆಂಪು ಶತಮಾನದ ಶಿಖರ** (ಲೇಖನಗಳು)
ಸಂ : ಆರ್. ಜಿ. ಹಳ್ಳಿ ನಾಗರಾಜ್
ಪುಟ : ೫೬ ಬೆಲೆ : ರೂ. ೨೫
**ಚಿಂತನಕೂಟ**, ೩೭/೨-ಎ, 'ನಿಸರ್ಗ', ನಾಗರಬಾವಿ ರಸ್ತೆ ವಿಜಯನಗರ, ಬೆಂಗಳೂರು - ೫೬೦ ೦೪೦

**ಮಕ್ಕಳಿಗಾಗಿ ಮುತ್ತಿನ ಕಥೆಗಳು** (ಮಕ್ಕಳ ಕಥೆಗಳು)
ಎಸ್. ಎಸ್. ಪಾಟೀಲ
ಪುಟ : ೪೪ ಬೆಲೆ : ರೂ. ೩೦
**ಶ್ರುತಿ ಸಂತೋಷ ಪ್ರಕಾಶನ**, ಸಂಗಮ ನಿವಾಸ, ಬಸವ ಕಾಲೋನಿ, ಬೆಳಗಾಂವ್

**ಅರಸು ದೈವಗಳು ಮತ್ತು ಇಕ್ಕೇರಿ ಅರಸರು** (ಸಂಶೋಧನಾ ಕೃತಿ)
ಡಿ. ಜಿ. ನಡ್ಕ ಪಡ್ಡಿನಂಗಡಿ
ಪುಟ : ೪೦ ಬೆಲೆ : ರೂ. ೩೦
**ಜಾನಪದ ಕೂಡುಕಟ್ಟು**, ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೨

**ಮಾನೆ ಹೊಲ** (ನಾಟಕ) ಶಂಕರ ಲಮಾಣಿ
ಪುಟ : ೫೩ ಬೆಲೆ : ರೂ. ೪೦
**ಹಂಬಲ ಪ್ರಕಾಶನ**, ಪ್ರಧಾನ ಅಂಚೆ ಕಚೇರಿ ಹಿಂದೆ, ಬಾಗಲಕೋಟೆ - ೫೮೭ ೧೦೧

**ಹೊನ್ನ ಬೆಳಕೆ ಬಾ** (ಕವನ ಸಂಕಲನ) ಪಾರ್ವತಿ ಜಿ. ಐತಾಳ್
ಪುಟ : ೫೬ ಬೆಲೆ : ರೂ. ೫೦
**ಎನ್.ಆರ್.ಎ.ಎಂ.ಎಚ್. ಪ್ರಕಾಶನ**
ಕೋಟೇಶ್ವರ - ೫೭೬ ೨೨೨ (ಉಡುಪಿ ಜಿಲ್ಲೆ)

**ಮಾತಿನ ಮಾತು** (ಆರೋಗ್ಯ)
ಡಾ|| ಜಿ. ಪುರುಷೋತ್ತಮ
ಪುಟ : ೧೬೮ ಬೆಲೆ : ರೂ. ೬೦

**'ಚಂಪಾ'ದಕೀಯ** (ಲೇಖನ ಸಂಗ್ರಹ)
ಪ್ರೊ|| ಚಂದ್ರಶೇಖರ ಪಾಟೀಲ
ಪುಟ : ೧೨೮ ಬೆಲೆ : ರೂ. ೪೫

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಶಾಯಿರಿ** (ಕನ್ನಡ ಆಜಾದ್ ನಜ಼ಮ್ ಸಂಕಲನ)
ಡಾ|| ಗುರುರಾಜ ಅರಕೇರಿ
ಪುಟ : ೧೬೯ ಬೆಲೆ : ರೂ. ೭೦
**ಗಂಗಾಶ್ರೀ ಪ್ರಕಾಶನ**, ಬಸವೇಶ್ವರ ನಗರ
ಶಹಾಪುರ- ೫೮೫ ೨೨೩

**ದಿನ್ನಿ ತಾಳಪಲ್ಲಿ ವೆಂಕಯ್ಯ** ಡಾ|| ದಸ್ತಗೀರ್‌ಸಾಬ್ ದಿನ್ನಿ
ಪುಟ : ೭೬ ಬೆಲೆ : ರೂ. ೪೦
**ಯುವಕರ ಸಂಘ (ರಿ)**, ರಾಮನಗರ
ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

**ಸ್ತ್ರೀ-ಭಿನ್ನ ಮುಖಗಳು** (ಲೇಖನ ಸಂಕಲನ)
ಶ್ರೀಮತಿ ಬಿ. ಎಂ. ರೋಹಿಣಿ
ಪುಟ : ೧೪೪ ಬೆಲೆ : ರೂ. ೬೦
**ಕರಾವಳಿ ಲೇಖಕಿಯರ-ವಾಚಕಿಯರ ಸಂಘ (ರಿ)**
ಉರ್ವ ಸ್ಟೋರ್, ಅಶೋಕನಗರ ಅಂಚೆ ಕಚೇರಿ ಬಳಿ
ಮಂಗಳೂರು - ೫೭೫ ೦೦೬




ಹಿರೋಶಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಪರಮಾಣು ಬಾಂಬು ದಾಳಿಯ ಮಾರಣಹೋಮ ಜರುಗಿ ಅರವತ್ತು ವರ್ಷ. ಆದರೆ ಮಾನವ ಕುಲಕ್ಕೆ ಅದು ಇನ್ನೂ ಮಾಯದ ಗಾಯ. ಪರಮಾಣು ಅಸ್ತ್ರಗಳ ಪರಿವಾರದಿಂದ ಸಂಭವಿಸುವ ಅನಾಹುತಗಳಿಗೆ ಎಚ್ಚರಿಕೆಯ ಕರೆಗಂಟೆ. ಎರಡನೇ ಮಹಾಯುದ್ಧದ ಮುಕ್ತಾಯ ಹಂತದಲ್ಲಿ, ಫ್ಯಾಸಿಸ್ಟ್ ಶಕ್ತಿಗಳು ಶರಣಾಗುತ್ತಿರುವಾಗ ಜಪಾನಿನ ಈ ಎರಡು ನಗರಗಳ ಮೇಲೆ ಪರಮಾಣು ಬಾಂಬು ಹಾಕಿ ಅಮಾಯಕ ಜನರ ಹತ್ಯೆಗೈದು, ದುಷ್ಕೃತ್ಯ ನಡೆಸಿದ್ದು ಅಮೆರಿಕ. ಪ್ರಯೋಗಾರ್ಥವಾಗಿ ಅಮಾನುಷ ಕೃತ್ಯ ಜರುಗಿಸಿ ವಿನಾಶಕಾರಿ ಮಾರಕಾಸ್ತ್ರ ಹೊಂದಿರುವ ಏಕೈಕ ರಾಷ್ಟ್ರ ತಾನು ಎಂಬ ಅಹಮಿಕೆಯಿಂದ ಅಂದು ಅಮೆರಿಕ ಮೆರೆದಿತ್ತು. ಈ ಏಕಸ್ವಾಮ್ಯ ಹೆಚ್ಚುಕಾಲ ಉಳಿಯಲಿಲ್ಲ. ಅಂದಿನ ಸೋವಿಯೆತ್ ಒಕ್ಕೂಟ ಪರಮಾಣು ಶಕ್ತಿ ಪ್ರದರ್ಶಿಸಿ ಅಮೆರಿಕಾಗೆ ಸವಾಲಾಗಿ ನಿಂತಿತು. ಮತ್ತಷ್ಟು ಪ್ರಬಲವಾದ ನ್ಯೂಕ್ಲಿಯರ್ ಅಸ್ತ್ರಗಳ ಸರಣಿಯೇ ಪ್ರಾರಂಭವಾಯಿತು. ಇಡೀ ಭೂಮಂಡಲವನ್ನೇ ಹಲವು ಪಟ್ಟು ಧೂಳೀಪಟ ಮಾಡಬಲ್ಲ ನ್ಯೂಕ್ಲಿಯರ್ ಅಸ್ತ್ರಗಳ ರಾಶಿ ಮನುಕುಲದ ಅಸ್ತಿತ್ವಕ್ಕೇ ಅಪಾಯ ತಂದಿತು. ಈ ಎರಡು ದೇಶಗಳ ಜೊತೆಗೆ ಫ್ರಾನ್ಸ್, ಬ್ರಿಟನ್, ಚೀಣಾ ದೇಶಗಳು ಸೇರಿ ನ್ಯೂಕ್ಲಿಯರ್ ಅಸ್ತ್ರಗಳ ಪ್ರತಿಷ್ಠಿತ ಗುಂಪಾಯಿತು. ಇತರ ದೇಶಗಳಿಗೆ ಪರಮಾಣು ಶಕ್ತಿಯ ರಹಸ್ಯ ಪ್ರಸರಣವಾಗದಂತೆ ತಡೆಯಲು, 'ಜವಾಬ್ದಾರಿಯುತ' ಎಂದು ಕರೆದುಕೊಳ್ಳುವ ಈ ರಾಷ್ಟ್ರಗಳ ಗುಂಪು ಅಂತಾರಾಷ್ಟ್ರೀಯ ಒಡಂಬಡಿಕೆ ಒಂದನ್ನು ವಿಶ್ವಸಂಸ್ಥೆಯ ನೇತೃತ್ವದಲ್ಲಿ ಇತರ ದೇಶಗಳ ಮೇಲೆ ಹೇರಿದವು. ಅದರಿಂದೇನೂ ಹೆಚ್ಚು ಪ್ರಯೋಜನವಾಗಲಿಲ್ಲ ಎಂದು ಹೇಳಬೇಕು. ಕಾಲಕ್ರಮೇಣ ಹಣ ಹಾಗೂ ತಾಂತ್ರಿಕ ವ್ಯವಧಾನ ಇರುವ ಇತರ ದೇಶಗಳೂ ನ್ಯೂಕ್ಲಿಯರ್ ಅಸ್ತ್ರಕ್ಕಾಗಿ ಹಾತೊರೆದು ಯಶಸ್ವಿಯಾದವು. ಇಂದು ಭಾರತ, ಪಾಕಿಸ್ತಾನ, ಇಸ್ರೇಲ್ ಪರಮಾಣು ಶಕ್ತಿ ಆಸ್ಫೋಟನೆ ನಡೆಸಿ ನ್ಯೂಕ್ಲಿಯರ್ ಪ್ರತಿಷ್ಠಿತ ಗುಂಪು ಸೇರಲು ತುದಿಗಾಲ ಮೇಲೆ ನಿಂತಿವೆ. ಉತ್ತರ ಕೊರಿಯಾ, ಇರಾನ್ ಕೂಡ ಆ ಶಕ್ತಿ ಪಡೆದುಕೊಳ್ಳುವ ಹಂತದಲ್ಲಿವೆ. ಹಾಗಾಗಿ, ಇಂದು ನ್ಯೂಕ್ಲಿಯರ್ ಅಸ್ತ್ರಗಳನ್ನು ಮನಸ್ಸು ಮಾಡಿದರೆ, ಸಾಕಷ್ಟು ಧನಬಲವಿದ್ದರೆ ಯಾವ ದೇಶವೂ ಪಡೆದುಕೊಳ್ಳಬಹುದಾಗಿದೆ. ಜಗತ್ತು ಅಷ್ಟೇ ಮಟ್ಟದಲ್ಲಿ ಅಸ್ಥಿರವಾಗುತ್ತಿದೆ, ಅಭದ್ರವಾಗುತ್ತಿದೆ. ಯಾವುದೇ ಕ್ಷಣದಲ್ಲಿ ಅಚಾತುರ್ಯದಿಂದಲೋ, ಉದ್ದೇಶ ಪೂರ್ವಕವಾದ ಕೃತ್ಯದಿಂದಲೋ ಮನುಕುಲ ನಿರ್ನಾಮವಾಗುವ ಭೀತಿ ಆವರಿಸಿದೆ. ಈ ಮಾರಕಾಸ್ತ್ರಗಳು ಮಾಡುವ ಅನಾಹುತಕ್ಕೆ, ಸರ್ವನಾಶಕ್ಕೆ ಹಿರೋಷಿಮ, ನಾಗಸಾಕಿಗಳು ಇಂದಿಗೂ ಸಾಕ್ಷಿಯಾಗಿ ನಿಂತಿವೆ.

ಸಮಾಧಾನದ ಒಂದು ಸಂಗತಿ ಎಂದರೆ ಈ ಅರವತ್ತು ವರ್ಷಗಳಲ್ಲಿ ಮತ್ತೊಮ್ಮೆ ಅಂಥ ದುರ್ಘಟನೆ ಸಂಭವಿಸದೇ ಇರುವುದು. ಆದರೂ ಮುಂದೇನು ಎನ್ನುವ ಪ್ರಶ್ನೆ ಮಾತ್ರ ಹಾಗೇ ಉಳಿದಿದೆ. ಪರಸ್ಪರ ವಿನಾಶದ ಭೀತಿಯಿಂದ ಇದುವರೆಗಿನ ಘರ್ಷಣೆಗಳಲ್ಲಿ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗವಾಗಿಲ್ಲ. ಮುಂದೆಯೂ ಆಗದಂತೆ ನೋಡಿಕೊಳ್ಳುವುದು ಅಗತ್ಯ. ನ್ಯೂಕ್ಲಿಯರ್ ಅಸ್ತ್ರ ಹೊಂದಿದ್ದರೆ ಒಂದು ಬಗೆಯ ರಕ್ಷಣೆ, ಶತ್ರುಗಳಿಗೆ ಎಚ್ಚರಿಕೆ ಎಂಬ ಪೊಳ್ಳು ನಂಬಿಕೆ ಈಗಲೂ ಇದೆ. ದುರಾಕ್ರಮಣ ತಡೆಯುವ ಶಕ್ತಿ ಅದಕ್ಕಿದೆ ಎಂಬ ತಪ್ಪು ಕಲ್ಪನೆ ಇದೆ. ಇಂದಿನ ಸಂದರ್ಭದಲ್ಲಿ ಇದೊಂದು ಭ್ರಮೆ ಅಷ್ಟೆ. ಅದರಿಂದ ನ್ಯೂಕ್ಲಿಯರ್ ಅಸ್ತ್ರ ಪಡೆದಿರುವುದು ಹೆಮ್ಮೆಯ ಸಂಗತಿ ಏನಲ್ಲ. ಬದಲಾಗಿ ನ್ಯೂಕ್ಲಿಯರ್ ಅಸ್ತ್ರಗಳ ಭೀತಿಯಿಂದ ಜಗತ್ತನ್ನು ಮುಕ್ತಗೊಳಿಸಲು ಶ್ರಮಿಸುವುದು ಮಾಡಬೇಕಾಗಿರುವ ಕಾರ್ಯ. ಪರಮಾಣು ಅಸ್ತ್ರದ ಮೊದಲ ಅನಾಹುತದೊಂದಿಗೇ ಅಣ್ವಸ್ತ್ರಗಳ ವಿಸರ್ಜನೆಗಾಗಿ ಜಗತ್ತಿನಾದ್ಯಂತ ಚಳವಳಿಯೂ ಪ್ರಾರಂಭವಾಯಿತು. ವಿಜ್ಞಾನಿಗಳು ನ್ಯೂಕ್ಲಿಯರ್ ಅಸ್ತ್ರಗಳ ಮಾರಕ ಪರಿಣಾಮಗಳ ಕುರಿತು ಜನತೆಯಲ್ಲಿ ತಿಳಿವಳಿಕೆಯನ್ನು ಹರಡತೊಡಗಿದರು. ಹಿರೋಷಿಮ, ನಾಗಸಾಕಿಗಳ ದುರಂತದ ನಂತರದ ದಶಕದಲ್ಲಿ ವಿಶ್ವಸಂಸ್ಥೆಗೆ ಅಣ್ವಸ್ತ್ರಗಳ ನಿಷೇಧಕ್ಕಾಗಿ ಪ್ರಪಂಚದ ಕೋಟ್ಯನುಕೋಟಿ ಜನರು ಸಹಿ ಹಾಕಿದ್ದ ಮನವಿಯನ್ನು ಸಮರ್ಪಿಸಲಾಗಿತ್ತು. ಈ ಚಳವಳಿ ದಶಕಗಳ ಹಿಂದೆ ಇದ್ದಷ್ಟು ಇಂದು ಪ್ರಬಲವಾಗಿಲ್ಲದೇ ಹೋದರೂ, ಅದನ್ನು ಪುನರುಜ್ಜೀವನಗೊಳಿಸುವ ಅಗತ್ಯ ಹೆಚ್ಚಾಗಿದೆ.

ಹಿರೋಷಿಮಾ, ನಾಗಸಾಕಿ ದುರಂತದ ಹತ್ತನೇ ವರ್ಷದ ಸಂದರ್ಭದಲ್ಲಿ ಜಗದ್ವಿಖ್ಯಾತ ದಾರ್ಶನಿಕ, ಚಿಂತಕ ಬರ್ಟ್ರಾಂಡ್ ರಸೆಲ್ ಮತ್ತು ಅದ್ವಿತೀಯ ಭೌತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗಾಗಿ ಕಳಕಳಿಯ ಮನವಿಯನ್ನೊಳಗೊಂಡ ಪ್ರಣಾಳಿಕೆಯೊಂದನ್ನು ಪ್ರಕಟಿಸಿದರು. ಮಾನವೀಯತೆಯನ್ನು ನೆನಪಿನಲ್ಲಿಟ್ಟುಕೊಂಡು ಉಳಿದೆಲ್ಲವನ್ನೂ ಮರೆತರೆ ಹೊಸ ಜಗತ್ತಿಗೆ ದಾರಿ ಸುಗಮ, ಇಲ್ಲವಾದಲ್ಲಿ ಸರ್ವನಾಶ ಖಚಿತ ಎಂದು ಅವರು ಎಚ್ಚರಿಸಿದ್ದರು. ಅದು ಇಂದಿಗೂ ಪ್ರಸ್ತುತ. ಮುಂದೆ ಎರಡು ವರ್ಷಗಳಲ್ಲಿ (೧೯೫೭) ಪ್ರಪಂಚದ ವಿಜ್ಞಾನಿಗಳು, ಚಿಂತಕರು ಕೆನಡಾದ ಪಗ್ವಾಷ್ ಎಂಬ ಗ್ರಾಮದಲ್ಲಿ ಕಲೆತು ರಸೆಲ್-ಐನ್‌ಸ್ಟೈನ್ ಪ್ರಣಾಳಿಕೆಯನ್ನು ಸಮರ್ಥಿಸಿ ಚಳವಳಿಯೊಂದನ್ನು ಪ್ರಾರಂಭಿಸಿದರು.

ಮುಂದಿನ ಪುಟಕ್ಕೆ

# ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ನಿರ್ಮೂಲನ ಸುರಕ್ಷತೆಗೆ ಏಕೈಕ ಮಾರ್ಗ



ಸೀಯಾರ್ಕೆ



## ಕವಿತೆ

ನೋವು ನಲಿವಿನ
ಬೀಜ ಬಿತ್ತಿ
ಭಾವನೆಯ ನೀರು
ಹಾಕಿ,
ಪ್ರಾಸ ರಸಗೊಬ್ಬರದಿ
ದಷ್ಟಪುಷ್ಟ ಬೆಳೆದ
ಹಸಿರು ತೆನೆ!

ಶೋಭಾ ಪ್ರಮೋದ್
ಮಹಾಲಕ್ಷ್ಮಿ ಏಜೆನ್ಸೀಸ್, ಮಾಣ್‌ಗಾಂವ್ ಅಂಚೆ
ಮಹಾರಾಷ್ಟ್ರ - ೪೦೨ ೧೦೪

ಹಿಂದಿನ ಪುಟದಿಂದ

ಆಗಿನಿಂದ ಪ್ರತಿ ವರ್ಷವೂ 'ಪಗ್ವಾಷ್ ಸಮ್ಮೇಳನ' ಎಂಬ ಹೆಸರಿನಲ್ಲೇ ಸಮಾವೇಶಗಳನ್ನು ಜರುಗಿಸುತ್ತ ಬಂದಿದ್ದಾರೆ. ನ್ಯೂಕ್ಲಿಯರ್ ಅನಾಹುತದ ಬಗ್ಗೆ ಜನತೆಗೆ ತಿಳಿವಳಿಕೆ ನೀಡುತ್ತಲೇ ಬಂದಿದ್ದಾರೆ. ಹಿರೋಷಿಮಾದಲ್ಲಿ ಈ ವರ್ಷ ಜುಲೈ ಕೊನೆಯಲ್ಲಿ ನಡೆದ ಸಮಾವೇಶದಲ್ಲಿ ಜಗತ್ತನ್ನು ನ್ಯೂಕ್ಲಿಯರ್ ಅಸ್ತ್ರಗಳಿಂದ ಮುಕ್ತವಾಗಿಸಲು ಆರು ಅಂಶಗಳ ಕಾರ್ಯಕ್ರಮವೊಂದನ್ನು ರೂಪಿಸ ಲಾಗಿದೆ. ಅವನ್ನು ನ್ಯೂಕ್ಲಿಯರ್ ಅಸ್ತ್ರ ಹೊಂದಿರುವ ರಾಷ್ಟ್ರಗಳು ಕಾರ್ಯಗತ ಮಾಡಿದರೆ ಜಗತ್ತು ಸುರಕ್ಷಿತ. ನ್ಯೂಕ್ಲಿಯರ್ ಅಸ್ತ್ರ ಹೊಂದಿರುವ ದೇಶಗಳು ಅವನ್ನು ಬಳಸಲು ತಾವು ಮೊದಲಿಗರಾಗೆವು ಎಂಬ ನೀತಿಯನ್ನು ಪ್ರಕಟಿಸಬೇಕು; ಈವರೆಗೆ ಅಣ್ವಸ್ತ್ರ ಪ್ರಯೋಗ ಪರೀಕ್ಷೆಗಳ ಕುರಿತು ಆಗಿರುವ ಒಪ್ಪಂದಗಳನ್ನು ಪಾಲಿಸಬೇಕು; ೨೦೨೦ರ ವೇಳೆಗೆ ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ವಿಸರ್ಜನೆಗಾಗಿ ಕಾರ್ಯತಂತ್ರ ರೂಪಿಸಬೇಕು; ಎಲ್ಲ ದೇಶಗಳ ಎಲ್ಲ ರಾಜಕೀಯ ಪಕ್ಷಗಳೂ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗಾಗಿ ಶ್ರಮಿಸಲು ಪಣತೊಡಬೇಕು, ಅದು ಚುನಾವಣಾ ಪ್ರಣಾಳಿಕೆಗಳ ಅಂಗವಾಗಿರಬೇಕು; ಇವೇ ಕಾರ್ಯಕ್ರಮದ ಸಾರಾಂಶ. ಈ ಸರಳ ಕಾರ್ಯ ಕ್ರಮವನ್ನು ಅಂಗೀಕರಿಸಲು ನ್ಯೂಕ್ಲಿಯರ್ ದೇಶಗಳು ಹಾಗೂ ಇತರ ಎಲ್ಲಾ ದೇಶಗಳೂ ಮುಂದಾಗಬೇಕು. ೧೯೯೮ರಲ್ಲಿ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗ ನಡೆಸುವ ವರೆಗೆ ಭಾರತ, ನ್ಯೂಕ್ಲಿಯರ್ ನಿರಾಯುಧೀಕರಣಕ್ಕಾಗಿ ಹೋರಾಟದಲ್ಲಿ ಅಗ್ರಪಂಕ್ತಿಯಲ್ಲಿತ್ತು. ಈಗ ಭಾರತ ನ್ಯೂಕ್ಲಿಯರ್ ಶಕ್ತ ರಾಷ್ಟ್ರಗಳ ಕೂಟ ಪ್ರವೇಶಿಸಲು ಹೆಮ್ಮೆ ಪಡಬೇಕಾಗಿಲ್ಲ. ಬದಲಾಗಿ ಈಗಲೂ ನ್ಯೂಕ್ಲಿಯರ್ ಅಸ್ತ್ರಗಳ ಪೂರ್ಣ ವಿಸರ್ಜನೆಗಾಗಿ, ನಿರ್ಮೂಲನಕ್ಕಾಗಿ ಚಳುವಳಿಯ ನೇತೃತ್ವ ವಹಿಸುವುದು ಸೂಕ್ತ. ನಮ್ಮ ಹಾಗೂ ಮುಂದಿನ ಪೀಳಿಗೆಗಳ ಸಂಕ್ಷೇಮಕ್ಕೆ, ಉಜ್ವಲ ಭವಿಷ್ಯಕ್ಕೆ ಇರುವುದು ಇದೊಂದೇ ಮಾರ್ಗ. ಮತ್ತೊಂದು ನ್ಯೂಕ್ಲಿಯರ್ ಮಾರಣಹೋಮಕ್ಕೆ ಎಡೆ ಕೊಡದಂತೆ ಮಾಡುವುದೇ ಮನುಕುಲದ ಗುರಿಯಾಗಬೇಕು.

### ಲ್ಯಾಟಿನ್ ಅಮೆರಿಕಾ ದೇಶಗಳ ಸವಾಲು

ಇರಾಕಿನಲ್ಲಿ ಇಕ್ಕಟ್ಟಿಗೆ ಸಿಕ್ಕಿಕೊಂಡಿರುವ ಅಮೆರಿಕಾಗೆ ಈಗ ಇರಾನಿನ ಮೇಲೆ ಕಣ್ಣು. ಅಧಿನಾಯಕತ್ವದ ಮಹತ್ವಾಕಾಂಕ್ಷೆಯಲ್ಲಿರುವ ಜಾರ್ಜ್ ಬುಷ್ ಕಂಪೆನಿ ಇನ್ನೂ ಪಾಠ ಕಲಿತಿಲ್ಲ. ದುಸ್ಸಾಹಸ ಮಾಡಿದರೆ ಇಡೀ ಮಧ್ಯ ಪ್ರಾಚ್ಯ ಸ್ಫೋಟಗೊಂಡೀತು. ಭಯೋತ್ಪಾದನೆಯ ವಿರುದ್ಧ ಸಮರ ಘೋಷಿಸಿರುವ ಅಮೆರಿಕದ ಅಧ್ಯಕ್ಷ ಬುಷ್ ಪ್ರಪಂಚದ ಜನತೆಯ ಎದುರಿನಲ್ಲಿ ಮೊದಲ ಭಯೋತ್ಪಾದಕ. ಆಫ್ಘಾನಿಸ್ತಾನ, ಇರಾಕ್, ಪ್ಯಾಲಸ್ಟೈನ್ ಗಳಲ್ಲಿ ನಡೆದಿರುವ ನರಮೇಧಗಳೇ ಅದಕ್ಕೆ ಸಾಕ್ಷಿ.

ಇದು ದೂರದಲ್ಲಿರುವ ಮಧ್ಯಪ್ರಾಚ್ಯದ ಸಂಗತಿ ಯಾದರೆ, ಅಮೆರಿಕದ ಹಿತ್ತಲಲ್ಲೇ ಲ್ಯಾಟಿನ್ ಅಮೆರಿಕ ದಲ್ಲಿ ಬುಷ್‌ಗೆ ದೊಡ್ಡ ಸವಾಲು ಎದುರಾಗುತ್ತಿದೆ. ಈ ಭೂಭಾಗದಲ್ಲಿ ಕ್ಯೂಬಾ ಒಂದೆ ದಿಟ್ಟವಾಗಿ ಅಮೆರಿಕದ ಎದುರು ನಿಂತ ರಾಷ್ಟ್ರವಾಗಿತ್ತು. ದಶಕಗಳ ಕಾಲದಿಂದ ಪುಟ್ಟ ಕೆರಿಬಿಯನ್ ದ್ವೀಪ ರಾಷ್ಟ್ರ ಕ್ಯೂಬಾವನ್ನು ಮಣಿಸಲು ಕೆನಡಿಯಿಂದ ಹಿಡಿದು ಈವರೆಗೆ ಬಂದ ಅಮೆರಿಕದ ಅಧ್ಯಕ್ಷರುಗಳ ಕೈಲಾಗಲಿಲ್ಲ. ಆದರೆ ಈಗ ಇಪ್ಪತ್ತೊಂದನೇ ಶತಮಾನದಲ್ಲಿ ಕ್ಯೂಬಾ ಏಕಾಂಗಿಯಲ್ಲ. ಅದರ ಜೊತೆಗೆ ವೆನೆಜುವೇಲ, ಉರುಗ್ವೆ, ಅರ್ಜೆಂಟೈನಾ ಮೊದಲಾದ ದೇಶಗಳು ಸೇರಿಕೊಂಡಿವೆ. ನೆರೆಯ ದೊಡ್ಡಣ್ಣ ಅಮೆರಿಕಾಗೆ ಈ ಹೊಸ ಬೆಳವಣಿಗೆ ತಲೆನೋವು ತಂದಿದೆ. ಇಡೀ ಲ್ಯಾಟಿನ್ ಅಮೆರಿಕಾ ದೇಶಗಳನ್ನು ತನ್ನ ಮಾರುಕಟ್ಟೆ ಜಾಲದೊಳಗೆ ಸೇರಿಸಿ ಕೊಳ್ಳುವ ಅಮೆರಿಕದ ಹವಣಿಕೆ ನನಸಾಗದೆ ಹೋಗಿದೆ. ಮೂರು ವರ್ಷಗಳ ಹಿಂದೆ ಪ್ರಾರಂಭ ವಾದ ಹೊಸ ಪ್ರಗತಿಪರ ಅಲೆ ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಹಬ್ಬುತ್ತಿದೆ ನಿಧಾನವಾಗಿ. ಬ್ರೆಜಿಲ್, ಅರ್ಜೆಂಟೈನಾಗಳು ಅಮೆರಿಕದ ಜೇಬಿನಲ್ಲಿರುವ ವರ್ಲ್ಡ್ ಬ್ಯಾಂಕ್, ಐಎಂಎಫ್ ಕಪಿಮುಷ್ಟಿಯಲ್ಲಿ ಸಿಕ್ಕು ಆರ್ಥಿಕ ದುಸ್ಥಿತಿ ಅನುಭವಿಸಿದ್ದುವು. ಮುಕ್ತ ಮಾರುಕಟ್ಟೆ ಆರ್ಥಿಕ ಮಾರ್ಗ ತ್ಯಜಿಸಿ ಪ್ರಗತಿಗೆ ಬೇರೆ ಮಾರ್ಗ ಅನುಸರಿಸಲು ಈ ದೇಶಗಳು ಸಜ್ಜಾಗುತ್ತಿವೆ. ಚುನಾವಣೆಗಳಲ್ಲಿ ಪ್ರಗತಿ ಪರ ಶಕ್ತಿಗಳು ಅಧಿಕಾರಕ್ಕೆ ಬಂದಿವೆ. ತೈಲಸಂಪನ್ನವಾದ ವೆನೆಜುವೇಲದಲ್ಲಿ ೨೦೦೨ರಲ್ಲಿ ಹ್ಯೂಗೋ ಶವೆಜ್ ಅಧ್ಯಕ್ಷನಾಗಿ ಚುನಾಯಿತನಾದ ಮೇಲೆ ಬದಲಾವಣೆಯ ಗಾಳಿ ಚುರುಕುಗೊಂಡಿದೆ. ವೆನೆಜುವೇಲ ಕ್ಯೂಬಾ ದೊಂದಿಗೆ ಕೈಜೋಡಿಸಿದೆ, ಅಮೆರಿಕದ ಬೆದರಿಕೆಗಳಿಗೆ ಮಣಿಯದೆ ಪರ್ಯಾಯ ವ್ಯವಸ್ಥೆ ರೂಪಿಸುವ ಪ್ರಯತ್ನ ಈ ಅಲೆಯನ್ನು ತಡೆಯಲು ಬುಷ್-ಶೆನಿ-ರೈಸ್ ಕೂಟ ಸತತವಾಗಿ ಪ್ರಯತ್ನ ನಡೆಸಿದೆ. ತನ್ನ ಹಿತಾಸಕ್ತಿ ಕಾಪಾಡಿ ಕೊಳ್ಳಲು ಅಮೆರಿಕ ಯಾವುದೇ ದುರ್ಮಾರ್ಗ ಹಿಡಿಯಲು ಹೇಸುವುದಿಲ್ಲ ಎನ್ನುವುದು ತಿಳಿದಿರುವ ವಿಷಯ. ಅದರಿಂದ ಹೊಸ ಹಾದಿಯಲ್ಲಿ ಅಡಿ ಇರಿಸಿರುವ ಲ್ಯಾಟಿನ್ ಅಮೆರಿಕದ ಈ ದೇಶಗಳು ಕಟ್ಟೆಚ್ಚರ ವಹಿಸಬೇಕಾಗಿದೆ.

ಲ್ಯಾಟಿನ್ ಅಮೆರಿಕದ ದೇಶಗಳ ಪ್ರಗತಿಪರ ಶಕ್ತಿಗಳನ್ನು ಅಧಿಕಾರದಿಂದ ಉರುಳಿಸಲು ಅಮೆರಿಕ ಈ ಪ್ರದೇಶದಲ್ಲಿ ಡಾಲರುಗಳ ಹೊಳೆ ಹರಿಸಿದೆ. ಬಲಪಂಥೀಯ ಬಂಡವಾಳಗಾರರನ್ನು ಎತ್ತಿಕಟ್ಟುತ್ತಿದೆ. ತೀವ್ರವಾದ ಅಪಪ್ರಚಾರದಲ್ಲಿ ತೊಡಗಿದೆ. ಈಚೆಗೆ ವೆನೆಜುವೇಲ ಸರಕಾರ ಸಾರ್ವಜನಿಕ ಆರೋಗ್ಯ ಸೇವೆಯಲ್ಲಿ ಕ್ಯೂಬಾದ ಅನುಭವವನ್ನು ಬಳಸಿಕೊಳ್ಳಲು ಅಲ್ಲಿಂದ ವೈದ್ಯರ ತಂಡವನ್ನೂ ಕರೆಸಿಕೊಂಡಿತ್ತು. ಅಮೆರಿಕ ಈ ವೈದ್ಯರುಗಳನ್ನು ಕ್ಯೂಬಾದ ಬೇಹು ಗಾರರು, ಕಮ್ಯುನಿಸ್ಟ್ ಪ್ರಚಾರಕರು ಎಂದು ಕರೆದು, ಅಬ್ಬರದ ಪ್ರಚಾರ ನಡೆಸಿ, ಜನರನ್ನು ಎತ್ತಿಕಟ್ಟಲು ಪ್ರಚೋದಿಸಲು ಪ್ರಯತ್ನಿಸಿತು. ಅಮೆರಿಕದ ಪ್ರಬಲ ಮಾಧ್ಯಮಗಳು ಇಂಥ ಪ್ರಚಾರದಲ್ಲಿ ತೊಡಗಿವೆ. ಇದನ್ನು ಎದುರಿಸಲು ಈಚೆಗೆ ವೆನೆಜುವೇಲ, ಉರುಗ್ವೆ, ಅರ್ಜೆಂಟೈನಾಗಳು ಜೊತೆಗೂಡಿ ತಮ್ಮದೇ ಆದ 'ಟೆಲೆಸೂರ್' ಎಂಬ ಹೊಸ ಇಲೆಕ್ಟ್ರಾನಿಕ್ ಮಾಧ್ಯಮ ವೊಂದನ್ನು ಪ್ರಾರಂಭಿಸಿವೆ. ಸಾಮ್ರಾಜ್ಯಶಾಹಿಗಳ ಸುಳ್ಳಿನ ಕಂತೆಯನ್ನು ಎದುರಿಸಲು ಇದು ಮೊದಲ ಪ್ರಯತ್ನ ಎಂದು ವೆನೆಜುವೇಲ ಅಧ್ಯಕ್ಷರು ಹೇಳಿದ್ದಾರೆ. ವಾಷಿಂಗ್ಟನ್ ಈ ಹಿನ್ನೆಲೆಯಲ್ಲಿ ಪ್ರಚಾರಕ್ಕಾಗಿ ಮೀಸಲಿಟ್ಟಿರುವ ಹಣವನ್ನು ೧೮ ಮಿಲಿಯ ಡಾಲರು ಗಳಿಗೆ ಹೆಚ್ಚಿಸಿದೆ. ಪ್ರಚಾರ ಸಮರ ಪ್ರಾರಂಭವಾಗಿದೆ. ಲ್ಯಾಟಿನ್ ಅಮೆರಿಕದ ದೇಶಗಳಲ್ಲಿನ ಈ ಬೆಳವಣಿಗೆ ಗಳನ್ನು ಜಗತ್ತಿನ ಪುರೋಗಾಮಿಗಳು ಸ್ವಾಗತಿಸಿದ್ದಾರೆ, ಬೆಂಬಲಿಸಿದ್ದಾರೆ. ಈ ದೇಶಗಳ ಯಶಸ್ಸು ಇತರ ದೇಶ ಗಳಿಗೆ ಮಾರ್ಗದರ್ಶಿಯಾಗುವುದರಲ್ಲಿ ಸಂದೇಹವಿಲ್ಲ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ
ಕತ್ತರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಇದು ಸ್ನೇಹವೊ, ಶರಣಾಗತಿಯೊ ?

ಸನತ್‌ಕುಮಾರ ಬೆಳಗಲಿ

**ಸ್ನೇ**ಹಕ್ಕೂ ಶರಣಾಗತಿಗೂ ಇರುವ ವ್ಯತ್ಯಾಸವೇನು ? ಸಮಾನ ಆಸಕ್ತಿ, ಸಮಬಲ, ಕಷ್ಟ-ಸುಖದಲ್ಲಿ ಸಹಸ್ಪಂದನ ಸ್ನೇಹದ ಸಂಕೇತ. ತದ್ವಿರುದ್ಧ ಹಿತಾಸಕ್ತಿ, ಅಸಹಾಯಕತೆಯ ಅನಿವಾರ್ಯತೆ, ಅಸಮ ಬಲ, ಶರಣಾಗತಿಯ ಪ್ರತೀಕ. ವ್ಯಕ್ತಿಗಳ ನಡುವೆ ರಾಷ್ಟ್ರಗಳ ನಡುವೆ ಕೂಡ ಈ ಸಾಮಾನ್ಯ ಸಂಗತಿ ಅನ್ವಯವಾಗುತ್ತದೆ. ಬೆಕ್ಕು ಇಲಿಯ ನಡುವೆ ಎಂದೂ ಸ್ನೇಹ ಕುಡಿಯೊಡೆಯುವುದಿಲ್ಲ. ಅದೇನಿದ್ದರೂ ಆಟ, ಪ್ರಾಣ ಸಂಕಟ ಮಾತ್ರ.

ಭಾರತ-ಅಮೆರಿಕೆಯ ನಡುವಿನ ಸ್ನೇಹ ಸಂವರ್ಧನೆಯ ಯತ್ನದ ಅರ್ಥವೇನು ? ಸಮಾನರ ನಡುವಿನ ಸ್ನೇಹವೋ ? ಅಸಹಾಯಕತೆಯ ಅಪಹರಣವೋ ? ಈ ಬಗ್ಗೆ ಈಗ ಜಿಜ್ಞಾಸೆ ಆರಂಭವಾಗಿದೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಈ ಸ್ನೇಹ-ಶರಣಾಗತಿಯ ಪ್ರಶ್ನೆ ಎದುರಾದಾಗ ಮೊದಲ ಪ್ರಧಾನಿ ಪಂಡಿತ ಜವಾಹರಲಾಲ್ ನೆಹರೂ ಉತ್ತರ ಕಂಡುಕೊಂಡಿದ್ದರು. ಯುಗೋಸ್ಲಾವಿಯದ ಮಾರ್ಷಲ್ ಟಿಟೋ ಹಾಗೂ ಈಜಿಪ್ಟಿನ ನಾಸೆರ್ ಜತೆ ಸೇರಿ ಯಾವುದೇ ಶಕ್ತಿ ಬಣಕ್ಕೂ ಸೇರದ ಅಲಿಪ್ತ ರಾಷ್ಟ್ರಗಳ ಕೂಟವೊಂದನ್ನು ಕಟ್ಟಿಕೊಂಡಿದ್ದರು. ಅಂದಿನ ಸಮಾಜವಾದಿ ಸೋವಿಯತ್ ರಷ್ಯಾದೊಂದಿಗಿನ ಅವರ ಸ್ನೇಹ ಸಮಾನ ಹಿತಾಸಕ್ತಿಗಳ ನೆಲೆಯ ಮೇಲೆ ಮೈದಾಳಿ ನಿಂತಿತ್ತು. ಪಾಕಿಸ್ತಾನ ಜತೆಗಿನ ವೈಷಮ್ಯದ ಸಂದರ್ಭದಲ್ಲಿ ಹಾಗೂ ಬಾಂಗ್ಲಾದೇಶ ಯುದ್ಧದ ಸಮಯದಲ್ಲಿ ರಷ್ಯಾ ಭಾರತದ ಪರವಾಗಿ ನಿಂತಿತ್ತು. ಭಾರತದ ಸಾರ್ವಜನಿಕ ರಂಗದ ಉದ್ಯಮಗಳ ಬಲವರ್ಧನೆಗೆ ರಷ್ಯಾ ಮುಕ್ತ ಹಸ್ತದಿಂದ ನೆರವನ್ನು ನೀಡಿತು. ಅದರಿಂದಾಗಿಯೇ ಅಮೆರಿಕನ್ ಸಾಮ್ರಾಜ್ಯಶಾಹಿ ಇಂದಿನಂತೆ ಅಂದು ಪುಂಡಾಟಿಕೆ ನಡೆಸಲು ಸಾಧ್ಯವಿರಲಿಲ್ಲ.

ಆದರೆ ಇಂದು ಸಮಾಜವಾದಿ ಸೋವಿಯತ್ ರಷ್ಯಾವಿಲ್ಲ. ಪೂರ್ವ ಯೂರೋಪಿನ ಸೋಷಲಿಸ್ಟ್ ದೇಶಗಳು ಚರಿತ್ರೆಯ ಪುಟಗಳನ್ನು ಸೇರಿವೆ. ಅಲಿಪ್ತ ಚಳುವಳಿಯ ಅಸ್ಥಿಪಂಜರ ಮಾತ್ರ ಉಳಿದಿದೆ. ಚೀನಾ ಮಾರುಕಟ್ಟೆ ಆರ್ಥಿಕತೆಯೊಂದಿಗೆ ಅನುಸಂಧಾನ ನಡೆಸಿದೆ. ಕ್ಯೂಬಾ, ವಿಯೆತ್ನಾಂಗಳು ತಮ್ಮದೇ ದಾರಿಯಲ್ಲಿ ಸಾಗಿವೆ. ಲ್ಯಾಟಿನ್ ಅಮೆರಿಕಾದಲ್ಲಿ ಎಡಪಂಥೀಯ ಸಸಿ ಮತ್ತೆ ಚಿಗುರುತ್ತಿದೆ. ಅರಸೊತ್ತಿಗೆಯ ವಿರುದ್ಧ ನೇಪಾಳದ ಮುಖ್ಯವಾಹಿನಿಯ ರಾಜಕೀಯ ಪಕ್ಷಗಳು ಹಾಗೂ ಮಾವೋವಾದಿಗಳು ಒಂದೇ ವೇದಿಕೆಗೆ ಬರುವ ಸ್ಪಷ್ಟ ಸೂಚನೆಗಳು ಗೋಚರಿಸುತ್ತಿವೆ. ಇಂಥ ಸನ್ನಿವೇಶದಲ್ಲಿ ಭಾರತದ ದಾರಿ ಯಾವುದು ?

ತಾವು ಸಾಗಿದ ದಾರಿ ಯಾವುದೆಂಬುದನ್ನು ಪ್ರಧಾನಿ ಮನಮೋಹನ್ ಸಿಂಗ್ ನಿತ್ಯವೂ ತೋರಿಸುತ್ತಿದ್ದಾರೆ. ಭಾರತ ಮಾರಾಟಕ್ಕಿಲ್ಲ ಎಂದು ಹೇಳುತ್ತಲೇ ಶ್ವೇತ ಭವನದ ಅಂಗಳದಲ್ಲಿ ಹೋಗಿ ನಿಂತಿದ್ದಾರೆ. ದಕ್ಷಿಣ ಏಷ್ಯಾದಲ್ಲಿ ನಿಮ್ಮ ಹಿತಾಸಕ್ತಿಯನ್ನು ನಾವು ಕಾಪಾಡುತ್ತೇವೆ ಚಿಂತಿಸಬೇಡಿ ಎಂದು ಜಾರ್ಜ್ ಬುಷ್ ಸಾಹೇಬರಿಗೆ ವಿನಯಪೂರ್ವಕವಾಗಿ ಹೇಳಿಬಂದಿದ್ದಾರೆ. ಇದೊಂದು ಮಹತ್ಸಾಧನೆ ಎಂಬಂತೆ ಕೆಲವರು ಹೊಗಳುತ್ತಿದ್ದಾರೆ. ಪ್ರಮುಖ ಪ್ರತಿಪಕ್ಷ ಬಿಜೆಪಿಗೂ ಇದರಿಂದ ಅಷ್ಟೊಂದು ಆತಂಕವಿಲ್ಲ. ಅಟಲ್‌ಜಿ ಅಧಿಕಾರದಲ್ಲಿದ್ದಾಗ ಮಾಡಿದ್ದು ಇದನ್ನೇ. ಎನ್‌ಡಿಎ ಹೋಗಿ ಯುಪಿಎ ಬಂದರೇನು ? ಶರಣಾಗತಿಗೆ ಯಾರಾದರೇನು ?

ಅಮೆರಿಕಾ ಯಾವಾಗಲೂ ಭಾರತದ ಪರವಾಗಿರಲಿಲ್ಲ. ಅದು ಯಾವ ರಾಷ್ಟ್ರದ ಪರವೂ ಅಲ್ಲ. ಎಲ್ಲ ರಾಷ್ಟ್ರಗಳೂ ತನ್ನ ಅಡಿಯಾಳಾಗಿರಬೇಕು. ಸರಕು ಮಾರುವ ಮಾರುಕಟ್ಟೆಯಾಗಿರಬೇಕು ಎಂಬುದು ಆ ರಾಷ್ಟ್ರದ ಬಯಕೆ. ಇಂಥ ಗುಲಾಮಗಿರಿಯನ್ನೊಪ್ಪದ ಕ್ಯೂಬಾ, ವಿಯೆತ್ನಾಮ್‌ಗಳ ನಾಶಕ್ಕೆ ಅಮೆರಿಕಾ ಹುನ್ನಾರ ನಡೆಸುತ್ತಲೇಬಂದಿದೆ. ಸ್ವತಂತ್ರ ರಾಷ್ಟ್ರಗಳ ಒಡನಾಡಿಯಾಗಿದ್ದ ಸಮಾಜವಾದಿ ಸೋವಿಯತ್ ರಷ್ಯಾದ ನಾಶದಲ್ಲಿ ಅದರ ಪಾತ್ರ ಕಡಿಮೆಯೇನಲ್ಲ. ಈ ರಾಕ್ಷಸಿ ದಾಹಕ್ಕೆ ಇತ್ತೀಚೆಗೆ ಬಲಿಯಾದ ದೇಶ ಇರಾಕ್.

ಇಂಥ ದೇಶದೊಂದಿಗೆ ಸ್ನೇಹಕ್ಕಾಗಿ ಚಾಚುವ ಹಸ್ತಕ್ಕೆ ಸಿಗುವುದು ಆತ್ಮೀಯ ಸ್ಪರ್ಶವಲ್ಲ; ಕೈಗಳಿಗೆ ಕಬ್ಬಿಣದ ಬೇಡಿ. ಅಂಥ ಬೇಡಿಗೆ ಎರಡು ಕೈಗಳನ್ನು ಮುಂದೆ ಮಾಡಿ ನಿಂತಿದ್ದಾರೆ ನಮ್ಮ ಪ್ರಧಾನಿ. ವೈಯಕ್ತಿಕವಾಗಿ ಮನಮೋಹನ್ ಸಿಂಗ್ ಸಜ್ಜನ ಮನುಷ್ಯ. ಚಿದಂಬರಂ ಕೂಡ. ಆದರೆ ಹಿಂದೊಮ್ಮೆ ವಿಶ್ವ ಬ್ಯಾಂಕ್ ಸೇವೆಯಲ್ಲಿದ್ದ ಅವರ ಮನೋಧರ್ಮ ಅವರನ್ನು ಈ ದಾರಿಗೆ ಕೊಂಡೊಯ್ಯುತ್ತಿದೆ. ಈ ಶರಣಾಗತಿಗೆ ಸ್ನೇಹ ಎಂಬ ವ್ಯಾಖ್ಯಾನವನ್ನು ನೀಡಲಾಗುತ್ತಿದೆ. ಎಡಪಕ್ಷಗಳ ಎಂದಿನ ಗೊಣಗಾಟ ಮುಂದುವರಿಯುತ್ತಿದೆ.

ಈ ಶರಣಾಗತಿಯ ಶಕೆ ಆರಂಭವಾಗಿದ್ದು ೧೯೯೧ರಲ್ಲಿ. ಪಿ. ವಿ. ನರಸಿಂಹ ರಾವ್ ಅಂದಿನ ಪ್ರಧಾನಿ. ಅಯೋಧ್ಯೆಯಲ್ಲಿ ಬಾಬರಿ ಮಸೀದಿಯನ್ನು ನೆಲಸಮಗೊಳಿಸುವ ಹಾಗೂ ದೇಶವನ್ನು ಅಮೆರಿಕನ್ ಸಾಮ್ರಾಜ್ಯಶಾಹಿ ಎಂಜಿನ್ನಿಗೆ ಜೋಡಿಸುವ ಕಾರ್ಯಗಳು ಏಕಕಾಲದಲ್ಲಿ ನಡೆದವು. ರಾಷ್ಟ್ರದ ಸ್ವಾವಲಂಬನೆಯ ಅಡಿಪಾಯಕ್ಕೆ ನೀಡಿದ ಮೊದಲ ಹೊಡೆತವನ್ನು ಮರೆಮಾಚಲೆಂದೇ ಕೋಮುವಾದದ ಉನ್ಮಾದವನ್ನು ಕೆರಳಿಸಲಾಯಿತು. ರಾಮಮಂದಿರಕ್ಕಾಗಿ ರಥಯಾತ್ರೆ ನಡೆಸಿದ ಸ್ವಯಂ ಘೋಷಿತ ರಾಷ್ಟ್ರಭಕ್ತರು ರಾಷ್ಟ್ರಮಂದಿರವನ್ನು ಜಾಗತಿಕ ಲೂಟಿಗಾರರ ವಶಕ್ಕೊಪ್ಪಿಸಲು ಪರೋಕ್ಷವಾಗಿ ನೆರವಾದರು.

ಅಮೆರಿಕೆಯೊಂದಿಗೆ ಮಾಡಿಕೊಳ್ಳುವ ಮಿಲಿಟರಿ ಒಪ್ಪಂದವೆಂದರೆ ದೇಶದ ಸಾರ್ವಭೌಮತ್ವವನ್ನು ಒತ್ತೆ ಇಡುವುದಲ್ಲದೆ ಬೇರೇನೂ ಅಲ್ಲ. ೧೯೯೧ರ ಜನವರಿಯಲ್ಲಿ ನರಸಿಂಹ ರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರ ಕೇಂದ್ರದಲ್ಲಿದ್ದಾಗ ಇದಕ್ಕೆ ಮೊದಲ ಚಾಲನೆ ದೊರಕಿತು. ೧೯೯೫ರಲ್ಲಿ ಒಪ್ಪಂದವೊಂದಕ್ಕೆ ಸಹಿ ಹಾಕಲಾಯಿತು. ಈ ಒಪ್ಪಂದದನ್ವಯ ಭಾರತದ ಸೇನಾಪಡೆ ಅಧಿಕಾರಿಗಳನ್ನು ವಿಶೇಷ ತರಬೇತಿಗಾಗಿ ಅಮೆರಿಕೆಗೆ ಕಳಿಸಲಾಯಿತು. ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರ ಬಂದ ನಂತರ ಈ ಬಾಂಧವ್ಯ ಇನ್ನಷ್ಟು ಬಲಗೊಂಡಿತು. ಅಮೆರಿಕಾ ಭಾರತದ ಸಹಜ ಮಿತ್ರ ಎಂದು ಅಂದಿನ ಪ್ರಧಾನಿ ವಾಜಪೇಯಿ ಹೇಳಿದರು.

ಅಫಘಾನಿಸ್ತಾನದ ಮೇಲೆ ಅಮೆರಿಕಾ ಯುದ್ಧ ಸಾರಿದಾಗ ಭಾರತದ ವಿಮಾನ ನಿಲ್ದಾಣ ಹಾಗೂ ಬಂದರುಗಳನ್ನು ಧಾರಾಳವಾಗಿ ಬಳಸಿಕೊಳ್ಳಲು ಎನ್‌ಡಿಎ ಸರ್ಕಾರ ಆಹ್ವಾನ ನೀಡಿತು. ಆದರೆ ಈ ಆಹ್ವಾನವನ್ನು ಕಡೆಗಣಿಸಿ ಪಾಕಿಸ್ತಾನದಲ್ಲಿದ್ದ ಈ ಸೌಕರ್ಯಗಳನ್ನು ವಾಷಿಂಗ್ಟನ್ ಬಳಸಿಕೊಂಡಿತು. ಆದರೂ ದಿಲ್ಲಿಯಲ್ಲಿ ಅಮೆರಿಕೆಯ ಬೇಹುಗಾರಿಕೆ ಸಂಸ್ಥೆ ಎಫ್‌ಬಿಐ ಸ್ಥಾಪನೆಗೆ ಅಟಲ್ ಸರ್ಕಾರ ಅವಕಾಶ ನೀಡಿತು.

ಈಗ ಮನಮೋಹನ್ ಸಿಂಗ್ ಅಮೆರಿಕೆಗೆ ಹೋಗಿ ಜಾರ್ಜ್ ಬುಷ್ ಜೊತೆ ಮಾಡಿಕೊಂಡುಬಂದ ಒಪ್ಪಂದ ಇನ್ನೂ ಭಯಾನಕವಾಗಿದೆ. ಈ ಒಪ್ಪಂದದ ಪ್ರಕಾರ ಇರಾಕ್‌ನಂಥ ದೇಶದ ಮೇಲೆ ಅಮೆರಿಕಾ ಯುದ್ಧ ಸಾರಿದರೆ ಇನ್ನು ಮುಂದೆ ಭಾರತೀಯ ಸೈನಿಕರು ಅಮೆರಿಕೆಯ ಸೈನಿಕರ ಜೊತೆ ಸೇರಿ ಕಾರ್ಯಾಚರಣೆ ನಡೆಸಬೇಕು. ಯಾರದೋ ಸ್ವಾರ್ಥಕ್ಕಾಗಿ ಯುದ್ಧದಲ್ಲಿ ಸಾಯಬೇಕು. ಇಲ್ಲಿ ವಿಶ್ವಸಂಸ್ಥೆಯ ಪ್ರಸ್ತಾಪವೇ ಬರುವುದಿಲ್ಲ. ಮುಂಚೆ ವಿಶ್ವಸಂಸ್ಥೆಯ ಉಸ್ತುವಾರಿಯಲ್ಲಿ ಇಂಥ ಬಹುರಾಷ್ಟ್ರೀಯ ಪಡೆಗಳು ಬೇರೆ ದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಈಗ ವಿಶ್ವಸಂಸ್ಥೆಯನ್ನು ಬದಿಗೊತ್ತಿ ಜಾರ್ಜ್ ಬುಷ್ ಜತೆ ಒಪ್ಪಂದ ಮಾಡಿಕೊಳ್ಳುವ ಅವಸರವೇನಿತ್ತು ?

ಎರಡನೆಯದಾಗಿ, ಅಮೆರಿಕೆಯ ಕ್ಷಿಪಣಿ ರಕ್ಷಣಾವ್ಯೂಹದಲ್ಲಿ ಭಾರತವೂ ಸೇರಿದೆ. ಅಂದರೆ ಏಷ್ಯಾ ಖಂಡದಲ್ಲಿ ಕಾಲೂರಲು ವಾಷಿಂಗ್ಟನ್‌ಗೆ ಮುಕ್ತ ಅವಕಾಶ ನೀಡಿದಂತಾಗಿದೆ. ಭಾರತವು ಕ್ಷಿಪಣಿ ರಕ್ಷಣಾ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಬಾರದೆಂದು ೧೯೯೦ರಲ್ಲಿ ಭಾರತದ ಮೇಲೆ ಒತ್ತಡ ತಂದಿದ್ದ ದೇಶವೊಂದು ಈಗ ಈ

ಅಮೆರಿಕದಂಥ ದೇಶದೊಂದಿಗೆ ಸ್ನೇಹಕ್ಕಾಗಿ ಚಾಚುವ ಹಸ್ತಕ್ಕೆ ಸಿಗುವುದು ಆತ್ಮೀಯ ಸ್ಪರ್ಶವಲ್ಲ; ಕೈಗಳಿಗೆ ಕಬ್ಬಿಣದ ಬೇಡಿ. ಅಂಥ ಬೇಡಿಗೆ ಕೈಗಳನ್ನು ಮುಂದೆ ಮಾಡಿ ನಿಂತಿದ್ದಾರೆ ನಮ್ಮ ಪ್ರಧಾನಿ. ಈ ಶರಣಾಗತಿಗೆ ಸ್ನೇಹ ಎಂಬ ವ್ಯಾಖ್ಯಾನ ನೀಡಲಾಗುತ್ತಿದೆ.

ಒಪ್ಪಂದಕ್ಕೆ ಬಂದಿರುವುದು ಭಾರತಕ್ಕೆ ಒಳ್ಳೆಯದನ್ನು ಮಾಡಲು ಅಲ್ಲ, ನಮ್ಮ ಕ್ಷಿಪಣಿ ತಂತ್ರಜ್ಞಾನದ ಮೇಲೆ ತನ್ನ ಹಿಡಿತ ಸಾಧಿಸಲು ಈ ಒಪ್ಪಂದಕ್ಕೆ ಅದು ಮುಂದಾಗಿದೆ.

ಅಮೆರಿಕೆಯೊಂದಿಗೆ ಮಾಡಿಕೊಂಡ ಇನ್ನೊಂದು ಒಪ್ಪಂದ ಇನ್ನೂ ಅಪಾಯಕಾರಿಯಾಗಿದೆ. ಈ ಭದ್ರತಾ ಒಪ್ಪಂದದನ್ವಯ ನಮ್ಮ ನೆಲ, ಜಲ, ಬಾಹ್ಯಾಕಾಶಗಳನ್ನು ಅಮೆರಿಕಾದ ಸೇನಾಪಡೆಗಳು ಹಾಗೂ ಬೇಹುಗಾರಿಕೆ ಸಂಸ್ಥೆಗಳಿಗೆ ದ್ವಾರಮುಕ್ತಗೊಳಿಸಿದಂತಾಗಿ ಅಮೆರಿಕಾದ ಹಿತಾಸಕ್ತಿಗಾಗಿ ಏಷ್ಯಾದ ಸುರಕ್ಷತೆಯನ್ನು ನಿರ್ದಾಕ್ಷಿಣ್ಯವಾಗಿ ಬಲಿಕೊಡಲಾಗಿದೆ. ಇದಕ್ಕಿಂತ ನಾಚಿಕೆಗೇಡಿನ ಸಂಗತಿ ಇನ್ನೊಂದಿಲ್ಲ.

ರಕ್ಷಣಾ ಸಾಮಗ್ರಿಗಳ ಜಂಟಿ ಉತ್ಪಾದನೆಗೂ ಪ್ರಧಾನಿ ಮನಮೋಹನ್ ಸಿಂಗ್ ಅಂಕಿತ ಹಾಕಿದ್ದಾರೆ. ಇದರರ್ಥ ವಾಷಿಂಗ್ಟನ್‌ನ ಯುದ್ಧ ಸಾಮಗ್ರಿಗಳನ್ನು ಅದರಲ್ಲೂ ಮುಖ್ಯವಾಗಿ ಎಫ್ ೧೬ ಯುದ್ಧ ವಿಮಾನಗಳನ್ನು ಭಾರತ ಖರೀದಿಸಲೇಬೇಕು. ಅಂದರೆ ಬುಷ್ ಸಾಹೇಬರ ಯುದ್ಧಾಸ್ತ್ರಗಳಿಗೆ ಭಾರತ ಮಾರುಕಟ್ಟೆಯಾದಂತಾಯಿತು. ಅಂದರೆ ರಾಜಕೀಯ ಕಾರಣಗಳಿಗಾಗಿ ಭಾರತವನ್ನು ಷರತ್ತಿನ ನೇಣುಗಂಬಕ್ಕೇರಿಸಲು ಯುಪಿಎ ಸರ್ಕಾರವೇ ಹಗ್ಗ ಕೊಟ್ಟಂತಾಯಿತು.

ಚೀಣಾ ಜಗತ್ತಿನಲ್ಲೇ ಪ್ರಬಲ ಶಕ್ತಿಯಾಗಿ ಬೆಳೆಯುತ್ತಿರುವುದು ಅಮೆರಿಕಾಗೆ ಹೊಟ್ಟೆಯುರಿಯುಂಟುಮಾಡಿದೆ. ಚೀಣಾಕ್ಕೆ ಶಸ್ತ್ರಾಸ್ತ್ರ ಪೂರೈಕೆ ಮೇಲೆ ಹೇರಿರುವ ನಿರ್ಬಂಧವನ್ನು ಸಡಿಲಿಸದಿರುವಂತೆ ಯೂರೋಪ್ ರಾಷ್ಟ್ರಗಳ ಮೇಲೆ ವಾಷಿಂಗ್ಟನ್ ಒತ್ತಡ ತರುತ್ತಿದೆ. ಭಾರತವನ್ನು ಚೀಣಾದ ವಿರುದ್ಧ ಅಸ್ತ್ರವಾಗಿ ಬಳಸಿಕೊಂಡು ಏಷ್ಯಾ ಖಂಡವನ್ನು ಕಬಳಿಸಲು ಬುಷ್ ಹುನ್ನಾರ ನಡೆಸಿದ್ದಾನೆ.

ಭಾರತವನ್ನು ಅಮೆರಿಕೆಯ ಬಾಲಕ್ಕೆ ಕಟ್ಟುವ ಈ ಪ್ರಕ್ರಿಯೆಯಿಂದ ಬಿಜೆಪಿ ನಾಯಕ ಆಡ್ವಾನಿಯವರಿಗೆ ತುಂಬ ಖುಷಿಯಾಗಿದೆ. ದಿಲ್ಲಿಯಲ್ಲಿ ಎಫ್‌ಬಿಐ ಸ್ಥಾಪನೆಗೆ ಅವಕಾಶ ನೀಡಿದ ಈ ರಾಷ್ಟ್ರಭಕ್ತರು ಸಿಐಎ ಮುಖ್ಯ ಕಚೇರಿಗೆ ಭೇಟಿ ನೀಡಿ ಪುನೀತರಾಗಿ ಬಂದಿದ್ದರು. ಅಂತಲೇ ಈ ದೇಶದ ಮುಖ್ಯ ವಿರೋಧ ಪಕ್ಷಕ್ಕೂ ಈ ಒಪ್ಪಂದದ ಬಗ್ಗೆ ಅಭ್ಯಂತರವಿಲ್ಲ.

ಅಫಘಾನಿಸ್ತಾನ ಹಾಗೂ ಇರಾಕ್ ಮೇಲೆ ಯುದ್ಧ ಸಾರಿದಾಗ ನೀವು ಭಯೋತ್ಪಾದಕರ ಪರವಾಗಿರುತ್ತೀರೋ ಅಥವಾ ನಮ್ಮ ಪರವಾಗಿರುತ್ತೀರೋ ಎಂದು ಜಾರ್ಜ್ ಬುಷ್ ಜಗತ್ತಿನ ರಾಷ್ಟ್ರಗಳನ್ನು ಬೆದರಿಸಿ ಕೇಳಿದ್ದಿದುಂಟು. ಧಣಿ, ನಿಮ್ಮ ಪರವಾಗಿರುತ್ತೇವೆ ಎಂದು ಭಾರತ ಈಗ ಹೇಳಿದೆ.

ಮಾರಾಟವಾಗಲು ಭಾರತದಲ್ಲಿ ಈಗ ಏನು ಉಳಿದಿದೆ ? ವಿಶ್ವ ವ್ಯಾಪಾರ ಒಪ್ಪಂದಕ್ಕೆ ಸಹಿ ಹಾಕುವ ಮೂಲಕ ದೇಶದ ಅಂತಃಸತ್ವವನ್ನೇ ಹರಾಜು ಹಾಕಲಾಗಿದೆ. ಈಗ ಅಮೆರಿಕಾದೊಂದಿಗೆ ರಕ್ಷಣಾ ಒಪ್ಪಂದ ಮಾಡಿಕೊಳ್ಳುವ ಮೂಲಕ ಜವಾಹರಲಾಲ್ ನೆಹರೂ ಅವರ ಅಲಿಪ್ತ ನೀತಿಗೆ ವಿದಾಯ ಹೇಳಲಾಗಿದೆ.

ಸಿಎಂಪಿಯನ್ನು ಉಲ್ಲಂಘಿಸಲಾಗಿದೆ ಎಂಬ ಎಡಪಕ್ಷಗಳ ಗೊಣಗಾಟದ ನಡುವೆ ಭಾರತವು ವಾಷಿಂಗ್ಟನ್ ಖೆಡ್ಡಾದಲ್ಲಿ ಬಿದ್ದಿದೆ. ಇದನ್ನು ಪ್ರತಿಭಟಿಸಿದರೆ ನ್ಯಾಯಕ್ಕಾಗಿ ಧ್ವನಿ ಎತ್ತಿದರೆ ದೇಶದ ತುಂಬ 'ಗುರುಗಾಂವ್'ಗಳು ನಿರ್ಮಾಣವಾಗುತ್ತವೆ. ಇದು ಇಂದಿನ ಸ್ಥಿತಿ.

**ಸನತ್‌ಕುಮಾರ ಬೆಳಗಲಿ**

ಎಲ್.ಎಫ್. ೧೭/೬, ಬಿ.ಡಿ.ಎ. ಫ್ಲಾಟ್, ಬಿ.ಟಿ.ಎಂ. ಲೇ ಔಟ್, ಬೆಂಗಳೂರು - ೫೬೦ ೦೭೬

## ವ್ರತ

ಮನುಷ್ಯರ ಸಂದಣಿಯ ನಡುವೆ ದಾರಿ ಮಾಡಿಕೊಂಡು
ಆತನೊಬ್ಬನೇ ಮುನ್ನುಗ್ಗುತಲಿದ್ದ
ಮನುಷ್ಯನನ್ನು ಹುಡುಕಲಿಕೆಂದು !
ಅವನಿಗಾಗಲೇ ತಿಳಿದಿತ್ತು
ತನ್ನ ಕಣ್ಣಂಗಳಕೆ ಕತ್ತಲಿಳಿಯುವ ಮುನ್ನ
ಪೂರ್ವ ದಿಗಂತದಲಿ
ಕೆಂದುರಿ ಹೊತ್ತಿಕೊಂಡಿರುವುದೆಂದು;
ಆಗಲೇ ತನ್ನ ತುಟಿಗಳು ತುತ್ತೂರಿಯಾಗಿರಬಹುದು
ಮಕ್ಕಳ ಮನರಂಜನೆಗೆಂದು;
ತನ್ನ ಕೈಗಳು ನಿರ್ವಿಕಾರದ ನಿಲುವು ತಳೆದಿರಲು
ಪಕ್ಷಿಗಳ ಕಂಗಳಲಿ ಭಯವೆಂಬುದೇ ಇರದು;
ತನ್ನ ಹೆಗಲ ಮೇಲೆ ಬೆಳೆದಿರಬಹುದು
ತನಷ್ಟಕ್ಕೇ ಬೆಳೆದ ವಿಶಾಲ ಆಲದ ಮರವೊಂದು;
ಅಷ್ಟರಲ್ಲೆ ಕಂಡಿದ್ದನವ
ತನ್ನ ಅಂತ್ಯದಲ್ಲಿನ ಮಣ್ಣ ಕಣಕಣದಲ್ಲಿ
ಅಂತ್ಯವಿಲ್ಲದ ಅನಂತೋತ್ಸವ !

ಆದರೆ, ಇವೆಲ್ಲ ಸಂಭವಿಸುವ ಮೊದಲೆ
ಕಾಣಲೇಬೇಕಿತ್ತು ಅವನು ಆ ಅವನ
ತನ್ನ ಅಂಗಿಗೆ ಗುಂಡಿ ಹಚ್ಚುವ ಬದಲು
ಮುಳ್ಳು ಚುಚ್ಚುತ್ತಿದ್ದವನ !
ಅವನು ತಾನವನ ಹುಡುಕುತಿರುವುದೇಕೆಂಬುದನೆ
ಮೆಲ್ಲಮೆಲ್ಲನೆ ಮರೆತೇಬಿಟ್ಟಂತಿತ್ತು ;
ತನ್ನ ಮರೆವಿನ ಅರಿವು ಸಹ ಅವಗಿಲ್ಲವಾಗಿತ್ತು !
ಯಾಕಂದರೆ ಆಗ ತಾನೇ ಆತ ಆಗುತಲಿದ್ದ
ಸ್ವತಂತ್ರ
ಉದ್ದೇಶಸಾಧನೆಯ ದ್ವಂದ್ವದ ತಲೆಭಾರದಿಂದ,
ಹರಿವ ನೀರಿನ ಹಾಗೆ ಅವನ ಮನ
ಚಲಿಸುತಲಿತ್ತು
ಅವನ ಹೆಜ್ಜೆಗಳ ಹಿಂದಿನಿಂದ !



ಮೂಲ ಮರಾಠಿ : ವಿಂದಾ ಕರಂದೀಕರ
ಕನ್ನಡಕ್ಕೆ : ಬಿ. ಎ. ಸನದಿ
'ಮಿಲನ್', ಹರವಟ್ಟ, ಕುಮಟ ಅಂಚೆ, ಉತ್ತರ ಕನ್ನಡ ಜಿಲ್ಲೆ - [illegible]





**ಪೇಟೆಂಟ್ ಪೆಡಂಭೂತ**

*ಮಾಧವ ಐತಾಳ್*

**ಪುಟ : ೨+೧೬೬** **ಬೆಲೆ : ರೂ. ೧೦೦**

**ಋತ ಪುಸ್ತಕ**, ನಂ. ೪೮, ೭ನೇ ತಿರುವು, ಈಜುಕೊಳ ವಿಸ್ತರಣ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

ಪೇಟೆಂಟ್ ಕಾಯಿದೆಯ ಸ್ವರೂಪ ಮತ್ತು ಅದು ಸಮಾಜದ ಮೇಲೆ ಬೀರಿರುವ ದುಷ್ಪರಿಣಾಮಗಳನ್ನು ಈ ಕೃತಿ ವಿವರವಾಗಿ ವಿಶ್ಲೇಷಿಸುತ್ತದೆ. ಸಾಕಷ್ಟು ಮಾಹಿತಿಗಳನ್ನು ಶ್ರಮವಹಿಸಿ ಲೇಖಕರು ಸಂಗ್ರಹಿಸಿಕೊಟ್ಟಿದ್ದಾರೆ. ಹಲವಾರು ಸಂಗತಿಗಳನ್ನು ಗಮನ ಸೆಳೆಯುವಂತೆ ಅಲ್ಲಲ್ಲಿ ಪುಸ್ತಕದ ಚೌಕಟ್ಟಿಗೆ ಹೊಂದಿಸಿ ಪತ್ರಿಕಾಬರಹದಂತೆ ಟಿಪ್ಪಣಿಗಳನ್ನು ಕೊಟ್ಟಿರುವುದು ಇಲ್ಲಿನ ವೈಶಿಷ್ಟ್ಯ. ವಸಾಹತೀಕರಣ ಹಾಗೂ ಪೇಟೆಂಟ್‌ಗಳ 'ಮಧುರ ಬಾಂಧವ್ಯ'ದ ಅಪಾಯವನ್ನು ಮಾಧವ ಐತಾಳ್ ಅವರು ಇತಿಹಾಸದ ಹಿನ್ನೆಲೆಯಲ್ಲಿ ಗುರುತಿಸುತ್ತಾರೆ. ಅಮೆರಿಕದ ಪೇಟೆಂಟ್ ಕಾಯಿದೆಯ ಹಿನ್ನೆಲೆಯ ಕುತಂತ್ರವನ್ನು ಲೇಖಕರು ವಿವರವಾಗಿ ಚರ್ಚಿಸಿದ್ದಾರೆ. 'ಬೌದ್ಧಿಕ ಚೌರ್ಯ ತಡೆಯಲೆಂದು ಸೃಷ್ಟಿಯಾದ ಕಾನೂನು ಕಳ್ಳತನವನ್ನು ಕಾನೂನುಬದ್ಧಗೊಳಿಸಿತು' ಎಂಬ ಮಾತು ಪೇಟೆಂಟ್ ಪೆಡಂಭೂತ ಸ್ವರೂಪವನ್ನು ಚೆನ್ನಾಗಿ ತಿಳಿಸುತ್ತದೆ. ಪೇಟೆಂಟ್‌ನ ಸ್ವರೂಪ-ಇತಿಹಾಸದ ಬಗ್ಗೆ ಈ ಕೃತಿ ಸಾಕಷ್ಟು ಸಂಗತಿಗಳನ್ನು ತಿಳಿಸಿದರೂ ನಿರೂಪಣೆಯ ಜೋಡಣೆಯಲ್ಲಿ ಇನ್ನಷ್ಟು ಕ್ರಮಬದ್ಧತೆ ಇರಬೇಕೆನಿಸುತ್ತದೆ.

**ನಿರುಕ್ತ** (ವಿಮರ್ಶಾ ಲೇಖನಗಳು)

*ಡಾ|| ಎಲ್. ಸಿ. ಸುಮಿತ್ರಾ*

**ಪುಟ : ೯೬** **ಬೆಲೆ : ರೂ. ೭೦**

**ಸಿವಿಜಿ ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಹಲವಾರು ವಿಮರ್ಶಾತ್ಮಕ ಬರಹಗಳನ್ನು ಒಳಗೊಂಡಿರುವ 'ನಿರುಕ್ತ' ಕೃತಿಯಲ್ಲಿ ಸ್ತ್ರೀವಾದಿ ದೃಷ್ಟಿಕೋನದ ಪ್ರಾಧಾನ್ಯತೆ ಕಂಡುಬಂದರೂ ಅದು ಒರಟುಒರಟಾಗಿ ಕಾಣದೆ ಸಾಹಿತ್ಯ ಕೃತಿಗಳ ಮಹತ್ವವನ್ನು ಅರಿಯಲು ಸಹಕರಿಸಿದೆ. ಕುವೆಂಪು ಬಗ್ಗೆ ಇಲ್ಲಿ ಮೂರು ಲೇಖನ ಗಳಿವೆ. ಒಂದು ಲೇಖನ ಕಾನೂರು ಹೆಗ್ಗಡಿತಿ ಮತ್ತು ವಾಸುದೇವನ್ ನಾಯರ್ ಅವರ 'ಚೌಕಟ್ಟಿನ ಮನೆ' ಕಾದಂಬರಿ ಕುರಿತ ತೌಲನಿಕ ವಿಮರ್ಶೆ. ಇಲ್ಲಿನ ಬರಹಗಳು ಸಾಹಿತ್ಯ ಕೃತಿಗಳ ಪ್ರಾಮುಖ್ಯತೆಯನ್ನು ಪ್ರಾಥಮಿಕ ಹಂತದಲ್ಲಿ ಗುರುತಿಸುತ್ತವೆಯೇ ಹೊರತು ಅವುಗಳ ಆಳವಾದ ವಿಶ್ಲೇಷಣೆಗೆ ತೊಡಗುವುದಿಲ್ಲ. ಆದರೂ ಸರಳವಾದ ವಿಮರ್ಶೆಯ ಭಾಷೆ ಕೆಲವು ಅಂಶಗಳನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇಲ್ಲಿನ ಲೇಖನಗಳಲ್ಲಿ ತೇಜಸ್ವಿಯವರ ಪತ್ನಿ ರಾಜೇಶ್ವರಿಯವರ ಸಂದರ್ಶನವೊಂದು ಇದ್ದು ವಿಭಿನ್ನವಾಗಿ ಗಮನ ಸೆಳೆಯುತ್ತದೆ. ಎಷ್ಟೋ ಜನ 'ಬರಹಗಾರ'ರೆನಿಸಿಕೊಂಡಿರುವವರಿಗಿಂತ ಹೆಚ್ಚಿನ ಸೂಕ್ಷ್ಮ ಗ್ರಹಿಕೆ ಇಲ್ಲಿ ಕಾಣುತ್ತದೆ.

**ಬಸವಣ್ಣನವರ ದೇವರು**

*ರಂಜಾನ್ ದರ್ಗಾ*

**ಪುಟ : ೬೪** **ಬೆಲೆ : ರೂ. ೧೫**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಹನ್ನೆರಡನೆಯ ಶತಕದಲ್ಲಿ ಬಸವಣ್ಣ ಬುದ್ಧನಂತೆ ಸಾಮಾನ್ಯ ಜನರಲ್ಲಿ ಆತ್ಮಶಕ್ತಿಯನ್ನು, ವೈಚಾರಿಕತೆಯನ್ನು ಪ್ರಚೋದಿಸಿದವರು. ಅವರು ದೇವರ ಬಗ್ಗೆ ಬರೆದ ವಚನಗಳನ್ನು ರಂಜಾನ್ ದರ್ಗಾ ಅವರು ಶ್ರದ್ಧೆಯಿಂದ ಪರಿಶೀಲಿಸಿ ಅಲ್ಲಿನ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ಬಸವಣ್ಣನವರ ಕೆಲವು ವಚನಗಳು ಕಾವ್ಯದ ದೃಷ್ಟಿಯಿಂದ ಮುಖ್ಯವೆನಿಸಿ ಜನಪ್ರಿಯವಾಗಿವೆ. ಆದರೆ ಇನ್ನೆಷ್ಟೋ ವಚನಗಳು ಸಾಮಾಜಿಕ ಚಿಂತನೆಗಳ ದೃಷ್ಟಿಯಿಂದ ಬಹಳ ಮುಖ್ಯವಾಗಿವೆ. ಬಸವಣ್ಣನವರ ದೇವರ ಕಲ್ಪನೆ ಕಾಯವೆಂಬ ಕೈಲಾಸದಲ್ಲಿರುವ ಸಂಗತಿಯನ್ನು ದರ್ಗಾ ಅವರು ಹಲವು ವಚನಗಳ ಮೂಲಕ ಸಮರ್ಥಿಸಿದ್ದಾರೆ. ಕೆಲವು ಕಡೆ ಆಧುನಿಕ ಚಿಂತನೆಗಳನ್ನು ವಚನಗಳಿಗೆ ಆರೋಪಿಸಿರುವುದು ಕಂಡುಬರುತ್ತದೆ. ಅರ್ಥಶಾಸ್ತ್ರದ ದೃಷ್ಟಿಯಿಂದ ವಚನಗಳ ವಿಶ್ಲೇಷಣೆ ಒಂದು ಅಧ್ಯಾಯದಲ್ಲಿ ಕಾಣುತ್ತದೆ. ಬಸವಣ್ಣನವರ ವಚನಗಳ ಚಿಂತನೆ ಇಂದಿಗೂ ಪ್ರಸ್ತುತ ಎಂಬುದನ್ನು ಈ ಪುಸ್ತಕ ತಿಳಿಸಿಕೊಡುತ್ತದೆ.

**ಮಹಾದೇವಿಯಕ್ಕನ ಮದುವೆ**

*ಶ್ರೀ ಪಿ. ಎಸ್. ಪಾಟೀಲ*

**ಪುಟ : xviii+೧೪೦** **ಬೆಲೆ : ರೂ. ೫೦**

ದಿ ಬಂಥನಾಳ ಶ್ರೀ ವೃಷಭಲಿಂಗೇಶ್ವರ, ವಿದ್ಯಾವರ್ಧಕ ಟ್ರಸ್ಟ್, ಲಚ್ಯಾಣ, ಜಿಲ್ಲಾ: ವಿಜಾಪುರ

ವಚನ ಚಳುವಳಿ ಮತ್ತು ಸಾಹಿತ್ಯ ತನ್ನ ಕ್ರಾಂತಿಕಾರಕ ಗುಣಗಳಿಂದ ಹಲವಾರು ಸಂಶೋಧನಾತ್ಮಕ ಕೃತಿಗಳಿಗೆ ಮತ್ತು ಸೃಜನಶೀಲ ಸಾಹಿತ್ಯ ಸೃಷ್ಟಿಗೆ ಪ್ರೇರಣೆಯನ್ನುಂಟು ಮಾಡಿದೆ. ಭಕ್ತಿ ಚಳುವಳಿಯ ಒಂದು ಭಾಗವಾಗಿ ಮಹಾದೇವಿಯಕ್ಕನನ್ನು ಸಾಮಾನ್ಯವಾಗಿ ಗುರುತಿಸಲಾಗಿದೆ. ಆದರೆ ಇಲ್ಲಿನ ಲೇಖಕರು ಮಾರ್ಕ್ಸ್‌ವಾದೀ ಭೌತಿಕ ಅಧ್ಯಯನದ ಹಿನ್ನೆಲೆಯಲ್ಲಿ ಮಹಾದೇವಿಯಕ್ಕನ ಮದುವೆಯ ವಾಸ್ತವ ಸಂಗತಿ ಏನಿರಬಹುದೆಂದು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ರಾಜತ್ವ, ಮದುವೆಯಂತಹ ವ್ಯವಸ್ಥೆಯನ್ನು ತಿರಸ್ಕರಿಸಿದ ಅಕ್ಕಮಹಾದೇವಿಯ ವಚನಗಳ ಹಿನ್ನೆಲೆಯಲ್ಲಿ ಪಾಟೀಲ್ ಅವರ ಚಿಂತನೆ ಕಂಡುಬರುತ್ತದೆ. ಪಾಳೇಗಾರಿಕೆಯ ಪ್ರತೀಕವಾಗಿದ್ದ ಕೌಶಿಕನನ್ನು ಅಕ್ಕಮಹಾದೇವಿ ತಿರಸ್ಕರಿಸಿ ಪರ್ಯಾಯ ವಿವಾಹ ಪದ್ಧತಿಯನ್ನು ವರ್ಗಪೂರ್ವ ಸಮಾಜದ ಗಣ ಸಮಾಜ ಪದ್ಧತಿಯನ್ನು ಅನುಸರಿಸಿದಳು ಎಂಬ ತೀರ್ಮಾನಕ್ಕೆ ಲೇಖಕರು ಬಂದಿದ್ದಾರೆ. ಈ ಬಗ್ಗೆ ಇನ್ನೂ ಹೆಚ್ಚಿನ ಚರ್ಚೆ ಅವಶ್ಯಕ.

**ನಿಜದ ನೆಲೆ** (ಕವನ ಸಂಕಲನ)

*ವಸಂತ ಬನ್ನಾಡಿ*

**ಪುಟ : ೨೦+೮೬** **ಬೆಲೆ : ರೂ. ೫೦**

**ತಿಂಗಳ ಬೆಳಕು ಪ್ರಕಾಶನ**

ಕುಂದಾಪುರ - ೫೭೬ ೨೦೧

ವಸಂತ ಬನ್ನಾಡಿ ಅವರ 'ನಿಜದ ನೆಲೆ' ಕವನ ಸಂಗ್ರಹದ ಹೆಸರು ಸ್ವಲ್ಪ ಭಾರವೆನಿಸಿದರೂ ಕವನಗಳ ಓದು ದಟ್ಟವಾದ ಕಾವ್ಯಾನುಭವವನ್ನು ಉಂಟುಮಾಡುತ್ತದೆ. ಹಲವಾರು ಕವನಗಳಲ್ಲಿ ಸೂಕ್ಷ್ಮವಾದ ಚಿಂತನೆಗಳನ್ನು ಕಾಣಬಹುದು. ಬ್ರೆಕ್ಟ್‌ನ ಹಲವು ಕವನಗಳ ಉತ್ತಮ ಅನುವಾದ ಇಲ್ಲಿದೆ. ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಕೆ. ಫಣಿರಾಜ್ ಅವರು ಗುರುತಿಸಿರುವಂತೆ ಈ ಸಂಕಲನದ ಬಹುಪಾಲು ಪದ್ಯಗಳು ಭಾವ ಸ್ವಗತಗಳು. ಹಲವು ಕಿರುಕವಿತೆಗಳು ರಾಮಾನುಜನ್, ಲಂಕೇಶ್ ಅವರ ಪದ್ಯಗಳಂತೆ ಗಮನ ಸೆಳೆಯುತ್ತವೆ. ಆರೋಗ್ಯಕರ 'ರಾಜಕೀಯ ಚಿಂತನೆ'ಯನ್ನು 'ದಿ ಗ್ರೇಟ್ ಡಿಕ್ಟೇಟರ್ ಮತ್ತೊಮ್ಮೆ ನೋಡಿದಾಗ' ಕವನ ವ್ಯಕ್ತಪಡಿಸಿದೆ. 'ಮಾತುಗಳು ಏನನ್ನೂ ಹೇಳಲಾರವು' ಕಾವ್ಯ ಸ್ವರೂಪವನ್ನು ಗಂಭೀರವಾಗಿ ಚಿಂತಿಸುವ ಕವನ. ಇತ್ತೀಚೆಗೆ ಬಂದ ಉತ್ತಮ ಕವನ ಸಂಕಲನಗಳಲ್ಲಿ 'ನಿಜದ ನೆಲೆ' ಸಹ ಒಂದು.

**ಲದೇಣಿಯಾ** (ಕಥಾ ಸಂಕಲನ)

*ಕೃಷ್ಣನಾಯಕ್*

**ಪುಟ : xvi+೧೧೨** **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩



ಲಂಬಾಣಿ ಸಮುದಾಯ ಕರ್ನಾಟಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿಯೂ ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ. ಕೃಷ್ಣನಾಯಕ್ ಅವರು ಈ ಸಂಕಲನದಲ್ಲಿ ಲಂಬಾಣಿ ಸಮುದಾಯದ ಬದುಕಿನ ಕ್ರಮವನ್ನು ಒಂಬತ್ತು ಕತೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. 'ಲದೇಣಿಯಾ' ಅಂದರೆ ದನಗಳ ಮೇಲೆ ಹೇರು ಸಾಗಿಸುವುದು ಎಂದು ಅರ್ಥ. ಅದೇ ಹೆಸರಿನ ಒಂದು ಕತೆ ಇಲ್ಲಿದೆ. ಗೀತಾ ನಾಗಭೂಷಣ, ಮಲ್ಲಿಕಾರ್ಜುನ ಹಿರೇಮಠರ ಕಾದಂಬರಿಗಳಂತೆ ಇಲ್ಲಿನ ಕತೆಗಳು ಲಂಬಾಣಿ ಸಂಸ್ಕೃತಿಯ ಅನನ್ಯತೆಯನ್ನು ಚಿತ್ರಿಸುತ್ತವೆ. ಆದರೆ ಇಲ್ಲಿನ ಬಹುಪಾಲು ಕತೆಗಳಲ್ಲಿ ಬಂಜಾರ ಸಂಸ್ಕೃತಿಯ ವಿಶಿಷ್ಟತೆಯನ್ನು ಆಡುಮಾತಿನ ಶೈಲಿಯಲ್ಲಿ ಚಿತ್ರಿಸುವ ತವಕ ಮೇಲುಗೈಯಾಗಿದ್ದು ಪಾತ್ರಗಳ ಶೋಧನೆ ಕಡಿಮೆಯಾಗಿದೆ. ಕತೆಗಿರಬೇಕಾದ ಕಲಾತ್ಮಕ ಚೌಕಟ್ಟಿನ ಕೊರತೆ ಕಾಣುತ್ತದೆ.

**– ಎಚ್ಚೆಸ್ಸೆಮ್**

# ದಾಂಪತ್ಯ ವಿರಸಕ್ಕೆ ಕಾರಣ-ಪರಿಹಾರ

ಡಾ|| ಸಿ. ಆರ್. ಚಂದ್ರಶೇಖರ್

ದಾಂಪತ್ಯ ಜೀವನ ಸುಖಮಯವಾಗಿರಬೇಕೆಂದು ಪ್ರತಿಯೊಬ್ಬ ಗಂಡ ಹೆಂಡತಿ ನಿರೀಕ್ಷಿಸುತ್ತಾರೆ. ವಿಭಿನ್ನ ಹಿನ್ನೆಲೆಯಿಂದ ಬಂದಂಥ ಗಂಡ-ಹೆಂಡತಿಯರ ನಡುವೆ ಭಿನ್ನ ಅಭಿರುಚಿ ಅಭಿಪ್ರಾಯ ಸಹಜವಾದದ್ದೇ. ಇದರ ನಡುವೆಯೂ ಸಾಮರಸ್ಯ ಸಾಧಿಸಲು ಪ್ರಯತ್ನ ಮಾಡಬೇಕು. ಆದರೆ ಅನೇಕ ಕಾರಣಗಳಿಂದ ವಿರಸ ದಾಂಪತ್ಯದಿಂದ ಬಳಲುವವರ ಸಂಖ್ಯೆ ಹೆಚ್ಚಾಗುತ್ತಿರುವುದು ಆತಂಕದ ವಿಚಾರ. ಪರಸ್ಪರ ಪೂರಕವಾಗಿ ಪ್ರೀತಿ ವಿಶ್ವಾಸದಿಂದ ಬದುಕಬೇಕಾದ ಗಂಡ-ಹೆಂಡತಿ, ಶತ್ರುಗಳಂತೆ ಪರಸ್ಪರ ದ್ವೇಷ ಮಾಡುತ್ತಾ ಹೀನಾಯ ತಿರಸ್ಕಾರಗಳಿಂದ ಜಗಳವಾಡುತ್ತಾ, ನಿತ್ಯ ನೋವುಪಡುತ್ತಾರೆ. ಒಟ್ಟಿಗೆ ಇರಲೂ ಆಗದೇ, ದೂರವಾಗಲೂ ಸಾಧ್ಯವಾಗದೇ ತ್ರಿಶಂಕು ಸ್ಥಿತಿಯಿಂದ ಬಳಲುತ್ತಾರೆ. ವಿವಾಹ ವಿಚ್ಛೇದನ ಪಡೆಯುವುದು ನಮ್ಮ ದೇಶದ ಕಾನೂನಿನ ಪ್ರಕಾರ ಸುಲಭವಲ್ಲ. ಪರಸ್ಪರ ಸ್ವಇಚ್ಛೆಯಿಂದ ಗಂಡ-ಹೆಂಡತಿ ವಿಚ್ಛೇದನ ಕೋರಿದರೂ, ವಿಚ್ಛೇದನಕ್ಕಾಗಿ ಆರು ತಿಂಗಳು ಕಾಯಬೇಕು. ಬೇರೆಯಾಗಬೇಡಿ, ಒಟ್ಟಿಗೆ ಇರಲು ಪ್ರಯತ್ನಮಾಡಿ, ರಾಜಿ ಮಾಡಿಕೊಳ್ಳಿ ಎಂಬುದೇ ಫ್ಯಾಮಿಲಿ ಕೋರ್ಟ್‌ಗಳ ಮೂಲಮಂತ್ರ. ಇನ್ನು ಗಂಡನೋ, ಹೆಂಡತಿಯೋ ವಿಚ್ಛೇದನ ಬೇಡವೆಂದರೆ, ಇನ್ನೊಬ್ಬರು ಬೇಕು ಎಂದರೆ ಸಮಸ್ಯೆ ಕಗ್ಗಂಟಾಗಿಬಿಡುತ್ತದೆ. ಗುಣವಾಗದ ಮಾನಸಿಕ ಕಾಯಿಲೆ, ಅಪಾಯಕಾರಿ ಪ್ರಾಣಾಂತಿಕ ಹಾಗೂ ಒಬ್ಬರಿಂದ ಒಬ್ಬರಿಗೆ ಹರಡುವ ಕಾಯಿಲೆ, ಷಂಡತ್ವ, ಬಂಜೆತನ, ಶಾರೀರಿಕ ಮತ್ತು ಮಾನಸಿಕ ಕ್ರೌರ್ಯದ ಆಧಾರದ ಮೇಲೆ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಬಹುದು. ಆದರೆ ಅರ್ಜಿ ಯಾರು ಸಲ್ಲಿಸುತ್ತಾರೋ, ಅವರೇ ಈ ಕಾಯಿಲೆ ಸ್ಥಿತಿಗೆ ಅಗತ್ಯವಾದ ವೈದ್ಯ ದೃಢೀಕರಣ ಪತ್ರವನ್ನು ಸಲ್ಲಿಸಬೇಕು, ದಾಂಪತ್ಯದ ಮುಂದುವರಿಕೆ ಏಕೆ ಸಾಧ್ಯವಿಲ್ಲ ಎಂದು ಕೋರ್ಟ್‌ಗೆ ಮನವರಿಕೆ ಮಾಡಿಕೊಡಬೇಕು. ಇದಕ್ಕೆ ದೀರ್ಘಕಾಲ ಬೇಕಾಗುತ್ತದೆ. ವಿವಾದಕ್ಕೆ ಆಸ್ಪದವಿಲ್ಲದೆ, ಆರೋಪಿಸಿ ಕಾಯಿಲೆ ಇದೆ ಎಂದು ಸಾಬೀತು ಮಾಡಬೇಕು. ಗಂಡನೋ/ಹೆಂಡತಿಯೋ ಈ ರೀತಿಯ ಪರೀಕ್ಷೆಗೆ ಸಿದ್ಧವಿಲ್ಲವಾದರೆ, ಪ್ರಕರಣ ನಿಂತಲ್ಲೇ ನಿಂತುಬಿಡುತ್ತದೆ. ಪ್ರಕರಣ ಕೋರ್ಟಿನಲ್ಲಿ ವರ್ಷಾನುಗಟ್ಟಳೆ ಎಳೆದಾಡಲ್ಪಡುತ್ತದೆ. ಲಾಯರುಗಳಿಗೆ ಕೆಲಸ-ಫೀಸ್ ಲಾಭವಾದರೆ, ಗಂಡ-ಹೆಂಡತಿಯರಿಗೆ ಮನಃಕ್ಲೇಶ, ಹಿಂಸೆ, ನಾನಾ ಬಗೆಯ ಅನಾನುಕೂಲ, ನೋವು. ಹೀಗಿದ್ದರೂ, ಫ್ಯಾಮಿಲಿ ಕೋರ್ಟ್‌ಗೆ ವಿಚ್ಛೇದನಕ್ಕಾಗಿ ಅರ್ಜಿ ಸಲ್ಲಿಸುವವರ ಸಂಖ್ಯೆ ವರ್ಷೇ ವರ್ಷೇ ಹೆಚ್ಚುತ್ತಿರುವುದು ಆತಂಕಕಾರಿಯಾಗಿದೆ.

ದಾಂಪತ್ಯ ವಿರಸಕ್ಕೆ ಸಾಮಾನ್ಯ ಕಾರಣಗಳೇನು? ಅವನ್ನು ನಿವಾರಿಸಲು ಸಾಧ್ಯವೇ? ಗಂಡ-ಹೆಂಡತಿಯ ನೋವು-ನಿರಾಶೆ ಬಳಲಿಕೆಗಳಿಗೆ ವಿರಾಮ ಹೇಳಲು ಆಗದೇ? ದಾಂಪತ್ಯ ವಿರಸ ಹೆಚ್ಚಿನ ಪ್ರಕರಣಗಳಲ್ಲಿ ನಿವಾರಣೀಯ ಎಂಬುದು ಗಮನಾರ್ಹ.

**ವಿರಸಕ್ಕೆ ಕಾರಣಾಂಶಗಳು :**

೧. **ಬಲವಂತದ ಮದುವೆ :** ಗಂಡಿಗೋ ಹೆಣ್ಣಿಗೋ ಮದುವೆಯು ಬಲವಂತಕ್ಕೆ, ಒತ್ತಾಯಕ್ಕೆ, ಇಲ್ಲವೇ ಇನ್ನಿತರ ಕಾರಣಗಳಿಗಾಗಿ ಆಗಿದ್ದಿರಬಹುದು. ಆಗ ಮಾನಸಿಕವಾಗಿ, ಜೀವನ ಸಂಗಾತಿಯನ್ನು 'ಸಂಗಾತಿ' ಎಂದು ಒಪ್ಪಿಕೊಳ್ಳಲು ಆಗದೇ ವಿರಸ ಪ್ರಾರಂಭವಾಗುತ್ತದೆ. 'ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು' ಎಂಬ ಗಾದೆಯಂತೆ ಗಂಡ-ಹೆಂಡತಿ ಪರಸ್ಪರ, ಮಾತು-ವರ್ತನೆ-ಕ್ರಿಯೆ-ಪ್ರತಿಕ್ರಿಯೆಗಳಲ್ಲಿ ಹೆಜ್ಜೆಹೆಜ್ಜೆಗೂ ತಪ್ಪು ಕಂಡುಹಿಡಿಯುತ್ತಾ, ದೂರುತ್ತಾ, ದೂಷಣೆ ಮಾಡುತ್ತಾ ನಿತ್ಯ ರಗಳೆ ಮಾಡಿಕೊಳ್ಳುತ್ತಾರೆ.

೨. **ವಿವಾಹಪೂರ್ವ ಅಥವಾ ವಿವಾಹೋತ್ತರ 'ಲೈಂಗಿಕ ಸಂಬಂಧಗಳು' ಅಥವಾ ಅವುಗಳ ಬಗ್ಗೆ ಅನುಮಾನಗಳು :** ಪ್ರತಿಯೊಬ್ಬ ಪುರುಷ ಹಾಗೂ ಸ್ತ್ರೀ, ತನ್ನನ್ನು ಮದುವೆಯಾಗಿರುವ ವ್ಯಕ್ತಿ ಸಚ್ಚಾರಿತ್ರ್ಯದಿಂದ, ಇತರ ಪುರುಷ-ಸ್ತ್ರೀಯನ್ನು ಕಣ್ಣೆತ್ತಿ ನೋಡಬಾರದೆಂದು, ದೈಹಿಕವಾಗಿ ಮಾನಸಿಕವಾಗಿ ಶುದ್ಧವಾಗಿರಬೇಕೆಂದು ನಿರೀಕ್ಷಿಸುತ್ತಾರೆ. ಈ ಬಗ್ಗೆ ಏನಾದರೂ ಅನುಮಾನ ಬಂದರೆ ಅಥವಾ ಸತ್ಯ-ಸಾಕ್ಷ್ಯಾಧಾರಗಳು ಸಿಕ್ಕಿದರೆ, ವಿರಸ 'ಸ್ಫೋಟ'ಗೊಳ್ಳುತ್ತದೆ.

೩. **ಹಣಕಾಸಿನ ಸಮಸ್ಯೆಗಳು :** ವರದಕ್ಷಿಣೆ, ಉಡುಗೊರೆ, ಹಣ-ಆಸ್ತಿ ಪಾಸ್ತಿ ಇತ್ಯಾದಿ ಬಗ್ಗೆ ಗಂಡ ಮತ್ತು ಆತನ ಮನೆಯವರು ಹಾಗೂ ಹೆಂಡತಿ ಮತ್ತು ಮನೆಯವರು ಜಗಳ-ಮನಸ್ತಾಪ ಮಾಡಿಕೊಳ್ಳುವುದು ಅಥವಾ ಹೆಂಡತಿ ಸಂಪಾದನೆ ಮಾಡುತ್ತಿದ್ದರೆ, ಆಕೆಯ ಆದಾಯದ ಬಗ್ಗೆ ಯಾರು ಅಧಿಕಾರ ಚಲಾಯಿಸಬೇಕು, ಹಣಕಾಸಿನ ಅಧಿಕಾರ ಯಾರದ್ದಿರಬೇಕು ಎಂಬುದರ ಬಗ್ಗೆ ವಾದ-ವಿವಾದಗಳು.

೪. **ಗಂಡ ಅಥವಾ ಹೆಂಡತಿಯ ಅನಾರೋಗ್ಯಕರ ಹವ್ಯಾಸ - ಚಟಗಳು :** ಗಂಡ ಧೂಮಪಾನ ಮಾಡುವುದು, ಮದ್ಯಪಾನ ಮಾಡುವುದು, ಜೂಜಾಡುವುದು, ಇಸ್ಪೀಟ್ ಆಡುವುದು, ಕ್ಲಬ್‌ಗಳಿಗೆ ಹೋಗುವುದು ಮತ್ತು ಸ್ನೇಹಿತರೊಂದಿಗಿನ ಚಟುವಟಿಕೆ – ಮನರಂಜನೆಗೇ ಹೆಚ್ಚು ಪ್ರಾಶಸ್ತ್ಯ ಮತ್ತು ಸಮಯವನ್ನು ಕೊಡುವುದು. ಹೆಂಡತಿಯು ಸಿನೆಮಾ, ಸ್ನೇಹಿತೆಯರೊಂದಿಗೆ ಓಡಾಟ, ಶಾಪಿಂಗ್ ಚಟ ಇತ್ಯಾದಿ.

೫. **ಗಂಡ-ಹೆಂಡತಿಯ ಅನಾರೋಗ್ಯ ಮತ್ತು ಸಾಮಾಜಿಕ ಕಳಂಕವನ್ನುಂಟುಮಾಡುವ ಕಾಯಿಲೆಗಳು :** ಗಂಡನಿಗೋ ಅಥವಾ ಹೆಂಡತಿಗೋ ಫಿಟ್ಸ್, ಮಾನಸಿಕ ಕಾಯಿಲೆ, ಕ್ಷಯ, ಕುಷ್ಟ, ಬಿಳಿಮಚ್ಚೆ (ವಿಟಿಲಿಗೋ), ಕ್ಯಾನ್ಸರ್ ಮುಂತಾದವು ಇದ್ದರೆ, ಅದು ವಿರಸಕ್ಕೆ ಎಡೆಮಾಡಿಕೊಡುತ್ತದೆ.

೬. **ಅಧಿಕಾರಕ್ಕಾಗಿ ಪೈಪೋಟಿ :** ಕುಟುಂಬದ ಅಧಿಕಾರಕ್ಕೆ ಗಂಡ ಮತ್ತು ಹೆಂಡತಿ ಸ್ಪರ್ಧಿಸಬಹುದು. ಸಣ್ಣ ಅಥವಾ ದೊಡ್ಡ ವಿಷಯಗಳ ಬಗ್ಗೆ ಯಾರ



ಮಾತನ್ನು ಯಾರು ಕೇಳಬೇಕು ಎಂಬುದರ ಬಗ್ಗೆ ವಾದ-ವಿವಾದಗಳು ಏಳಬಹುದು. ನಾಯಕತ್ವಕ್ಕಾಗಿ ಹೋರಾಟ ನಡೆಯಬಹುದು.

೭. **ದೋಷಪೂರ್ಣ ವ್ಯಕ್ತಿತ್ವ: ಗಂಡ ಅಥವಾ ಹೆಂಡತಿಯ ವ್ಯಕ್ತಿತ್ವದಲ್ಲಿ ದೋಷ ದುರ್ಬಲತೆಗಳು :** ಸ್ವಾರ್ಥಿ ಹಾಗೂ ಸಮಾಜವಿರೋಧಿ ವ್ಯಕ್ತಿತ್ವ (dis-social personality disorder or psychopathic personality disorder), ಉನ್ಮಾದದ ವ್ಯಕ್ತಿತ್ವ (histrionic personality), ಸಂಶಯಪೀಡಿತ ವ್ಯಕ್ತಿತ್ವ (paranoid personality), ದುಡುಕು ಮತ್ತು ಅಸ್ಥಿರ ವ್ಯಕ್ತಿತ್ವ (borderline personality), ಹಿಂಸಾಪ್ರವೃತ್ತಿಯ ವ್ಯಕ್ತಿತ್ವ (aggressive personality) ಇತ್ಯಾದಿ.

೮. **ಲೈಂಗಿಕ ವಿಕೃತ ನಡವಳಿಕೆ:** ಎಷ್ಟು ದಿನಗಳಿಗೊಮ್ಮೆ ಸಂಭೋಗ ಮಾಡಬೇಕು, ಹೇಗೆ ಮಾಡಬೇಕು ಎನ್ನುವುದರ ಬಗ್ಗೆ ಹೊಂದಾಣಿಕೆ ಇಲ್ಲದಿರುವುದು, ವಿಕೃತಕಾಮ, ಉದಾಹರಣೆಗೆ : ಸಲಿಂಗ, ಹಿಂಸಾರತಿ, ಗುದಸಂಭೋಗ, ಮುಖ ಸಂಭೋಗ, ಶಿಶುಸಂಭೋಗ, ಪ್ರಾಣಿಸಂಭೋಗ ಇತ್ಯಾದಿ ಆಚರಣೆಗಳು, ಲೈಂಗಿಕ ದುರ್ಬಲತೆ.




**ಎಡದಂಡೆ ಅಥವಾ ಬಲದಂಡೆ ಕಾಲುವೆ ಒಡೆಯಲಿ ಸುಮ್ನಿರು. ಆಗ ಒಂದ್ಯಾಕೆ, ಎರಡು ರೇಷ್ಮೆ ಸೀರೆ ತರ್ತೀನಿ, ಆಯ್ತಾ ?**

೯. **ಕುಟುಂಬದ ಇತರ ಸದಸ್ಯರ ನಡುವೆ ಹೊಂದಾಣಿಕೆ ಇಲ್ಲದಿರುವುದು:** ಅತ್ತೆ, ಸೊಸೆ ವೈಮನಸ್ಯ, ಅತ್ತಿಗೆ-ನಾದಿನಿ-ಭಾವ ಮೈದುನರೊಂದಿಗೆ ಜಗಳ ಗಂಡ-ಹೆಂಡತಿಯ ಸಂಬಂಧಕ್ಕೆ ಹುಳಿ ಹಿಂಡಬಹುದು.

**ಚಿಕಿತ್ಸೆ-ಪರಿಹಾರ**

* ದಾಂಪತ್ಯ ವಿರಸವನ್ನು ಆದಷ್ಟು ಬೇಗ ಗುರುತಿಸಬೇಕು, ಪರಿಹರಿಸಬೇಕು. ಇಲ್ಲವಾದರೆ ಅದು ವಿಚ್ಛೇದನ, ಆತ್ಮಹತ್ಯೆ ಹಾಗೂ ಕೊಲೆಯ ಮಟ್ಟಕ್ಕೆ ಹೋಗಬಹುದು. ವಿರಸದ ಬೆಂಕಿಗೆ ತುಪ್ಪ ಹುಯ್ಯುವ ಕೆಲಸವನ್ನು ಇತರರೂ ಮಾಡಬಾರದು.

* ನ್ಯೂನತೆ-ಕೊರತೆಗಳನ್ನು ಒಪ್ಪಿಕೊಳ್ಳುವುದು ಹಾಗೂ ಹೊಂದಿಕೊಳ್ಳುವುದು : ಗಂಡ-ಹೆಂಡತಿ ತಮ್ಮ ತಮ್ಮಲ್ಲಿರಬಹುದಾದ ಕುಂದು-ಕೊರತೆ ನ್ಯೂನತೆಗಳನ್ನು ಒಪ್ಪಿಕೊಳ್ಳಬೇಕು. ಅವನ್ನೇ ದೊಡ್ಡದು ಮಾಡಿ, ಸಂಗಾತಿಯನ್ನು ದೂಷಿಸಬಾರದು, ಹೀನಾಯ ಮಾಡಬಾರದು.

* ಸಂಗಾತಿಯ ಒಳ್ಳೆಯ ಅಂಶಗಳು, ಪ್ರತಿಭೆ, ಜಾಣ್ಮೆಯನ್ನು ಗುರುತಿಸಿ ಹಾರ್ದಿಕವಾಗಿ ಶ್ಲಾಘಿಸಿ ಎಲ್ಲರೆದುರು ಮೆಚ್ಚಿ ಮಾತಾಡಿ.

* ಜೊತೆಯಾಗಿ ಮಾಡಿ ಸಂತೋಷಪಡುವ ಚಟುವಟಿಕೆಗಳನ್ನು ಹಮ್ಮಿಕೊಳ್ಳಿ. ಒಟ್ಟಿಗೆ ಶಾಪಿಂಗ್ ಹೋಗಿ. ದೇವಾಲಯ-ಚರ್ಚಿಗೆ ಭೇಟಿ ನೀಡಿ. ಒಳಾಂಗಣ/ಹೊರಾಂಗಣ ಕ್ರೀಡೆಗಳನ್ನಾಡಿ. ವಾಕಿಂಗ್ ಹೋಗಿ. ಒಟ್ಟಿಗೆ ಸೇರಿಕೊಂಡು ಅಡುಗೆಮಾಡಿ ಮನೆಯನ್ನು ಚೊಕ್ಕಟಮಾಡಿ, ಅಲಂಕಾರ ಮಾಡಿ.

* ಯಾವುದೇ ವಿಷಯ ಸಣ್ಣದಿರಲಿ, ದೊಡ್ಡದಿರಲಿ ಪರಸ್ಪರ ಚರ್ಚೆ ಮಾಡಿ. ಅಂತಹ ಎಲ್ಲ ವಿಷಯಗಳನ್ನು ಒಬ್ಬರು ಇನ್ನೊಬ್ಬರ ಗಮನಕ್ಕೆ ತನ್ನಿ. ಎಲ್ಲ ವಿಷಯಗಳನ್ನು ಸಂಗಾತಿಗೆ ತಿಳಿಸಿ. ಏನನ್ನೂ ಮುಚ್ಚಿಡಬೇಡಿ.

* ಭಿನ್ನಾಭಿಪ್ರಾಯ ಬಂದಾಗ, ಶಾಂತವಾಗಿ ಕುಳಿತು ಮಾತನಾಡಿ. ಕೊಟ್ಟು-ತೆಗೆದುಕೊಳ್ಳುವ ಮನೋಭಾವದಿಂದ ಭಿನ್ನಾಭಿಪ್ರಾಯವನ್ನು ತಗ್ಗಿಸಿ. ಆದಾಗದಿದ್ದರೆ, ನಿಮ್ಮ ಅಭಿಪ್ರಾಯವನ್ನು ನಿಮ್ಮ ಸಂಗಾತಿ ಹಾಗೂ ನಿಮ್ಮ ಸಂಗಾತಿಯ ಅಭಿಪ್ರಾಯವನ್ನು ನೀವು ಒಪ್ಪಿಕೊಳ್ಳಿ. Agree to disagree !

* ಗಂಡ-ಹೆಂಡತಿಯ ದಾಂಪತ್ಯದ ಅಡಿಪಾಯ ಪರಸ್ಪರ ಪ್ರೀತಿ-ವಿಶ್ವಾಸ. ಅದಕ್ಕೆ ಚ್ಯುತಿ ತರಬೇಡಿ. ಹಾಗೆಯೇ ದಾಂಪತ್ಯದಲ್ಲಿ ತೆಗೆದುಕೊಳ್ಳುವುದಕ್ಕಿಂತ, ಕೊಡುವುದು ಹೆಚ್ಚು ಉಲ್ಲಾಸಕರ ಎಂಬುದನ್ನು ನೆನಪಿನಲ್ಲಿಡಿ.

ಅವರಿವರ ಮಾತು ಅಭಿಪ್ರಾಯಗಳಿಗಿಂತ, ನಿಮ್ಮ ಸಂಗಾತಿಯ ಮಾತು, ಅಭಿಪ್ರಾಯ ಅನಿಸಿಕೆಗಳಿಗೆ ಹೆಚ್ಚು ಮಾನ್ಯತೆ ನೀಡಿ.

* ಅಧಿಕಾರ: ಯಾರ ಮಾತು ಹೆಚ್ಚು ನಡೆಯಬೇಕು, ಯಾರ ಅಧಿಕಾರ ಹೆಚ್ಚು ಎನ್ನುವುದಕ್ಕಿಂತ, ವಿಷಯ - ಸಮಸ್ಯೆಯ ಪರಿಹಾರಕ್ಕೆ ಹೆಚ್ಚು ಒತ್ತುನೀಡಿ. ಒಂದು ವಿಷಯದಲ್ಲಿ ಗಂಡನ ಮಾತು ನಡೆದರೆ ಇನ್ನೊಂದು ವಿಷಯದಲ್ಲಿ ಹೆಂಡತಿಯ ಮಾತು ನಡೆಯಲಿ.

* ಅನಾರೋಗ್ಯ, ಕಾಯಿಲೆಗಳಿದ್ದರೆ, ಜನ ಏನು ಹೇಳುತ್ತಾರೆ ಎನ್ನುವುದಕ್ಕಿಂತ, ವೈದ್ಯರು ಏನು ಹೇಳುತ್ತಾರೆ ಅದಕ್ಕೆ ಗಮನಕೊಡಿ. ಯಾವುದೇ ಭಯ-ಅನುಮಾನಗಳಿದ್ದರೆ, ವೈದ್ಯರ ಜೊತೆ ಚರ್ಚಿಸಿರಿ. ರೋಗಿ-ಸಂಗಾತಿಯ ಬಗ್ಗೆ ಹೆಚ್ಚು ಪ್ರೀತಿ ಇರಲಿ. ಔಷಧಿಗಿಂತ, ಜೀವನ ಸಂಗಾತಿಯ ಪ್ರೀತಿಯೇ ರೋಗಕ್ಕೆ ದಿವ್ಯ ಔಷಧಿಯಾಗುತ್ತದೆ.

* ಗಂಡ-ಹೆಂಡತಿ ಸಂಬಂಧದಲ್ಲಿ ಹಣವಾಗಲೀ, ವಸ್ತುವಾಗಲೀ ಆಸ್ತಿ-ಅಂತಸ್ತುಗಳಾಗಲೀ ಪ್ರಧಾನ ಪಾತ್ರ ವಹಿಸಬಾರದು. ಮದುವೆಯನ್ನು ಲಾಭತರುವ ವ್ಯಾಪಾರ ಎಂದು ಯಾರೂ ಭಾವಿಸಬಾರದು. ಹಣ ಉಡುಗೊರೆಗಳು ಪ್ರೀತಿಯಿಂದ ಬರಬೇಕೇ ವಿನಾ ಕೇಳಿ ಪಡೆಯುವಂತಾಗಬಾರದು. ತನ್ನ ದುಡಿಮೆಯಿಂದ ಗಂಡಸು ಹೆಮ್ಮೆ ಪಡಬೇಕೇ ವಿನಾ, ಅತ್ತೆ-ಮಾವ ಕೊಡುವ, ಹೆಂಡತಿ ತರುವ ಹಣ ಅಥವಾ ಆಸ್ತಿಯನ್ನು ನಿರೀಕ್ಷೆ ಮಾಡಬಾರದು.

* ಗಂಡ-ಹೆಂಡತಿ ಆರೋಗ್ಯಕರ ಹವ್ಯಾಸಗಳನ್ನು ಬೆಳೆಸಿಕೊಳ್ಳಬೇಕು. ಸಂಗೀತ-ಓದು-ಆಟ ಪ್ರವಾಸ-ಯೋಗ-ಧ್ಯಾನ ಬಹಳ ಸಹಾಯಕಾರಿ.

* ಈಗ ಪ್ರತಿ ಜಿಲ್ಲೆಯಲ್ಲಿ ಕುಟುಂಬ ಆಪ್ತಸಲಹಾ ಕೇಂದ್ರಗಳಿವೆ. ತರಪೇತಿ ಪಡೆದ ಸಮಾಲೋಚಕರಿದ್ದಾರೆ. ಹಾಗೇ ಜಿಲ್ಲಾ ಕೇಂದ್ರಗಳಲ್ಲಿ ಮನೋವೈದ್ಯರು, ಮನಃಶಾಸ್ತ್ರಜ್ಞರಿದ್ದಾರೆ. ಅವರ ಸಲಹೆ ಮಾರ್ಗದರ್ಶನವನ್ನು, ಅಗತ್ಯಬಿದ್ದಲ್ಲಿ ಪಡೆಯಲು ಸಂಕೋಚಪಡಬೇಡಿ.

ಬೆಂಗಳೂರಿನ ಇನ್‌ಫೆಂಟ್ರಿ ರಸ್ತೆಯಲ್ಲಿರುವ ಪೊಲೀಸ್ ಕಮೀಷನರ್ ಅವರ ಕಛೇರಿಯ ಆವರಣದಲ್ಲಿ ಕೆಲಸಮಾಡುತ್ತಿರುವ ವನಿತಾ ಸಹಾಯವಾಣಿ ಸಂಸ್ಥೆಗೆ ೨೦೦೪ ಮತ್ತು ೨೦೦೫ನೇ ಸಾಲಿನಲ್ಲಿ (ಒಂದು ವರ್ಷದ ಅವಧಿಯಲ್ಲಿ) ೧೩೧೫ ದಂಪತಿಗಳು ತಮ್ಮ 'ವಿರಸ'ದ ಸಮಸ್ಯಾ ಪರಿಹಾರಕ್ಕೆ ಬಂದಿದ್ದರು. ಅವರಲ್ಲಿ ಶೇಕಡಾ ೫೦ರಷ್ಟು ಮಂದಿ ೨೦ರಿಂದ ೩೦ವರ್ಷ ಒಳಪಟ್ಟವರು. ಮದುವೆಯಾಗಿ ೩ರಿಂದ ೫ ವರ್ಷ ದಾಂಪತ್ಯ ಜೀವನ ಮಾಡಿದ್ದರು. ಅವರಲ್ಲಿ ವಿರಸ ತಲೆದೋರಲು ಸಾಮಾನ್ಯ ಕಾರಣಗಳೆಂದರೆ,

| | |
|---|---|
| ಹೊಂದಾಣಿಕೆ ಇಲ್ಲ, ವೈಯಕ್ತಿಕ ಅಹಂ/ಪ್ರತಿಷ್ಠೆ | ಶೇಕಡಾ ೫೦ |
| ವಿವಾಹೇತರ ಸಂಬಂಧಗಳು | ಶೇಕಡಾ ೧೩ |
| ಕುಡಿತ-ಮದ್ಯಪಾನ ಚಟ | ಶೇಕಡಾ ೧೪ |
| ವರದಕ್ಷಿಣೆ ಕಿರುಕುಳ | ಶೇಕಡಾ ೧೪ |

ಸಲಹೆ ಸಹಾಯಕ್ಕೆ ಬಂದಂತಹ ೧೩೧೫ ಜೋಡಿಗಳಲ್ಲಿ ೧೪೨ ಮಂದಿಗೆ ಮಾನಸಿಕ ಕಾಯಿಲೆ ಇತ್ತು. (ಖಿನ್ನತೆ, ಸ್ಕಿಜೋಫ್ರೀನಿಯಾ ಇತ್ಯಾದಿ). ಕರ್ನಾಟಕದಲ್ಲಿ ಈ ಸಂಸ್ಥೆಯಲ್ಲದೆ, ಪ್ರತಿ ಜಿಲ್ಲೆಯ ಕೇಂದ್ರದಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿ (Central Social Welfare Board) ಆಪ್ತಸಲಹಾ ಕೇಂದ್ರಗಳನ್ನು ನಡೆಸುತ್ತಿದೆ. ಸಾರ್ವಜನಿಕರು ಈ ಕೇಂದ್ರಗಳ ಸದುಪಯೋಗ ಮಾಡಿಕೊಳ್ಳಬೇಕು; ತರಪೇತಿ ಹೊಂದಿದ ಆಪ್ತಸಮಾಲೋಚಕರ ನೆರವನ್ನು ಪಡೆಯಬೇಕು.

**ಡಾ|| ಸಿ. ಆರ್. ಚಂದ್ರಶೇಖರ್**
ನಿಮ್ಹಾನ್ಸ್, ಬೆಂಗಳೂರು - ೫೬೦ ೦೨೯

# ಪರಾವಲಂಬನೆಯ ಅರ್ಥವಿಹೀನತೆ

**ಶಾಂ**ತಿಯುತ ಜೀವನಕ್ಕೆ ಅಡಿಪಾಯವಾದ ಕೆಲ ವಿಷಯಗಳನ್ನು ನೇರವಾಗಿ ಚರ್ಚಿಸಿರುವ ಈ ಲೇಖನವನ್ನು ಓದುವ ಮೊದಲು ಓದುಗ ತನ್ನ ಇಂದಿನ ತಿಳಿವಳಿಕೆಗಳನ್ನು ಬದಿಗಿರಿಸಿ ಬಿಚ್ಚುಮನಸ್ಸಿಂದ ವಿಚಾರಿಸಲು ಸಿದ್ಧನಾಗುವುದು ಅವಶ್ಯ. ಈ ಪಿಡುಗು ಪ್ರಮುಖವಾಗಿ ಸ್ತ್ರೀ ಮತ್ತು ಯುವ ಸಮುದಾಯದ್ದಾಗಿದ್ದು ಅದರ ದೃಷ್ಟಿಕೋನವನ್ನು ನಿರೂಪಿಸುವ ಪ್ರಯತ್ನವಿದೆ.

ಜೀವನದ ವಿಶೇಷತೆ ಎಂದರೆ ಪ್ರತಿ ಒಬ್ಬನದೂ ವಿಶಿಷ್ಟವಾದದ್ದು, ಮತ್ತೆ ನಾಳೆಯನ್ನರಿಯಲಾಗದುದು. ಕಂಪ್ಯೂಟರೀಕೃತ ಪರಿಹಾರಗಳು ಎಂದೆಂದಿಗೂ ಅಸಾಧ್ಯ. ಸಮಾಜಜೀವಿ ಆದಂದಿನಿಂದ ವ್ಯಕ್ತಿ ತಂದೆ, ತಾಯಿ, ಪತಿ, ಪತ್ನಿ, ಮಕ್ಕಳು, ಬಂಧುಮಿತ್ರರು, ಗ್ರಾಹಕ, ವ್ಯಾಪಾರಿ, ಪುರೋಹಿತರು, ಧರ್ಮಗುರುಗಳು, ಸ್ವಭಾಷೆ, ಜಾತಿ, ದೇಶ ಮತ್ತೆ ಕುಲದವರು, ಪ್ರಕೃತಿಯ ಸಸ್ಯ, ಪ್ರಾಣಿ ಮತ್ತಿತರ ನಿರ್ಜೀವ ವಸ್ತುಗಳು, ಅಲ್ಲದೆ ತನ್ನ ನಂಬಿಕೆ ಮತ್ತು ಕಲ್ಪನಾಶಕ್ತಿಗಳು – ಎಲ್ಲರೊಂದಿಗೂ ಎಲ್ಲದರೊಂದಿಗೂ ಸಂಬಂಧ ಹೊಂದಿದ್ದಾನೆ. ಎಷ್ಟೇ ಪ್ರಾಮಾಣಿಕ ಹಿತಚಿಂತಕನಾಗಿದ್ದರೂ ಯಾರೂ ಇನ್ನೊಬ್ಬನ ಎಲ್ಲ ಸಮಸ್ಯೆಗಳನ್ನು ಸದಾ ಸಮೀಪವಿದ್ದು ನಿವಾರಿಸಲಾರನು. ಧನ, ಆಹಾರದ ಕೊರತೆಯನ್ನಾದರೆ ತುಸುಮಟ್ಟಿಗೆ ನೀಗಿಸಬಹುದು. ಆದರೆ ಇವುಗಳ ಹೆಚ್ಚಳ, ಅಶಾಂತಿ, ಅಹಂಕಾರ – ಇವುಗಳಿಂದುಂಟಾಗುವ ಸಂಕಷ್ಟಗಳಿಗೆ ಸುಲಭ ಪರಿಹಾರವಿಲ್ಲ. ಯಾಕೆಂದರೆ, ಇವುಗಳ ರೂಪ ವಿಭಿನ್ನತೆಯಲ್ಲದೆ ಎಲ್ಲರಿಗೂ ತಮ್ಮ ಹಿತಮಿತಿಗಳಿರುತ್ತವೆ. ಅಲ್ಲದೆ ಎಲ್ಲೆಡೆಯಲ್ಲೂ ಕಾಣಸಿಗುವುದು ಫಲಾಪೇಕ್ಷಿತ (ವ್ಯಾವಹಾರಿಕ) ಸಂಬಂಧ. ವ್ಯಕ್ತಿ ಎಲ್ಲರಿಂದಲೂ ಲೌಕಿಕ ಯಾ ಪಾರಮಾರ್ಥಿಕ ಕಾಮನೆಗಳಿಂದ ಪ್ರೇರಿತನು. ಮಿತ್ರತ್ವವನ್ನು ಬೆಳೆಸುವಾಗಲೇ ಅತಿ ಚಾಣಾಕ್ಷತೆಯಿಂದ ವರ್ತಿಸುತ್ತಾನೆ. ಆರ್ಥಿಕ, ದೈಹಿಕ ಮತ್ತು ಮತ್ತಿತರ ಸಾಮಾಜಿಕ ಮಾಪನಗಳಲ್ಲಿ ನಿಕೃಷ್ಟರಿಂದ ಎಲ್ಲರೂ ದೂರವಿರುವರು. ಕುಂಟ, ಕುರುಡ, ಹೆಳವ, ರೋಗಿ, ವೃದ್ಧ, ಮತ್ತೆ ಬುದ್ಧಿಮಂದನಿಗೆ ಎಷ್ಟು ಜನ ಮಿತ್ರರಾಗುತ್ತಾರೆ? ಸಂಬಂಧಿಕರಾದರೂ ದೂರದಿಂದಲೇ ನೋಡುವರು. ಸಮಾಜ ಸೇವಕರು, ಬುದ್ಧಿಜೀವಿಗಳು ಕೂಡ ಇವರನ್ನು ನತದೃಷ್ಟರೆಂದು ಬೇರೆ ಹಂತದಲ್ಲಿರಿಸಿ ದಯೆದೋರುವರು. ಸರಿಸಮಾನರೆಂದು ಆದರಿಸರು, ತನ್ನನ್ನು ರಂಜಿಸುವ, ಉಪಕರಿಸಬಲ್ಲವನಾದವನ ಜತೆಯನ್ನೇ ಎಲ್ಲರೂ ಅರಸುವರು. ಸಂಬಂಧವಿರುವುದು ಪಡೆಯಲಿಕ್ಕೆ, ಕೊಡುವುದಕ್ಕಲ್ಲ – ಎಂದವರ ದೃಢವಾದ ನಂಬಿಕೆ. ತನಗೇನು ಲಾಭ ಎನ್ನುವುದು ಬಿಟ್ಟು ತನ್ನಿಂದ ಪರರ ಕಷ್ಟದಲ್ಲೇನು ಮಾಡಲಾದೀತು ಎಂದು ಪ್ರಶ್ನಿಸುವವರಿಲ್ಲ.

ಮಾನವನ ಈ ದೃಷ್ಟಿಕೋನವು ಬರೇ ತನ್ನ ಜಾತಿಗೆ ಸೀಮಿತವಾದುದಲ್ಲ. ವಿಕಾಸದ ಅತಿಶ್ರೇಷ್ಠ ಕುಲವೆಂಬ ಹೆಗ್ಗಳಿಕೆಯಿಂದ ಭೂಮಿಯನ್ನು ವಿಭಾಗಿಸಿ ಹಂಚಿಕೊಂಡು ಅದರ ಎಲ್ಲ ಸಸ್ಯ, ಪ್ರಾಣಿ ಪ್ರಾಕೃತಿಕ ವಿನ್ಯಾಸಗಳನ್ನು ತನ್ನದಾಗಿಸಿಕೊಂಡಿದ್ದಾನೆ. ಮೃಗ, ಪಕ್ಷಿ, ಸಸ್ಯ, ನಿಸರ್ಗಗಳಲ್ಲಿ ತನಗೆ ಬೇಕೆಂದದ್ದನ್ನಾರಿಸಿ ಕೆಲವನ್ನು ಪಳಗಿಸಿ, ಬೇರೆ ಅಭ್ಯಾಸ ಕೊಡಿಸಿ, ತಳಿ ಸುಧಾರಿಸಿ ಉಪಯೋಗಿಸುತ್ತಿದ್ದಾನೆ. ವನ, ಸಸ್ಯ, ಪುಷ್ಪ, ತರಕಾರಿಗಳಲ್ಲಿ ಬೇಕಾದುದನ್ನು ಜಾಸ್ತಿ ಫಲಕೊಡುವಂತಾಗಿಸಿದ್ದಾನೆ ಅಥವಾ ಸೌಂದರ್ಯಯುಕ್ತವಾಗಿಸಿದ್ದಾನೆ. ಉದ್ಯಾನಗಳಲ್ಲಿ, ಹೆದ್ದಾರಿಯ ಇಕ್ಕೆಲಗಳಲ್ಲೂ ಸೊಂಪಾಗಿ ಅಲಂಕಾರವಾಗಿ ಬೆಳೆಸಿದ ಮರ, ಸಸಿ, ಪುಷ್ಪ, ಹುಲ್ಲು ಜಾತಿಗಳು ಮನುಷ್ಯನು ಅವುಗಳ ಮೇಲೆ ಸಾಧಿಸಿದ ಸ್ವಾಮಿತ್ವವನ್ನು ತೋರಿಸುತ್ತವೆ. ಬೇಡವಾದ ಜಾತಿಗಳನ್ನು ನಿರ್ದಾಕ್ಷಿಣ್ಯವಾಗಿ ನಾಶಮಾಡಿದ್ದಾನೆ. ಕೆಲವನ್ನಾದರೂ ಉಳಿಸಿರುವುದು ಯಾಕೆ ಗೊತ್ತೆ? ಪರಿಸರವಿನಾಶದೊಂದಿಗೆ ತಾನೇ ಅಳಿಯುವೆನೆಂಬ ಭಯ ಅಥವಾ ತನ್ನ ನಿರಂತರ ದುಡಿಮೆಯಿಂದಾಗಿ ರಕ್ತದೊತ್ತಡ, ನಾಡಿಬಡಿತ ಹೆಚ್ಚಾದಾಗ ವಿಶ್ರಾಂತಿಗೆ ಆಸರೆ ಬೇಕೆಂಬ ಭಾವನೆ. ಇಂತಹ ನಿರಂತರ ವ್ಯಾವಹಾರಿಕ ಸಂಬಂಧವೇ ಅಶಾಂತಿ, ನಿರಾಸೆಯ ಮೂಲ. ಸಂಬಂಧವೆಂದರೆ ಈ ದಿನ ಬರೇ ಪ್ರತಿಫಲ, ಅವಲಂಬನೆ ಎಂಬರ್ಥಕ್ಕೆ ಇಳಿದಿದೆ.

**ಸಂಬಂಧದಲ್ಲಿ ಭಾವುಕತೆಯ ಪಾತ್ರ :** ಕುಟುಂಬದ ಸದಸ್ಯರು ಮತ್ತು ಮಿತ್ರರ ನಡುವೆ ಜಾಸ್ತಿಯಾಗಿ ಕಾಣುವುದು ಭಾವುಕತೆ (emotion, sentimentalism). ಗತಕಾಲದ ನೆನಪುಗಳು ಅಹಿತಕರವಾಗಿದ್ದರೂ ಚಿಂತೆಯಿಲ್ಲ, ಮಾನಸಿಕ ನ್ಯೂನತೆಯೊಂದಿಗಿದ್ದರೂ, ನಿದ್ರೆ, ಆರೋಗ್ಯ ಕೆಡಿಸಿದರೂ ಮಗು ತಾಯಿಯ ಜೀವ, ಸದಾ ಜಗಳವಾಡುತ್ತಿರುವ ತಮ್ಮನಿಗೆ ರಾತ್ರಿ ಮಲಗುವಾಗ ಅಣ್ಣ, ಸಮೀಪದಲ್ಲಿ ಬೇಕು. ಪ್ರಚೋದಿಸಲ್ಪಟ್ಟ ಜನಸಂದಣಿಯ ಹಿಂಸಾಪ್ರವೃತ್ತಿ, ನೂರಾರು ಜನರು ದೇವಿ ಎಂದು ಸ್ತುತಿಸುತ್ತಿರಲು ಪರವಶಳಾಗಿ ಪತಿಯ ಚಿತೆಯನ್ನೇರುವ ತರುಣಿಯ ಮನೋಭಾವ, ಸ್ಮಶಾನ ಸಂದರ್ಶನ ಮತ್ತು ಹರಿಕಥೆಗಳಿಂದುಂಟಾಗುವ ವೈರಾಗ್ಯ, ರಣರಂಗದಲ್ಲಿ ಸೈನಿಕ ತೋರುವ ಅಪೂರ್ವ ಧೈರ್ಯ – ಇಂತಹ ಭಾವುಕತೆ ಶಾಶ್ವತವಲ್ಲ. ಬಾಂಧವ್ಯದ ವಿಸ್ತಾರ, ಕುಟುಂಬದ ಸಂಸ್ಕೃತಿಯ ಮತ್ತೆ ಆಪತ್ತದ ಘನತೆಯನ್ನವಲಂಬಿಸಿ ಈ ಅನ್ಯೋನ್ಯತೆ ಮುಂದರಿದರೂ ಮೆಲ್ಲನೆ ಮೆರಗು ಕಳೆದು ವ್ಯಾವಹಾರಿಕತೆಯಾಗಿ ಪರಿವರ್ತಿತವಾಗುತ್ತದೆ. ತಮ್ಮ ಬಡತನ ನಿವಾರಿಸಿ ವೃದ್ಧಾಪ್ಯದಲ್ಲಿ ಆಧಾರವಾಗಲೆಂಬುದು ಮಕ್ಕಳಿಂದ ಲೌಕಿಕ ಆಸೆಯಾದರೆ ಮರಣಾನಂತರ ಶ್ರಾದ್ಧ ಮಾಡುತ್ತಾ ತಮಗೆ ಸದ್ಗತಿ ಕೊಡಿಸಲೆನ್ನುವುದು ಅಲೌಕಿಕವಾದ ನಿರೀಕ್ಷೆ. ಅಂತೆಯೇ ಮಕ್ಕಳು ಹಿರಿಯರನ್ನು ನೋಡಿಕೊಳ್ಳುವುದರಲ್ಲಿ ಸಮಾಜದ ಭರ್ತ್ಸನೆ, ಹಿರಿಯರ, ದೈವದ ಶಾಪಭಯ ಎಲ್ಲ ಸೇರಿವೆ. ಇವೆಲ್ಲ ಮಾನವನ ಸ್ವಭಾವವನ್ನರಿತು, ಸಮಾಜವು ಅವನ ಮೇಲೆ ವ್ಯವಸ್ಥಿತವಾಗಿ ಹೇರಿದ ಭಾವನೆಗಳು. ಬ್ರಾಹ್ಮಣ್ಯದ ಪ್ರಭಾವದ ಆ ವೇದ ಮಂತ್ರಗಳಲ್ಲಿ ಕ್ಷತ್ರಿಯ ರಾಜರನ್ನುದ್ದೇಶಿಸಿ ''ಗೋ ಬ್ರಾಹ್ಮಣರನ್ನು ಸಂರಕ್ಷಿಸಿ'' ಎಂದೇಕೆ ಪುನಃ ಪುನಃ ಹೇಳಿದ್ದು ?

**ವ್ಯಕ್ತಿ ಮತ್ತೆ ಸಮಾಜದ ನಡುವಣ ಸಂಬಂಧ :** ಸಾಮಾಜಿಕ ಜೀವನದ ಆರಂಭದಲ್ಲೇ ವಿಚಾರವಾದಿಗಳು ಶಾಸ್ತ್ರ ಪುರಾಣಗಳಿಂದ ಪರಸ್ಪರರೊಳಗಣ ಆಚಾರ, ವರ್ತನೆ, ನೀತಿ, ಮೌಲ್ಯ, ಧರ್ಮಸೂತ್ರಗಳನ್ನು ನಿರೂಪಿಸಿ ಒಂದು ಚೌಕಟ್ಟಲ್ಲಿ ಜೀವಿಸಲೆಂದು ವ್ಯಕ್ತಿಯ ಮೇಲೆ ಹೇರಿಸಿದರು. ಇದರ ಉದ್ದೇಶ ತನ್ನ ವಿವೇಚನಾ ಶಕ್ತಿಯನ್ನುಪಯೋಗಿಸಿ ವ್ಯಕ್ತಿ ಈ ವೃತ್ತದಿಂದ ಹೊರಬಂದಲ್ಲಿ ಸಮಾಜದಲ್ಲಿ ಸಮತೋಲನಾ ಸ್ಥಿತಿ ಹದಗೆಟ್ಟು ಶಾಂತಿ ಕದಡುವುದು. ಎರಡನೆಯದಾಗಿ, ಇದರಿಂದ ವ್ಯಕ್ತಿಯ ಮೇಲಿನ ಹಿಡಿತ ಸಡಿಲಾದರೆ ಸಮಾಜದ ಅಸ್ತಿತ್ವಕ್ಕೆ ಕುತ್ತು. ಎಂದರೆ ಸಮಾಜ ಇಚ್ಛಿಸುವುದು ವ್ಯಕ್ತಿಯ ಅನಿರ್ಬಂಧಿತ ವಿಕಾಸವನ್ನಲ್ಲ, ತನ್ನ ಸ್ಥಿರವಾದ ಆಳ್ವಿಕೆಯನ್ನು. ಧರ್ಮ, ಆಚರಣೆ, ನಂಬಿಕೆ, ವಿಶ್ವಾಸ, ಇವೆಲ್ಲ ಮಾನಸಿಕ ಮತ್ತು ದೈಹಿಕ ಗುಲಾಮಗಿರಿಗೊಯ್ಯುವ ಸೂತ್ರಗಳು. ಹೀಗಾಗಿ ಸಮಾಜವೇ ತನ್ನಂಶವಾದ ಮಾನವನನ್ನು ಕುಬ್ಜನಾಗಿರಿಸುವುದರಲ್ಲಿ ತಲ್ಲೀನವಾಗಿರುವಾಗ ಇದರ ಆಸರೆಯಲ್ಲಿ ಸಂತುಷ್ಟ ಜೀವನ ಎಂತು ಸಾಧ್ಯ ?

ಈ ಉದ್ದೇಶದಲ್ಲಂತೂ ಜಗತ್ತಿನ ಎಲ್ಲ ಧರ್ಮಗಳಲ್ಲೂ ತಮ್ಮ ಮತಸ್ಥರೊಂದಿಗೆ ಒಮ್ಮತವಿದೆ. ಆರಂಭಕಾಲದಲ್ಲಿ ಈ ಸೂತ್ರಗಳು ಸಕಾಲೀಯವಾಗಿದ್ದಿರಬಹುದು. ಸಂಸ್ಕೃತಿ, ಪರಿಸರ, ವಿಜ್ಞಾನ ಕ್ಷೇತ್ರ ಬೆಳೆದಂತೆ ಜನತೆ ಇವುಗಳಲ್ಲಿನ ಹುಳುಕನ್ನರಿಯಲಾರಂಭಿಸಿತು. ಅದನ್ನೊಪ್ಪಿ ತಿದ್ದಿಕೊಳ್ಳುವುದನ್ನು ಬಿಟ್ಟು ಕ್ರಿ.ಪೂ. ವರ್ಷಗಳಿಂದಾರಂಭಿಸಿ ೧೬ನೆಯ ಶತಮಾನದವರೆಗೂ ಇಟಲಿ, ಸ್ಪೆಯ್ನ್, ಪೋರ್ಚುಗಲ್ ಸಮಾಜಗಳು ವಿಚಾರವಾದವನ್ನು, ವಿಜ್ಞಾನವನ್ನು ಬಹಿಷ್ಕರಿಸಿದವು. ಪರಿಣಾಮವಾಗಿ ಸಂಶೋಧಕರು ವಿಜ್ಞಾನಿಗಳು ತಮ್ಮ ಕೃತಿಗಳನ್ನು ಮೊಟಕುಗೊಳಿಸಿ ಅಥವಾ ಬಚ್ಚಿಟ್ಟಿದ್ದಲ್ಲದೆ ಕೆಲವರು ಬಲಿಯಾದರು. ನಂತರದ ವರ್ಷಗಳಲ್ಲಿ ಕೆಲದೇಶಗಳಲ್ಲಿ (ಯೂರೋಪ್, ಚೀನಾ, ಅಮೆರಿಕಾ) ವಿಜ್ಞಾನವು ತಲೆ ಎತ್ತಲಾರಂಭಿಸಿದುದು. ಹಿಂದೂ, ಮುಸ್ಲಿಂ, ಬುದ್ಧಧರ್ಮಗಳಂತೂ ಇನ್ನೂ ಅಂಧನಂಬಿಕೆಗಳ ನಿರಂಕುಶ ಪ್ರಭುತ್ವದಲ್ಲೇ ಇವೆ. ಬೆನ್‌ಹಿನ್‌ನಂತಹ ಕ್ರೈಸ್ತ ಪ್ರವಾದಿಗಳಿಗಿನ್ನೂ ಫಲವತ್ತಾದ ಕ್ಷೇತ್ರ. ಆ ಕಾರಣವಾಗಿ ಇವು ಅಂತರರಾಷ್ಟ್ರೀಯ ಮಟ್ಟದ ಸಾಹಿತ್ಯ, ಚಲನಚಿತ್ರ, ಕ್ರೀಡೆ, ಸಂಶೋಧನೆ, ನೋಬಲ್ ಪುರಸ್ಕಾರಗಳು – ಎಲ್ಲದರಲ್ಲೂ ಹಿಂದುಳಿದಿವೆ.

**ದೈವಿಕವೆನ್ನುವ ಶಕ್ತಿ – ಅದರ ಪ್ರತಿಪಾದಕರು :** ದೈವಿಕಶಕ್ತಿ, ಆಚಾರ್ಯರು, ಕುಲಗುರು, ಜ್ಯೋತಿಷ, ಮಂತ್ರವಾದಿ, ಸಾಧು ಸಂತರನ್ನೆಲ್ಲ ವ್ಯಕ್ತಿಯು ತನ್ನ ಕಷ್ಟಪರಿಹಾರ,ರಕ್ಷಣೆ, ಭವಿಷ್ಯದ ಭದ್ರತೆ ಮತ್ತು ಲೌಕಿಕ, ಆಧ್ಯಾತ್ಮಿಕ ಆಕಾಂಕ್ಷೆಗಳ ಪೂರೈಕೆಗಾಗಿ ಅರಸುತ್ತಾನೆ. ಅವರಿಗೆಲ್ಲ ಆ ಯೋಗ್ಯತೆ ಇದೆಯೋ ಎಂದು ಪ್ರಶ್ನಿಸನು. ಆದರೆ ಒಂದು ಮಹಾಶಕ್ತಿ (ಇದ್ದರೂ ಕೂಡ) ಅದು ತನ್ನ ಸೃಷ್ಟಿಯ ಒಬ್ಬನ ಸ್ವಾರ್ಥಾಪೇಕ್ಷೆಗಾಗಿ ಸ್ಪಂದಿಸುವುದೆಂಬುದು ಒಪ್ಪತಕ್ಕ ಮಾತಲ್ಲ. ಧರ್ಮಪ್ರಚಾರಕರಾದರೂ ಇಂದು ಮಾಡುವುದೇನು ? ವ್ಯಕ್ತಿಯ ಅಸಹಾಯಕ ಪರಿಸ್ಥಿತಿ ಅರಿಸಿ ಅವನ ಮನಸ್ಸನ್ನು ಮೊಂಡಾಗಿಸಿ ಅವನಿಂದ ವಿವಿಧ ಸೇವೆ ಕೊಡಿಸಿ ಕಾಣಿಕೆ ಪಡೆದು ಆಶೀರ್ವದಿಸುವುದು. ತಮ್ಮ ದೈವದ ಶಕ್ತಿ

ಪಿ. ಎಲ್. ರಾವ್

ಉಳಿಸಿಕೊಳ್ಳುವುದರಲ್ಲಿದೆ ಅವರ ಕೌಶಲ್ಯ. ಭವಿಷ್ಯ ತಾನಾಗಿಯೋ ಅಂಧವಿಶ್ವಾಸ ಯಾ ಭರವಸೆಯ ಫಲವಾಗಿಯೋ ಆಶ್ರಿತನ ಇಚ್ಛೆ ಪೂರೈಸಿದಲ್ಲಿ ಅವನ ನಂಬಿಕೆ ಹೆಚ್ಚುವುದು. ಆಸೆಗೆ ಅಂತ್ಯವಿಲ್ಲವಾಗಿ ಆ ಸ್ಥಿತಿ ಸ್ಥಿರವಾಗಿರಲು ಸಾಧ್ಯವಿಲ್ಲವಾದುದರಿಂದ ಈ ಪ್ರವಾದಿಗಳೊಳಗಿನ ಸಂಬಂಧವು ಬೇಗನೆ ತನ್ನ ಅರ್ಥ ಕಳೆದುಕೊಳ್ಳುತ್ತದೆ. ಆದರೂ ತನ್ಮಧ್ಯೆ ವ್ಯಕ್ತಿಯು ಸ್ವಂತವಾಗಿ ಯಾವುದನ್ನೂ ಪ್ರಶ್ನಿಸದೆ, ಈ ಯಾಂತ್ರಿಕತೆಯಿಂದ ಹೊರ ಬರಲಾಗದೆ ಸಮಾಜಕ್ಕೆ ಅಧೀನನಾಗಿ ತೊಳಲಾಡುತ್ತಾ ದಿನದೂಡುತ್ತಾನೆ.

ಪರಿಹಾರವೇನು? ಸಂಕಷ್ಟ ಪರಿಹಾರದಲ್ಲಿ ಪರಾವಲಂಬನೆಯ ಬೆಲೆಯನ್ನು ಪರಿಶೀಲಿಸಲು ಸಮಸ್ಯೆಗಳನ್ನು ಮೂರು ಭಾಗಗಳಾಗಿಸಬಹುದು.

೧. ತನ್ನ ಮತ್ತು ತನ್ನ ರಕ್ಷಕರ ನಿರ್ಲಕ್ಷ್ಯ, ಬೇಜವಾಬ್ದಾರಿ ವರ್ತನೆ, ಅವಿದ್ಯೆ, ಸ್ವಾಭಿಮಾನ, ಸ್ವೇಚ್ಛಾಚಾರದ ಪ್ರವೃತ್ತಿ, ಸೋಮಾರಿತನ, ದುರಾಚಾರಗಳಿಂದ ಸಂಪಾದಿಸಿದ ಸಂಕಷ್ಟಗಳು: ಮದ್ಯ, ಧೂಮಪಾನ, ವ್ಯಭಿಚಾರದಿಂದಾಗಿ ಅನಾರೋಗ್ಯ, ಶಿಸ್ತಿಲ್ಲದ ಆಹಾರ ಮತ್ತು ಸುಲಭ ಜೀವನಕ್ರಮದ ಕಾಯಿಲೆಗಳು, ಉದ್ಯೋಗದ ಪರಿಶ್ರಮ, ಮಾನಸಿಕ ಒತ್ತಡ, ಕುಟುಂಬದಲ್ಲಿ ಕಲಹ, ಹಿಂಸೆ, ದಬ್ಬಾಳಿಕೆ, ವೈಷಮ್ಯ, ವ್ಯಾಜ್ಯ, ದುಂದುಗಾರಿಕೆಯಿಂದಾಗಿ ಬಡತನ, ಮೌಲ್ಯರಹಿತ ಜೀವನಕ್ರಮ – ಇವುಗಳಿಂದಾಗುವ ದುಷ್ಪರಿಣಾಮಗಳಿಗೆ ಪರರು ಯಾರು ಚಿರಪರಿಹಾರ ನೀಡಬಲ್ಲರು? ಈ ವ್ಯಕ್ತಿಯು (ಧನ, ಮರ್ಯಾದೆ, ಅಧಿಕಾರ) ಸಂಚಯನ ಎಂಬ ಕೂಪದಲ್ಲಿ ಬಿದ್ದಿದ್ದು ತನ್ನ ಮತ್ತು ಸಾರ್ಥಕ ಜೀವನದ ನಡುವೆ ಪರದೆ ಇಳಿಬಿಟ್ಟಿರುತ್ತಾನೆ. ಸರ್ವಾಧಿಕಾರಿ, ಮಹತ್ವಾಕಾಂಕ್ಷಿ, ರಾಜಕೀಯ ಧುರೀಣ, ಭೂಗತದೊರೆ, ಮುಖಂಡ, ಕೊಲೆಪಾತಕ, ಕ್ರಾಂತಿಕಾರಿ – ಇವೆಲ್ಲ ಕೆಲವು ತೀಕ್ಷ್ಣ ದೃಷ್ಟಾಂತಗಳಾದರೆ ಸರ್ವಸಾಮಾನ್ಯರು ಇವರಿಗಿಂತ ಜಾಸ್ತಿ ಭಿನ್ನರಲ್ಲ. ಹುಲಿಯನ್ನೇರಿದವನು ಕೆಳಗಿಳಿಯಲಾರದಂತೆ, ಜೇಡನು ನೇಯ್ದ ಬಲೆಗಳಲ್ಲಿ ತಾನೇ ಬಂಧಿತನಾದಂತೆ ಇದೆ ಅವರ ಅವಸ್ಥೆ. ಸ್ಥಿರ ಪರಿಹಾರದ ಆಸೆ ಬೇರೆ ಇವರ ಲಕ್ಷ್ಯದಲ್ಲಿ ಇಲ್ಲದ ಕಾರಣ ಇವರನ್ನುದ್ದೇಶಿಸಿ ಫಲವಿಲ್ಲ. ಒಮ್ಮೆ ಜಾರಿಬಿದ್ದರೆ ನಂತರ ತಾತ್ಕಾಲಿಕ ಪರಿಹಾರಗಳಿಗಾಗಿ ಪರದಾಡುವರು.

ಈ ಸಮಸ್ಯೆಗಳಿಗೆ ವ್ಯಕ್ತಿಯ ವರ್ತನೆಗಳೇ ಕಾರಣವಾಗಿದ್ದು ಪರಿಹಾರವೂ ಅವನ ಕೈಯಲ್ಲೇ ಇದೆ. ಪರರಿಂದ ಏನೂ ಆಗದು. 'ದೇವರೆನಗೆ(?) ದಾರಿತೋರುವ'ನೆಂದರೂ ಎದ್ದು ನಡೆಯುವ ಕಾರ್ಯ ವ್ಯಕ್ತಿಯೇ ಮಾಡಬೇಕಲ್ಲ? ಕುದುರೆಯನ್ನು ನೀರಿಗೊಯ್ದರೂ ಕುದುರೆಯೇ ನೀರು ಕುಡಿಯಬೇಕು. ಆದರೆ ಇಂದಿನ ಮಾನವನು ಜವಾಬ್ದಾರಿಗಳಿಂದ ವಿಮುಖನಾಗಿ ಅಹಂಕಾರ ದಬ್ಬಾಳಿಕೆಗಳಿಂದ ಇತರರನ್ನೂ ಪ್ರಕೃತಿಯನ್ನೂ ಅಳಿಸುತ್ತಿದ್ದಾನೆ. ಪರರು ತಮ್ಮ ಸ್ವಾರ್ಥಾಪೇಕ್ಷೆಯಿಂದ ಹೇರುತ್ತಿರುವ ಅವಿದ್ಯೆಗಳಿಗೆ ಬಲಿಯಾಗಿ, ಯೋಚನಾಶಕ್ತಿಯನ್ನು ನಿಷ್ಕ್ರಿಯಗೊಳಿಸಿ ತನ್ನಲ್ಲಿ ವಿಶ್ವಾಸ ಕಳೆದುಕೊಂಡು, ಇತರರು ತನ್ನನ್ನು ಉದ್ಧರಿಸಲೇ ಇರುವವರೆನ್ನುತ್ತಾ ಜಡ್ಡಾಗುತ್ತಿದ್ದಾನೆ.

೨. ಜಾಗ್ರತನಾದವನೂ ತಪ್ಪಿಸಲಾಗದ ಸಂಕಷ್ಟಗಳೆಷ್ಟೋ ಇವೆ: ಅನಿರೀಕ್ಷಿತ ರೋಗ, ಆಪತ್ತು, ನಿರುದ್ಯೋಗ, ಬಡತನ, ಕಂಪನಿಯ ದಿವಾಳಿ, ಯುದ್ಧ ಮತ್ತಿತರ ರಾಜಕೀಯ ಬೆಳವಣಿಗೆ, ಪ್ರಾಕೃತಿಕ ವಿಕಲ್ಪಗಳು, ವಿನಾಶ ಮತ್ತೆ ಮಾಲಿನ್ಯದಿಂದುಂಟಾಗುವ ಪ್ರವೃತ್ತಿಗಳು. ಕೊನೆಯವುಗಳಿಗೆ ಮಾನವನೇ ಆಂಶಿಕ ಜವಾಬ್ದಾರನು. ಇಲ್ಲಿನ ವ್ಯತ್ಯಾಸವೆಂದರೆ ಜಾಲಗಳಿಂದ ಮುಕ್ತರಾಗಬೇಕೆನ್ನುವ ಪ್ರಜ್ಞೆ ಇಲ್ಲಿದೆ. ಪರಿಹಾರ ಮಾರ್ಗದಲ್ಲಿ ಎರಡು ವಿಧದವರು: (೧) ಹಣೆಬರಹ, ದುರದೃಷ್ಟ, ನಿರಾಸೆ, ಪೂರ್ವಜನ್ಮದ ಪಾಪಫಲ, ಆನುವಂಶಿಕತೆ, ಅವ್ಯಕ್ತದಲ್ಲಿ ಭರವಸೆ, ಪರರ ಮತ್ತು ಸ್ವನಿಂದನೆ, ಹತಾಶರಾಗಿ ನಿಷ್ಕ್ರಿಯರಾಗಿ ಕೂರುವುದು, ಇವುಗಳಿಂದಾಗಿ ಅಮೂಲ್ಯಶಕ್ತಿಯ ದ್ಯೋತಕ, ಸಂಕಷ್ಟದ ಉಲ್ಬಣತೆ, ಪರಿಹಾರ ಎಲ್ಲರೊಂದಿಗೆ ಕೇಳುತ್ತಾ ನಿದ್ರಿಸಲಾಗದೆ ತೊಳಲಾಟ. (೨) ಕಾರ್ಯತತ್ಪರತೆ – ಇಲ್ಲಿ ಪರಾವಲಂಬನೆ ಎದ್ದು ಬರುತ್ತದೆ. ಅದು ಎಷ್ಟು ಪರಿಣಾಮಕಾರಿ? ಉದಾಹರಣೆಗಳಾಗಿ : ಉದ್ಧಾರ ಮಾಡುವೆವೆನ್ನುವ ಪುಢಾರಿಯಿಂದ ತನ್ನ ದುಷ್ಕಾರ್ಯಗಳಲ್ಲಿ ಬಡವರ ಉಪಯೋಗ, ಭಿಕ್ಷಾಟನೆಯನ್ನು ನಿಲ್ಲಿಸಲು ಹೊರಟು ಭಿಕ್ಷುಕರಿಗಾದ ಸೆರೆಮನೆವಾಸ, ಸ್ವಪ್ರತಿಷ್ಠೆ ಬೆಳೆಯಲೆಂದು ಅಪಾತ್ರರಿಗೆ ಸಾಲ, ಧನ ದಾನ ಮಾಡಿ ಅವರ ಇದ್ದ ಸ್ಥಿತಿಯೂ ಜೀರ್ಣವಾಗುವಿಕೆ, ವೃದ್ಧಾಪ್ಯದಲ್ಲಿ ಸ್ವಾತಂತ್ರ್ಯತೆಯ ಲಾಲಸೆಗೊಳಿಸಿ ಹಿರಿಯರ ನಕ್ಕುನಗಿಸುವ ಚಣ್ಣರಿಂದ ಬೇರ್ಪಟ್ಟು ನರಳುವ, ಸಾಯುವವರೊಂದಿಗಿನ ಆಶ್ರಮದ ವಾಸ – ಇವೆಲ್ಲ ಸಹಾಯಗಳೂ ಪ್ರಶ್ನೆಗುತ್ತರವಾದುವಲ್ಲ.

ಮನುಷ್ಯನಿಗೆ ಎಂದಾದರೂ ಬಂದೇಬರುವ ಸಮಸ್ಯೆಗಳು, ಉದಾಹರಣೆ: ಅನಿರೀಕ್ಷಿತ ವಿಯೋಗ, ವಿಪತ್ತು, ದಾಂಪತ್ಯ ವಿರಸ, ವಿಚ್ಛೇದನ, ಪ್ರಕೃತಿ ವಿಕೋಪ, ಗಂಭೀರ ಸೀಕು – ಪರಿಸ್ಥಿತಿ ಕೈಮೀರಿದಾಗ ಇತರರು – ತಂದೆ, ತಾಯಿ, ಪತ್ನಿಯೇ ಇರಲಿ ಇವುಗಳಲ್ಲಿ – ಎಷ್ಟು ಪಾಲುಗೊಂಡಾರು? ರೋಗಿಯ ಮನೋವೇದನೆ, ನಾಳಿನ ಚಿಂತೆ, ಒಂಟಿತನ, ಮರಣಭಯ – ಹಂಚಿಕೊಂಡಾರೆ? ನಾಲ್ಕು ಸಾಂತ್ವನದ ಮಾತು, ಪುಷ್ಪಗುಚ್ಛ, ತುಸು ಧನಸಹಾಯ, ಶುಭಸಂದೇಶ, ಸಾಮೂಹಿಕ ಪ್ರಾರ್ಥನೆ – ವ್ಯಕ್ತಿ ಪಡುತ್ತಿರುವ ಬವಣೆ ಎದುರಿಗೆ ಇದು, ತುಲನವೆ?

ಹಾಗೆಂದು ಜೀವನದಲ್ಲಿ ಪರಾಶ್ರಯವೇ ಇಲ್ಲವೆ? ವನಜೀವನದಿಂದಲೂ ಅವಲಂಬನೆ ತಪ್ಪಿದ್ದಿಲ್ಲ. ಆಗ ಕಾಡು, ಪ್ರಾಣಿ, ಮರ, ವನಮೂಲಿಕೆ ಮತ್ತೆ ಹರಿಯುವ ನೀರಿನ ಆಸರೆ ಬೇಕಿದ್ದರೆ, ಗ್ರಾಮಜೀವಿಯಾದ ಬಳಿಕ ರಕ್ಷಣೆ, ಇತರರ ಕರಕೌಶಲ್ಯ, ಆಹಾರ ಸಾಮಗ್ರಿ ಮತ್ತಿತರ ಅವಶ್ಯಕತೆಗಳಿಗಾಗಿ ಮಾನವ ಅವಲಂಬಿತನಾಗಿದ್ದಾನೆ. ಆದರೆ ಎಲ್ಲರೂ ಧನ, ಸಾಮಗ್ರಿ, ಜ್ಞಾನದ ಪರಸ್ಪರ ವಿನಿಮಯ ಮಾಡುತ್ತಾ ಹೊಟ್ಟೆಪಾಡಿಗಾಗಿ ಜೀವಿಸುತ್ತಿರುವುದರಿಂದ ಇದನ್ನು ಆಶ್ರಯವೆನ್ನಲಾಗದು. ಸಂಕಷ್ಟಕಾಲದಲ್ಲಿ ತಿಳಿದವರಿಂದ ವಿಚಾರಿಸಿ ಕಡೆಗೆ ತಾನಾಗಿ ನಿರ್ಧಾರ ಮಾಡಿದಾಗ ಪರಾಶ್ರಯ ಎನ್ನಿಸದು.

ಆದರೆ ನಿಜವಾದ ಸಮಸ್ಯೆ ಉಂಟಾಗುವುದು ಲೌಕಿಕ ಮತ್ತು ಅಲೌಕಿಕತೆಗಳನ್ನು ಮಿಶ್ರಿತಗೊಳಿಸಿದಾಗ. ಫಲದ ದೃಢತೆ ಇಲ್ಲದೆ ಪರಿಹಾರಕ್ಕಾಗಿ ಪ್ರಾರ್ಥನೆ, ಧನ, ಯಶಸ್ಸು ಅಥವಾ ಸ್ವರ್ಗಕ್ಕಾಗಿ ಜಪ ತಪಸ್ಸು, ಸಂತಾನಪ್ರಾಪ್ತಿ, ಸತ್ಯದ ಜ್ಞಾನಕ್ಕಾಗಿ ಪಾದಪೂಜೆ, ಗುರುಸೇವೆ ಇತ್ಯಾದಿ. ಇಲ್ಲಿನ ವಿಡಂಬನೆ ಎಂದರೆ ವರ್ಷವಿಡೀ ಒಂದಿಗಿದ್ದು ವಿದ್ಯೆ ಹೇಳಿ ಮೇಲ್ತಂದ ಗುರುವನ್ನು ಹಾಗೆಯೇ ಮೃತ್ಯುದವಡೆಯಿಂದ ಪ್ರಾತ್ಯಕ್ಷಿಕವಾಗಿ ಪಾರುಮಾಡಿದ ೨೦ ವರ್ಷ ಅನುಭವ, ಸಾಧನೆಯ ಸರ್ಜನ್‌ನನ್ನು ಅಥವಾ ಕಠಿಣವಾದ ಪ್ರಸವ ಕೇಸನ್ನು ಯಶಸ್ವಿಗೊಳಿಸಿದ ವೈದ್ಯನನ್ನು ವ್ಯಕ್ತಿ ಹಣವಿತ್ತು ಒಡನೆಯೇ ಮರೆಯುವನು. ಆದರೆ ಕಾವಿಯುಟ್ಟು ವಿಭೂತಿ ಧರಿಸಿ, ನಾಲ್ಕು ಸಂಸ್ಕೃತ ಶ್ಲೋಕವಾಡಿದ ಸಾಧುವಿಗೆ ಜೀವನವನ್ನೇ ಧಾರೆ ಎರೆಯುವನು. ಮೌಲ್ವಿ, ಗುರು ಆಜ್ಞಾಪಿಸಿದರೆ ಪರಮತೀಯರನ್ನು ಕೊಲ್ಲಲೂ ಸಿದ್ಧನು. ವಿದ್ಯಾವಂತರಲ್ಲೂ ಎದ್ದುಕಾಣುವ ಮಾನಸಿಕ ದಾಸ್ಯಕ್ಕೆ ಬೇರೆ ನಿದರ್ಶನ ಬೇಕಿಲ್ಲ.

ವಿವೇಚನಾಭರಿತ ಕರ್ಮದಿಂದಲ್ಲದೆ ಸಮಸ್ಯೆಗೆ ಬೇರೆ ನಿವಾರಣೆ ಇಲ್ಲ. ಅಡ್ಡದಾರಿ ಹಿಡಿಯದೆ ಒಡನೆಯೇ ಸರಿಯಾದ ಮಾರ್ಗ ಹಿಡಿದು ವಿಶ್ವಾಸದಿಂದ ಮುನ್ನಡೆಯುವುದು ನಿಜವಾದ ಜಾಣ್ಮೆಯ ಮಾರ್ಗ.

೩. ಯಾರನ್ನೂ ಬೆಂಬಿಡದ ಮಹಾಸಮಸ್ಯೆ 'ಚಿಂತೆ' ಎಂಬ ಪೆಡಂಭೂತ. ಕಣ್ಣಿಗೆ ಕಾಣದು, ಆದರೆ ಬೃಹದ್ರೂಪ ಧರಿಸಿ ಇತರರನ್ನು ಸದಾ ಕೊರೆಯುತ್ತಿರುವುದು. ಇದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ನಿನ್ನೆಯದೋ ನಾಳೆಯದೋ ಒಂದು ವಿಷಯವೆಂಬ ಅಶ್ವದ ಮೇಲಿನ ಕಾಲ್ಪನಿಕ ಸವಾರ. ಸೀಕಿನ ಉಲ್ಬಣತೆ, ವಿಪತ್ತು, ನೋವು, ಒಂಟಿತನ, ಸಾಲಗಾರನ ಕರೆ, ಷೇರುಪೇಟೆ ಕುಸಿತ, ಧನನಷ್ಟ, ಮುದಿತನಕ್ಕೆ ಆಧಾರ, ಕೆಲಸದ ಒತ್ತಡ, ಮಾಡಿದ ತಪ್ಪಿಗಾಗಿ ಶಿಕ್ಷೆ, ನಿರೀಕ್ಷಿತ ಅಪಮಾನ, ಮರಣ – ಇವೆಲ್ಲ ಆಗುವ ಮೊದಲೇ ಇವನ್ನನುಭವಿಸಿ ಭಯಪಡುವುದು. ನಿನ್ನೆಯ ನೆನಪು, ನಾಳೆಯ ಭಯ – ಎರಡಕ್ಕೂ ಜತೆ. ಇಲ್ಲದ ಸನ್ನಿವೇಶಗಳನ್ನು ಕರಾಳರೂಪದಲ್ಲಿ ಚಿತ್ರಿಸುವುದು ಸೋಮಾರಿ ಮನಸ್ಸಿನ ಕೆಲಸ. ಯಾವುದೂ ಇಲ್ಲವೆಂದಾದರೆ ದೂರದಿಗಂತದಿಂದ, ಭ್ರಮಾಲೋಕದಿಂದ ಏನನ್ನಾದರೂ ಸೃಷ್ಟಿಸಬಲ್ಲದು. ಚಿಂತೆ ಇಲ್ಲವೆನ್ನುವುದು ತಪ್ಪು. ಅಹಂಕಾರ ಎಂಬ ಭಯ, ಜೀವಿಸಲು ಒಬ್ಬ ಗುರು, ಶಕ್ತಿ, ಗ್ರಂಥ, ನಂಬಿಕೆ – ಎಲ್ಲ ಊರುಗೋಲಾದಂತೆ ಒಂದು ಚಿಂತೆಯೂ ಬೇಕು. ಕೆಲವರು ಇದನ್ನೇ ಹಿರಿದಾಗಿಸಿ ಕೊರಗುತ್ತಾ ಸತ್ತರೆ, ಹಲವರು ತಮ್ಮವನ್ನು ವಿಶ್ಲೇಷಿಸಿ ಇತರರ ಮನಃಸ್ಥಿತಿಯನ್ನೂ ನರಕವಾಗಿಸುತ್ತಾರೆ.

ನಾಳೆಯ ದಿನ ದುರ್ದಿನವೆ ಯಾಕಾಗಬೇಕು? ಸುದಿನವಾಗದೇ? ಏನೇ ಇರಲಿ. ಅದಕ್ಕಾಗಿ ತಲೆಕೆಡಿಸುವುದು ಶಕ್ತಿಯ ದುರ್ವ್ಯಯ. ಸುತ್ತಲಿನ ಜಗತ್ತು, ಸಮಾಜ ತನ್ನೊಬ್ಬನ ಸಂತೋಷಕ್ಕಾಗಿಯೇ ನಿರ್ಮಿತವಾದುದಲ್ಲದೆ ತಾನೊಬ್ಬನೆ ಅದಕ್ಕೆ ಹಕ್ಕುದಾರನೆಂಬ ಈ ದೃಷ್ಟಿ ಸ್ವಾರ್ಥಾಭಿಲಾಷೆಯ ಪರಮಾವಧಿ. ಸತ್ಯವೆಂದರೆ ಜೀವವಸ್ತುಗಳೆಲ್ಲ ತಮ್ಮದೇ ಆದ ಕ್ರಮದಲ್ಲಿ ಸಾಗುತ್ತವೆ. ಎಚ್ಚರದಿಂದ ಸುತ್ತ ನೋಡಿದಲ್ಲಿ ಸಮಸ್ಯೆಗಳು ಯಾರ ಜೀವನವನ್ನೂ ಬಿಟ್ಟಿಲ್ಲ. ಆದ್ದರಿಂದ ಇತರರಿಗೆ ಹಾನಿಕಾರಕರಾಗುವ ಬದಲಿಗೆ ಸಾಧ್ಯವಾದಷ್ಟು ಪೂರಕನಾಗಿ ಜೀವನದಲ್ಲಿ ತನ್ನ ಜವಾಬ್ದಾರಿಗಳಿಂದ ಚ್ಯುತರಾಗದೆ ತೃಪ್ತಿ ಪಡೆಯುವುದು ಸಾಧ್ಯವಿಲ್ಲವೇ? ಇಷ್ಟಾಗಿ ನಿಜವಾದ ಘಟನೆಯಲ್ಲಿ ಚಿಂತೆ ಇದೆಯೇ? ಆಪ್ತನ ಅನಿರೀಕ್ಷಿತ ಸಾವು, ಹಾವು ಅಥವಾ ಬೆಂಕಿ ಕಂಡಾಗ ಚಿಂತಿಸುತ್ತಾ ಕೂರದೆ, ಒಡನೆಯೇ ಕಾರ್ಯಗತನಾಗುತ್ತಾನೆ. ಭಾವನೆಗಳಿಗೆ ಗುಲಾಮನಾಗದೆ ಸದಾ ಕಾರ್ಯತತ್ಪರನಾಗಿರುವುದು ಪೂರ್ಣ ವ್ಯಕ್ತಿತ್ವದ ಗುಣ. 'ನಿನ್ನೆ ನಾಳೆಯನ್ನು ಮರೆತು ಇಂದು ಈ ಕ್ಷಣದ ಜೀವನವನ್ನು ಸ್ವಾದಿಸುತ್ತಾ ಮುಂದುವರಿಸುವುದು' ಚಿಂತೆಯನ್ನೋಡಿಸುವ ಏಕೈಕ ಮಾರ್ಗ.

**ಪ್ರೀತಿಯ ಪಾತ್ರ** : ಸಂಬಂಧದಲ್ಲಿ ವ್ಯಾವಹಾರಿಕತೆ ಮತ್ತು ಭಾವುಕತೆಗಳಿಗೆ ಹೊರತಾದುದು ಏನಾದರೂ ಇದ್ದರೆ ಅದೇ ಪ್ರೀತಿ, ಕರುಣೆ. ಇದು ಸರ್ವತೋಮುಖವಾದುದು, ಎಂದೂ ಕುಂದದು, ಸಮುದ್ರರೂಪದಲ್ಲಿ ಎಲ್ಲೆಡೆಯಲ್ಲೂ ಅಬಾಧಿತವಾಗಿ ನಿರರ್ಗಳವಾಗಿ ಹರಿಯುವುದು. ಒಬ್ಬ ವ್ಯಕ್ತಿಗಲ್ಲ, ವಿಶ್ವಕ್ಕೇ ಒಳ್ಳೆಯದಾಗಲೆಂಬ ಭಾವನೆ. ಕರುಣಾಭರಿತನು ಎಲ್ಲ ವಸ್ತುಗಳೊಂದಿಗೂ ಸಮಚಿತ್ತನಾಗಿದ್ದು ಏನನ್ನೂ ಆಶಿಸನು, ಫಲ ವ್ಯತಿರಿಕ್ತವಾದರೂ ಮಾರ್ಗ ಬದಲಾಯಿಸನು. ಇನ್ನೊಬ್ಬರ್ವನ ಕಷ್ಟದ ಸ್ಥಿರ ಪರಿಹಾರಕ್ಕಾಗಿ ಕಳಕಳಿಯೊಂದಿಗೆ ಶ್ರಮಿಸುವನು. ಗುರುವೆನ್ನಿಸಿಕೊಳ್ಳದೆ ದಾರಿತೋರುವನು. ಗಾಂಧಿ, ಬುದ್ಧ, ಕ್ರಿಸ್ತರಿಗೆ ವಿಶ್ವವೆಲ್ಲವೂ ಮಿತ್ರ – ಶಿಲುಬೆಯನ್ನೇರಿದಾಗಲೂ ಏಸುವಿನ ಪ್ರಾರ್ಥನೆ "ದೇವನೇ, ಇವರನ್ನು ಮನ್ನಿಸು, ಇವರು ಬುದ್ಧಿವಿಹೀನರು". ತಾಯಿ ಮಗು ಪತಿ ಪತ್ನಿಯರ ನಡುವೆ ಭಾವುಕತೆಯ ನಡುವೆ ಈ ಪ್ರೀತಿಯನ್ನು ಕಾಣಬಹುದು. ಇಲ್ಲಿ ತಾಯಿ ಮಗುವನ್ನು ಸಾಕುವಾಗ ನಾಳೆ ಅದು ತನ್ನನ್ನು ನೋಡಿಕೊಂಡೀತೆಂದು ಯೋಚಿಸಳು. ವಿಧೇಯರಾಗಿ ಮುಂದಕ್ಕದು ತನ್ನನ್ನು ಸಲಹಬೇಕೆನ್ನುತ್ತಾ ಆರೈಕೆ ಮಾಡಿದಷ್ಟು ಅವಳಿಗೆ ನಿರಾಸೆ ತಪ್ಪದು. ಆಗ ತಾಯ ಭಾವನೆಯನ್ನರಿತು ಅದು ತನ್ನದೇ ರಸ್ತೆಯಲ್ಲೋಡುತ್ತದೆ.

"ಅವನು ನನಗೆ ಸಹಾಯ ಮಾಡಿದ್ದರಿಂದ ಕೃತಜ್ಞತೆ ಹಿಂತಿರುಗಿಸುವುದು" ಈ ಹೇಳಿಕೆಯ ಇನ್ನೊಂದು ಮುಖ. ಇವನೊಬ್ಬ ನನಗೆ ಸಮಯಕ್ಕೆ ಕೈಕೊಟ್ಟದ್ದರಿಂದ ಅವನ ಈ ಕಷ್ಟಕಾಲದಲ್ಲಿ ಸುಮ್ಮನಿದ್ದು ಚಂದನೋಡುತ್ತೇವೆ. ಅಂತೆಯೇ ಮುತ್ತೈದೆಯಾಗಿ ಸಾಯಲಿಚ್ಛಿಸುವುದು – ಇವೆಲ್ಲ ಪ್ರೀತಿಯ ದ್ಯೋತಕವಲ್ಲ. ಹೃದಯ ವಿಹೀನತೆಯ, ಪರಾವಲಂಬನೆಯ ಪರಮ ದೃಷ್ಟಾಂತಗಳು. ಜೀವನವನ್ನು ಸ್ವತಂತ್ರವಾಗಿ ಎದುರಿಸಲು ಭಯ. ನಿಜವಾದ ಪ್ರೀತಿಯಲ್ಲಿ ಆಸೆ ಇಲ್ಲ, ಬರೀ ಜವಾಬ್ದಾರಿಯುತ ಕರ್ತವ್ಯಪ್ರಜ್ಞೆ.

ಭಾವುಕತೆಯು ಹೊರಗಿಂದ ಬಿರುಗಾಳಿಯಂತೆ ಬೀಸಿ ನಂದಿದರೆ ಪ್ರೀತಿ ಒಳಗಿಂದುಬ್ಬುವ ಕಾರಂಜಿಯಂತೆ ಚಿಮ್ಮುತ್ತಾ ಸುತ್ತಲೂ ತಾನಾಗಿ ಕಂಪುಬೀರುತ್ತದೆ. ಆತ್ಮನಿಗ್ರಹ, ಶಿಸ್ತು, ದೈವ, ಗುರುಹಿರಿಯರ ಅನುಗ್ರಹ, ಅಭ್ಯಾಸ, ಧ್ಯಾನದಿಂದ ಇದು ಬೆಳೆಯದು. ಪರರಲ್ಲಿ ಅನುಕಂಪ, ಕರುಣೆ, ದಯೆ ಬೆಳೆಯಲು ನಿರ್ಧರಿತ ಮಾರ್ಗವಿಲ್ಲ. 'ನಾನು' 'ಅಹಂ' ಎನ್ನುವ ಭಾವ ಸ್ಥಿರವಾಗಿ ಅಳಿದರೆ ಮಾತ್ರ ಸಾಧ್ಯವೆನ್ನಬೇಕು. ಶಬ್ದಾತೀತವಾದ ಈ ಸ್ಥಿತಿಯನ್ನು ಒಬ್ಬನು ಅಂತರ್ಮುಖಿಯಾಗಿ ಮಾತ್ರ ಗ್ರಹಿಸಲು ಸಾಧ್ಯ. ಲೋಕದ ಎಲ್ಲ ಪಾಪಕ್ಕೂ ನೀನೇ ಹೊಣೆಗಾರ. ಜವಾಬ್ದಾರನಾಗಿರುವುದಷ್ಟೇ ನಿನ್ನ ಕರ್ತವ್ಯ. "ನೀವು ನಿಮ್ಮ ಮಕ್ಕಳನ್ನು ಪ್ರೀತಿಸುವುದಾದರೆ ಲೋಕದಲ್ಲೆಲ್ಲೂ ಯುದ್ಧವಾಗದಂತೆ ನೋಡುವಿರಿ" – ಎಂತಹ ಅರ್ಥಗರ್ಭಿತ ಮಾತುಗಳಿವು ಜಿಡ್ಡು ಕೃಷ್ಣಮೂರ್ತಿಯವರದ್ದು?

**ಇತರರ ಮೇಲೆ ದಬ್ಬಾಳಿಕೆ** : ಪ್ರೀತಿಯ ಇನ್ನೊಂದು ಗುಣ ಇತರರನ್ನು ಅಧೀನನಾಗಿಸದಿರುವುದು. ಪರಾವಲಂಬಿತನ ಅಭ್ಯಾಸ ಗುಣವೆಂದರೆ ಪುನಃ ಪುನಃ ಗುರುವನ್ನು ಪರರನ್ನು ಆಸರೆಯನ್ನರಸುತ್ತಾ ಹೋಗುವುದು. ತಾನು ಇದರಿಂದ ಮುಕ್ತನಾಗುವುದು ಎಷ್ಟು ಮುಖ್ಯವೋ ಇತರರೂ ತನ್ನಿಂದ ಸ್ವತಂತ್ರರಾಗಿರುವುದು ಅಷ್ಟೇ ಮುಖ್ಯ – ಎಂದರೆ ಯಾರೊಬ್ಬರ ವಿಷಯಕ್ಕೂ ಅನಾವಶ್ಯಕವಾಗಿ ತಲೆಹಾಕದಿರುವುದು. ಇದನ್ನು ಮೊದಲಾಗಿ ತನ್ನ ಜೀವನದಲ್ಲಿ ಅಳವಡಿಸುವುದು ಅವಶ್ಯ. ಎಂದರೆ ಸಾಮಾಜಿಕ ಜವಾಬ್ದಾರಿಯಿಂದ ಪಲಾಯನವೆಂದಲ್ಲ. ಕುಟುಂಬದ ಎಲ್ಲ ಸದಸ್ಯರಲ್ಲೂ ಜವಾಬ್ದಾರಿ ದೃಷ್ಟಿಯನ್ನಾಗಿಸುವುದು. ಹಿಂದುಳಿದ ಸಮಾಜಗಳಲ್ಲಂತೂ ಇದೊಂದು ಮಹಾಗೀಳು. ಕುಟುಂಬ ಗೌರವ, ವಂಶಪಾರಂಪರ್ಯ, ಜಾತಿಮರ್ಯಾದೆ ಎಂಬ ಒಣಪ್ರತಿಷ್ಠೆಗಳ ನಡುವೆ ಯಜಮಾನನ ಎದುರು ಪತ್ನಿ ಮತ್ತೆ ಪ್ರಾಯದ ಮಕ್ಕಳಿಗೂ ವ್ಯಕ್ತಿತ್ವವಿಲ್ಲ. ಎಲ್ಲರೂ ಹಿರಿಯರ ನೆರಳನ್ನು ಅನುಸರಿಸುತ್ತಿರಬೇಕು. ಇದು ದೈಹಿಕ, ಮಾನಸಿಕ ಗುಲಾಮಗಿರಿಯ ಸಂಪೂರ್ಣ ದೃಷ್ಟಾಂತ. ಯಾವುದೇ ಕ್ಷಣದಲ್ಲಿ ತಾನು ಗತಿಸಿದರೆ ಪತ್ನಿ, ಪತಿ, ಮಕ್ಕಳು ತಮ್ಮ ಜೀವನ ನಿಭಾಯಿಸಲು ಶಕ್ತರಾಗಿರುವರೆ, ಅದೇ ಮಟ್ಟದಲ್ಲಿ ಜೀವನ ನಡೆದೀತೆ – ಎಂಬ ಬಗ್ಗೆ ಎಷ್ಟು ಜನ ಚಿಂತಿತರಾಗಿ, ಕಾರ್ಯವಹಿಸುತ್ತಾರೆ?

ದೈಹಿಕದಾಸ್ಯಕ್ಕಿಂತ ಮಾನಸಿಕ ಗುಲಾಮಗಿರಿಯು ಅತಿ ಹಾನಿಕಾರಕವಾದುದು. ವಿಶ್ವದಲ್ಲಿ ಸಾಧಾರಣ ೪೦ ಶತಮಾಂಶವಾಗಿರುವ ಹಿಂದೂ, ಬೌದ್ಧ ಮತ್ತು ಮುಸ್ಲಿಂ ಸಮುದಾಯದಲ್ಲಿ ಎಷ್ಟು ಜನ ತಮ್ಮ ಧರ್ಮ ಅಥವಾ ಆಚರಣೆಗಳ ಬಗ್ಗೆ ತಮ್ಮದೇ ಆದ ಯೋಚನೆ ಮಾಡಿ ಭಾವನೆಯನ್ನು ಪ್ರಕಟಿಸಲು ಶಕ್ತರಾಗಿ ಧೈರ್ಯ ಪಡೆದಿದ್ದಾರೆ. ಈ ಹಾನಿಯ ಅರಿವು ವೇದನೆ ಪಡುತ್ತಿರುವವರಿಗೆ ಬದಲಾಗಿ ನರಳಿಸುತ್ತಿರುವವರಿಗೆ ಬಂದಾಗ ಮಾತ್ರ ಜೀವನದಲ್ಲಿ ವಿಶಾಲಮಟ್ಟದ ಕ್ರಾಂತಿ, ಸುಧಾರಣೆ, ಬದಲಾವಣೆ ಸಾಧ್ಯ. ಸಮಾಜದಲ್ಲಿ ಸ್ತ್ರೀ ಮತ್ತೆ ಅಬಲರ ಸ್ಥಾನಮಾನ ಆ ಸಂಸ್ಕೃತಿಯ ಬೆಳವಣಿಗೆಯ ಕೈಗನ್ನಡಿ.

**ಅಬಲೆಯರು, ಅಪ್ರಾಯಸ್ಥರಿಂದ ಪರಾವಲಂಬನೆ:** ಇವರು ಲೋಕದ ಮುಕ್ಕಾಲಂಶವಾಗಿ, ಹಿರಿಯರ ಸಂಪ್ರದಾಯಿತ್ವದ ದಬ್ಬಾಳಿಕೆಯಲ್ಲೇ ಬೆಳೆಯುವರು. ಇಲ್ಲಿ ಸ್ವತಂತ್ರ ನಿರ್ಣಯಕ್ಕೆ ಆಸ್ಪದವಿಲ್ಲ. ಜೀವನದ ಅಧಿಕಾರವಿಲ್ಲ. ಅಂತಹವರು ಹೇಗೆ ಸ್ಪಂದಿಸಬೇಕೆಂಬುದು ಪ್ರಶ್ನೆ.

ಈ ಲೇಖನದಲ್ಲಿ ನಾವು ಬಯಸುವುದು ಆಂತರಿಕ ದೃಷ್ಟಿಕೋನದ ಪರಿವರ್ತನೆ. ಬಾಹ್ಯಕ್ರಿಯೆಗಳು ಇದರ ಯಾಂತ್ರಿಕ ಪರಿಣಾಮ. ಹಾಗಾಗಿ, ಆಚಾರವಂತ ಪುರೋಹಿತ, ಮೌಲ್ವಿ ಮನೆತನ, ಕಾರಾಗೃಹ ಅಥವಾ ಕಮ್ಯುನಿಸಮ್ ಆಡಳಿತ – ಎಲ್ಲೇ ಇರಲಿ ಒಬ್ಬನ ಮನಸ್ಸಿನ ದೊರೆ ಅವನೇ. ಬಾಹ್ಯಜಗತ್ತು ಬದಲಾಗಬೇಕೆನ್ನುವ ಹಕ್ಕು ತನಗಿಲ್ಲ. ತನ್ನ ಸಮಸ್ಯೆಗೆ ಪರಿಹಾರ ನಿಶ್ಚಯಿಸುವುದಕ್ಕೆ ಸ್ವ-ಜೀವನದಲ್ಲಿ ಅಳವಡಿಸುವುದಕ್ಕೆ ಬಾಧೆ ಏನಿಲ್ಲ.

ಕೆಲವರಿಗೆ ಇದು ಅಸಾಧ್ಯವೆನಿಸಿದರೆ ಜವಾಬ್ದಾರಿ ಪರಿಸರವಲ್ಲ, ಆಂತರಿಕ ಭಾವನೆಗಳಲ್ಲಿ ಇಲ್ಲದ ಗಹನತೆ, ಗಂಭೀರತನ ಇದ್ದರೆ ಪರರು ತಾವಾಗಿ ಬಾಗುತ್ತಾರೆ. ದಾರಿ ಕಾಣುತ್ತದೆ. ಇತರರನ್ನು ದೂಷಿಸುವುದು ಹೇಡಿತನ.

ಹಾಗೆಂದು ಸಮಾಜ ಜೀವನವೆಂದರೆ ಸಾಮೂಹಿಕ ಸಮನ್ವಯ. ಸ್ವತಂತ್ರತೆ ಎಂದರೆ ಹಿಮಾಲಯದ ಪರ್ವತ, ಕಾಡೇ ಗತಿ. ಅದೊಂದು ಅರ್ಥವಿಹೀನ ಬಾಳ್ವೆ. ಆದ್ದರಿಂದ ಸಮಾಜದಲ್ಲಿದ್ದೇ ತನ್ನ ವ್ಯಕ್ತಿತ್ವದೊಂದಿಗೆ ಬಾಳು ಸಾಧ್ಯವೇ? ಇದಕ್ಕುತ್ತರವಾಗಿ ಪ್ರತಿ ಕುಟುಂಬದಲ್ಲೂ ''ಅತ್ತೆಗೊಂದು ಕಾಲವಾದರೆ ಸೊಸೆಯ ಕಾಲ''ವೂ ಬರಲೇಬೇಕಲ್ಲ? ಇದರರ್ಥ ಇನ್ನೊಬ್ಬ ಸೊಸೆಯನ್ನು ದಬ್ಬಾಳಿಸುವುದೆಂದಲ್ಲ. ಯಾರೊಬ್ಬನ ಜೀವನದ ಮೇಲೂ ಇಡೀ ಸಮಯ ಇನ್ನೊಬ್ಬ ತಲೆಮೇಲೆ ಕುಳಿತಿರಲು ಸಾಧ್ಯವಿಲ್ಲ. ಅಲ್ಲದೆ ಆಂತರ್ಯದಲ್ಲಿ ಪ್ರಕಾಶ ವಿರಾಜಿಸುತ್ತಿದ್ದರೆ ಇತರರು ತಾವಾಗಿ ಬಾಗುವರು. ಬಾಲವಿಧವೆಯಾದರೂ ತನ್ನ ಕಳಕಳಿ ಮನೋಭಾವ, ಒಂದೊಮ್ಮೆಗಿನ ಸಲಹೆಗಳಿಂದ ಇತರರ ಬಾಳನ್ನು ಬೆಳಗಿಸಬಲ್ಲಳು. ಹಿರಿಯರು ಹೇಳಲಿ, ಬಿಡಲಿ, ಮಕ್ಕಳು ಪ್ರಾಯದ ಪ್ರತಿಹಂತದಲ್ಲೂ ಜೀವನದ ನಿರ್ಣಯಗಳನ್ನು ಮಾಡಬಲ್ಲವರಾದರೆ, ಸ್ವತಂತ್ರವಾಗಿ ಲೋಕವನ್ನು ವೀಕ್ಷಿಸಿ ವಿಮರ್ಶಿಸಬಲ್ಲವರಾದರೆ, ವಿಕಸಿತ ಜೀವನದ ಮಾರ್ಗ ತಾನಾಗಿ ತೆರೆಯುತ್ತದೆ. ವ್ಯಕ್ತಿಯ ವಿವೇಚನಾಶಕ್ತಿಗೆ ಬಾಹ್ಯಪರಿಮಿತಿ ಇಲ್ಲ. ಗಾಂಧಿ ಸಮಾಜಕ್ಕಂಜಿ ಕುಳಿತಿದ್ದರೆ ಸ್ವಾತಂತ್ರ್ಯ ಆಗ ಸಿಗುತ್ತಿತ್ತೆ?

**ದೈಹಿಕ ಆರೋಗ್ಯದ ಪಾತ್ರ :** ಪರಾಶ್ರಯರಹಿತ ಜೀವನದ ಅರಿವುಂಟಾಗುವ ಬಗೆ ಹೇಗೆ? ಪುಸ್ತಕ, ಭಾಷಣ, ಪ್ರವಚನ, ದೈವಾನುಗ್ರಹ, ಪೂರ್ವಪುಣ್ಯಗಳಿಂದಾಗದು. ಇವೆಲ್ಲ ಬೇರೆ ಬೇರೆ ಗುರುಗಳೆಡೆಗೆ ಒಯ್ಯುವ ಮಾರ್ಗ. ಜೀವನದಲ್ಲಿ ಈ ತತ್ವಗಳನ್ನು ಅಳವಡಿಸಿರುವವರ ಪ್ರತ್ಯಕ್ಷ ಅನುಭವ, ಸಂಪರ್ಕ ಒಂದು ಆಂಶಿಕ ದಾರಿ. ಆದ್ದರಿಂದ ಹಿರಿಯರಾದಂತೆ ವ್ಯಕ್ತಿಯ ಜವಾಬ್ದಾರಿ ಹೆಚ್ಚುತ್ತದೆ. ತನ್ನಿಂದ ಇತರರು ಯಾವ ತೆರನಾದ ಸಂದೇಶ ಪಡೆಯುತ್ತಿದ್ದಾರೆ? ಬೇಸರಪಟ್ಟು ಶಪಿಸಿ ದೂರ ಓಡುವವರಾದರೆ ತನ್ನ ಜೀವನ ವ್ಯರ್ಥವಲ್ಲವೆ?

ಸ್ವತಂತ್ರ ಬಾಳ್ವೆಯ ಮೊದಲ ಅಂಗ ದೈಹಿಕ ಮಾನಸಿಕ ಆರೋಗ್ಯ, ಸಂತುಲಿತ ಮನೋಭಾವ, ಶಾಂತ ಪ್ರವೃತ್ತಿ, ನಿತ್ಯರೋಗಿಯು ಎಂದೆಂದೂ ಪರಾಶ್ರಯಿ. ಒಮ್ಮೆಯ ವಿಶ್ವಾಸ ಕಳಕೊಂಡಲ್ಲಿ ಅಂತಹವನಿಗೆ ಜೀವನದ ಮೌಲ್ಯವೇ ಬದಲಾಗುತ್ತದೆ. ಆರೋಗ್ಯ ದೈವಾನುಗ್ರಹವಲ್ಲ, ಗುಣಮಟ್ಟದ ಮಿತ ಆಹಾರ, ದೈಹಿಕ ಪರಿಶ್ರಮ, ವ್ಯಾಯಾಮ, ಸರ್ವಾಂಗಗಳ ಸಮಾನ ಉಪಯೋಗ, ಮಾನಸಿಕ, ದೈಹಿಕ ಶಕ್ತಿಗಳ ಸಮವಿಯೋಜನೆ, ಮತ್ತೊಂದು ತಾತ್ವಿಕ ದೃಷ್ಟಿಕೋನ – ಇವುಗಳಿಂದ ಸಂಪಾದಿಸುವುದು. ಮಾನವ ಸಂಬಂಧಕ್ಕೆ ಅರ್ಥವೇ ಇಲ್ಲವೇ? ಲೋಕದಲ್ಲಿ ಕೊಂಡುಕೊಡುವ ವ್ಯಾವಹಾರಿಕತೆಯೇ ತುಂಬಿರುವುದಾದರೆ ಪ್ರೀತಿ ಕಾರುಣ್ಯ ಎಂಬುದು ಎಲ್ಲಿದೆ? ಹಣ ಪಡೆದು ವ್ಯಾಪಾರಿ ಸಾಮಗ್ರಿ ಕೊಡುವಂತೆ, ದಕ್ಷಿಣೆ ಪಡೆದು ಅರ್ಚಕ ಪೂಜೆ ಮಾಡುವಂತೆ, ಸೇವೆ ಮಾಡಿಸಿ 'ಗುರು' ವಿದ್ಯೆ ಕೊಡುವಂತೆ, ಪುರಸ್ಕರಿಸಿಕೊಂಡು ಹಿರಿಯರು ಆಶೀರ್ವದಿಸುವಂತೆ. ಕಷ್ಟವನ್ನರುಹದೆ, ಪ್ರಾರ್ಥಿಸದೆ, ಸ್ತುತಿಸದೆ ದೇವನೂ ಅನುಗ್ರಹಿಸನು, ಸ್ವರ್ಗಪ್ರಾಪ್ತಿ ಇಲ್ಲ, ಪುಣ್ಯ ಮಾಡಿದರೆ ಮುಕ್ತಿ, ಶ್ರೇಷ್ಠಯೋನಿಯಲ್ಲಿ ಜನ್ಮ, ಕೃತಜ್ಞತೆಯ ನಿರೀಕ್ಷೆ ಕೂಡ ವ್ಯವಹಾರ. ಸಂಬಂಧದಲ್ಲಿ ಒಮ್ಮೆ ವ್ಯಾವಹಾರಿಕತೆ, ಭಾವುಕತೆ ಸೇರಿದರೆ ಅಲ್ಲಿ ಪ್ರೀತಿಗೆ ಬೆಲೆ ಇಲ್ಲ. ಆದ್ದರಿಂದ ನಾವು ಪ್ರಾಮಾಣಿಕವಾಗಿ ಪ್ರಶ್ನಿಸಿಕೊಳ್ಳಬೇಕಾದ ವಿಷಯ ಇತರರೊಂದಿಗಿನ ನಮ್ಮ ಸಂಬಂಧ ಯಾವ ತೆರನಾದದ್ದು?

ಸಾರಾಂಶವಾಗಿ ಪರಿಪೂರ್ಣ ಸ್ವಾವಲಂಬನೆ ಎಂದರೆ ವಿಚಾರಿಸದೆ ಧುಮುಕುವುದೆಂದಲ್ಲ. ಜೀವಂತ ಸಮಸ್ಯೆಗೆ ಪ್ರಕೃತಿಯ ತಕ್ಕ ಮೂಲಗಳಿಂದೆಲ್ಲ ವಿಷಯ ಸಂಗ್ರಹಿಸಿ, ಹಂಸಕ್ಷೀರನ್ಯಾಯದಂತೆ ಸ್ವೀಕರಿಸಿ ತನ್ನೊಳಗೆ ಜೀರ್ಣಿಸಿ ಕಾರ್ಯಗತವಾಗಿಸುವುದು. ಪ್ರಕೃತಿಯೇ ಗುರು. ಅದರ ಎಲ್ಲ ಅಂಗಗಳೂ ಸಮಾನ ಪೂರಕಗಳು. ಅವುಗಳಲ್ಲಿ ತಾರತಮ್ಯ ಮಾಡಿದರೆ ಅಥವಾ ಯಾವುದೋ ಕೆಲಸಕ್ಕೆ ತನ್ನನ್ನು ಬಲಿಯಾಗಿಸಿದರೆ ಹಾನಿ ನಿಶ್ಚಿತ. ಈ ವಿಶ್ವಾಸವಿದ್ದಲ್ಲಿ ಒಂದೊಮ್ಮೆಗೆ ವಿಫಲ ಕಂಡರೂ ನಿರಾಸೆ ಪಶ್ಚಾತ್ತಾಪವಿಲ್ಲದೆ, ವ್ಯಕ್ತಿ ಧೈರ್ಯದಿಂದ ಜೀವನವನ್ನೆದುರಿಸುತ್ತಾನೆ.


ಪಿ. ಎಲ್. ರಾವ್
೫೭, ೨ನೇ ಮುಖ್ಯರಸ್ತೆ, ಪ್ರಶಾಂತನಗರ
ಬೆಂಗಳೂರು - ೫೬೦ ೦೭೯




## ಗಾಂಧಿ ಆಗಬೇಕ್ಕಂದುಕೊಂಡಾಗ...

ಗಾಂಧಿ ಆಗಬೇಕ್ಕಂದುಕೊಂಡಾಗ
ತುಂಡು ಬಟ್ಟೆಯಲ್ಲಿ ತಿರುಗಾಡಬೇಕಲ್ಲ
ಜನ ನನ್ನ ನೋಡಿ ಬೆತ್ತಲ ಕತೆ-
ಕಟ್ಟುತ್ತಾರೆಂಬ ಚಿಂತೆ!

ಗಾಂಧಿ ಆಗಬೇಕ್ಕಂದುಕೊಂಡಾಗ
ಕೋಲು ಹಿಡಿದು ತಿರುಗಾಡಬೇಕಲ್ಲ
ಕೋಲು ಕಂಡ ಜನ, ಕೋಲಾಹಲ
ಎಬ್ಬಿಸುವರೆಂಬ ಚಿಂತೆ!

ಗಾಂಧಿ ಆಗಬೇಕ್ಕಂದುಕೊಂಡಾಗ
ಬೋಳು ತಲೆಯಲ್ಲಿ ತಿರಗಾಡಬೇಕಲ್ಲ
ಬಿಸಿಲು ಧಗೆಯಲ್ಲಿ ಜನ, ಮೊಟ್ಟೆ ಬೇಯಿಸಿ
ಹೊಟ್ಟೆ ತುಂಬಿಸಿಕೊಳ್ಳುತ್ತಾರೆಂಬ ಚಿಂತೆ!

ಗಾಂಧಿ ಆಗಬೇಕ್ಕಂದುಕೊಂಡಾಗ
ದಪ್ಪ ಕನ್ನಡಕ ಕಣ್ಣಿಗೆ ಹಚ್ಚಬೇಕಲ್ಲ
ಕನ್ನಡಕ ಕಂಡ ಜನ, ಕಣ್ಣು ಕಾಣ್ಸೋದಿಲ್ಲಂತ
ತಿಳಿದು, ಕಂಡಲ್ಲಿ ಗುಂಡಿಟ್ಟು ಕೊಲ್ಲುತ್ತಾರೆಂಬ ಚಿಂತೆ!

ಗಾಂಧಿ ಆಗಬೇಕ್ಕಂದುಕೊಂಡಾಗ
ನನ್ನ ಅಂಥಾವ್ರೆ ಜಗದ ತುಂಬೆಲ್ಲ
ಗಸ್ತು ತಿರುಗುತ್ತಾ, ಸತ್ಯ ಶೋಧನೆಗೆ
ಗುಂಡಿಟ್ಟು ಕೊಲ್ಲಲು, ಹುಡುಕಾಟ ನಡೆಸುತ್ತಾರೆಂಬ ಚಿಂತೆ!


ವಿ. ಎಚ್. ವೀರಣ್ಣ ಮಂತಾಳಕರ
ಅಂಚೆ-ಮಂತಾಳ - ೫೮೫ ೪೧೯, ಬಸವಕಲ್ಯಾಣ ತಾಲ್ಲೂಕು, ಬೀದರ ಜಿಲ್ಲೆ

ಡಾ॥ ವಿನಯಾ

ನಮ್ಮ ಬಹುಸಂಸ್ಕೃತಿಯ ಬಹುಜನಾಂಗೀಯ ನೆಲದಲ್ಲಿ 'ಮಹಿಳೆ' ಎಂಬ ಅಸ್ತಿತ್ವವನ್ನು ಏಕಾಕಾರಿ ರೂಪವಾಗಿ ನಿರ್ವಚಿಸಿಕೊಳ್ಳುವುದು ಕಠಿಣ. ಇಲ್ಲಿ ಮಹಿಳೆ ಜಾತಿ, ಧರ್ಮ, ವರ್ಗ, ವಯಸ್ಸು ಹಾಗೂ ಪ್ರದೇಶಕ್ಕನುಗುಣವಾಗಿ ಬದುಕುತ್ತಿರುವ ಸ್ಥಿತಿಗಳು ಮತ್ತು ಎದುರಿಸುತ್ತಿರುವ ಸಮಸ್ಯೆಗಳು ಭಿನ್ನವಾಗಿವೆ. ಆದರೆ ಎಲ್ಲ ಭಿನ್ನತೆಗಳ ಒಳಗಿನ ಕಾರಣ 'ಹೆಣ್ಣು ಎಂಬ ಪಿತೃಪ್ರಧಾನ ತಿಳುವಳಿಕೆ'ಯಾದ್ದರಿಂದ ತಾತ್ವಿಕವಾಗಿ ಎಲ್ಲ ಸ್ಥಿತಿಗಳಿಗೂ ಒಂದು ಸಾಮಾನ್ಯ ಅಸ್ತಿತ್ವ ಲಭಿಸುತ್ತದೆ. ಬಹುಸಂಖ್ಯಾತ ಮಹಿಳಾ ವರ್ಗದ ಚಿತ್ರಣವನ್ನು ಎದುರಿಗಿಟ್ಟುಕೊಂಡು ಇಲ್ಲಿಯ ಆಲೋಚನೆಗಳಿಗೆ ಒಂದು ಸಾಮಾನ್ಯ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ. ಮಹಿಳೆಯ ಸಾಮಾಜಿಕ ದುಡಿಮೆ ಇಲ್ಲಿ ಮುಖ್ಯವಾಗಿದೆ. ಕೌಟುಂಬಿಕ, ಜೈವಿಕ ದುಡಿಮೆಯ ವಲಯಗಳನ್ನು ಮುಖ್ಯವಾಗಿ ಪರಿಗಣಿಸಿಲ್ಲ.



# ಜಾಗತೀಕರಣ ಮತ್ತು ಮಹಿಳಾ ದುಡಿಮೆ

ಹದಿನಾರನೆಯ ಶತಮಾನದಲ್ಲಿ ಪಾಶ್ಚಾತ್ಯ ರಾಷ್ಟ್ರಗಳು ವ್ಯಾಪಾರಕ್ಕಾಗಿ ಲಾಭಗಳಿಕೆಗಾಗಿ ಅಪರಿಚಿತವಾಗಿದ್ದ ಭೂಭಾಗಗಳನ್ನು ಶೋಧಿಸಿಕೊಂಡು ಆಳಲು ಪ್ರಾರಂಭಿಸಿದಾಗಲೇ ಜಾಗತೀಕರಣ ಪ್ರಕ್ರಿಯೆಯು ಆರಂಭವಾಯಿತೆಂದು ಚಾರಿತ್ರಿಕವಾಗಿ ಹೇಳಲಾಗುತ್ತಿದೆ. ಆದರೆ ಇಂದು ನಾವು ಒಳಗಾಗಿರುವ ಮುಕ್ತ ಆರ್ಥಿಕ ನೀತಿಯ ಜಾಗತೀಕರಣ ಆರಂಭವಾದದ್ದು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ. ಈ ಶತಮಾನದ ಮೊದಲ ದಶಕ ಭಾರತೀಯ ಮಹಿಳೆಯ ಸ್ಥಿತಿಯನ್ನು 'ವ್ಯಕ್ತಿಕೇಂದ್ರಿತ' ನೆಲೆಗೆ ಎತ್ತರಿಸಲು ತಾತ್ವಿಕವಾಗಿಯಾದರೂ ನೆರವಾಯಿತು. ಆದರೆ ಈ ಶತಮಾನದ ಕೊನೆಯ ದಶಕಗಳಲ್ಲಿ ಆರಂಭವಾದ ಮುಕ್ತ ಮಾರುಕಟ್ಟೆ ನೀತಿಯು ಮಹಿಳೆಯ ಸ್ಥಿತಿಯನ್ನು ಮತ್ತೆ ದಮನಿತ ಸ್ಥಿತಿಗೆ ತಳ್ಳುತ್ತಿದೆ. ಜಾಗತೀಕರಣ ಆಧುನಿಕತೆಯ ಮುಖವಾಡದಲ್ಲಿದೆ, ಆಧುನಿಕತೆ ಎಂಬ ಚಲನಶೀಲತೆಗೆ ವಿರುದ್ಧವಾಗಿದೆ. ಇದರಿಂದ ಎಲ್ಲ ತಳಸಮುದಾಯಗಳು ಹಲ್ಲೆಗೊಳಗಾಗುತ್ತಿವೆ. ಈ ಹಲ್ಲೆ ಭಾರತೀಯ ಮಹಿಳಾ ಜಗತ್ತಿನ ಮೇಲೂ ನಡೆಯುತ್ತಿದೆ.



ನಮ್ಮ ಬಹುಸಂಸ್ಕೃತಿಯ ಬಹುಜನಾಂಗೀಯ ನೆಲದಲ್ಲಿ 'ಮಹಿಳೆ' ಎಂಬ ಅಸ್ತಿತ್ವವನ್ನು ಏಕಾಕಾರಿ ರೂಪವಾಗಿ ನಿರ್ವಚಿಸಿಕೊಳ್ಳುವುದು ಕಠಿಣ. ಇಲ್ಲಿ ಮಹಿಳೆ ಜಾತಿ, ಧರ್ಮ, ವರ್ಗ, ವಯಸ್ಸು ಹಾಗೂ ಪ್ರದೇಶಕ್ಕನುಗುಣವಾಗಿ ಬದುಕುತ್ತಿರುವ ಸ್ಥಿತಿಗಳು ಮತ್ತು ಎದುರಿಸುತ್ತಿರುವ ಸಮಸ್ಯೆಗಳು ಭಿನ್ನವಾಗಿವೆ. ಆದರೆ ಎಲ್ಲ ಭಿನ್ನತೆಗಳ ಒಳಗಿನ ಕಾರಣ 'ಹೆಣ್ಣು ಎಂಬ ಪಿತೃಪ್ರಧಾನ ತಿಳುವಳಿಕೆ'ಯಾದ್ದರಿಂದ ತಾತ್ವಿಕವಾಗಿ ಎಲ್ಲ ಸ್ಥಿತಿಗಳಿಗೂ ಒಂದು ಸಾಮಾನ್ಯ ಅಸ್ತಿತ್ವ ಲಭಿಸುತ್ತದೆ. ಬಹುಸಂಖ್ಯಾತ ಮಹಿಳಾ ವರ್ಗದ ಚಿತ್ರಣವನ್ನು ಎದುರಿಗಿಟ್ಟುಕೊಂಡು ಇಲ್ಲಿಯ ಆಲೋಚನೆಗಳಿಗೆ ಒಂದು ಸಾಮಾನ್ಯ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ. ಮಹಿಳೆಯ ಸಾಮಾಜಿಕ ದುಡಿಮೆ ಇಲ್ಲಿ ಮುಖ್ಯವಾಗಿದೆ. ಕೌಟುಂಬಿಕ, ಜೈವಿಕ ದುಡಿಮೆಯ ವಲಯಗಳನ್ನು ಮುಖ್ಯವಾಗಿ ಪರಿಗಣಿಸಿಲ್ಲ.

ಖ್ಯಾತ ಚಿಂತಕ ನೋಮ್ ಚೊಮ್‌ಸ್ಕಿ ಪ್ರಕಾರ ಜಾಗತೀಕರಣ ಎನ್ನುವುದು ಒಪ್ಪಿಗೆಯನ್ನು ಉತ್ಪಾದಿಸುವ ವ್ಯವಸ್ಥೆಯಾಗಿದೆ. ಭಾರತೀಯ ಸಂದರ್ಭದಲ್ಲಿ ಇದರ ಪ್ರಾಯೋಗಿಕತೆಯನ್ನು ಈಗಾಗಲೇ ನಾವು ಅನುಭವಿಸಿದ್ದೇವೆ. ಜಾಗತೀಕರಣ ಆಧುನಿಕತೆಯ ಮುಂದಿನ ಬೆಳವಣಿಗೆ, ಇದೊಂದು ಚಾರಿತ್ರಿಕ ಅನಿವಾರ್ಯತೆ ಎಂಬ ಭ್ರಮೆಯನ್ನು ಜನಮಾನಸದಲ್ಲಿ ಬಿತ್ತಬಲ್ಲದು; ಇದರ ಮುಕ್ತ ಮಾರುಕಟ್ಟೆಯ ನೀತಿ ಮಾತ್ರ ತೃತೀಯ ರಾಷ್ಟ್ರಗಳಿಗೆ ಜೀವದ ಗುಟುಕು ನೀಡಬಲ್ಲದು ಎಂಬ ಭ್ರಮೆಯನ್ನು ಸಾಮಾಜಿಕ ಪಥ್ಯವಾಗಿ ರೂಪಿಸುವುದು; 'ಎದುರಾಡದ ಎದುರು ಯೋಚಿಸದ' ನಿಯತ್ತನ್ನು ನಾಗರಿಕ ಪ್ರಜ್ಞೆಯಾಗಿಸುವುದು – ಈ ಹಂತಗಳು ಈಗಾಗಲೇ ಭಾರತದಲ್ಲಿ ಯಶಸ್ವೀ ಪ್ರಯೋಗಗೊಂಡಿವೆ. ಕುಲಮೂಲ ಬದುಕಿನ ವಿಧಾನದಿಂದ ಜಡವಾದ ಭಾರತೀಯ ಸಮಾಜದಲ್ಲಿ ಈ ತೊಡಕುಗಳು ಪದರುಪದರುಗಳಾಗಿ ಜಿಡ್ಡುಗೊಳ್ಳುತ್ತವೆ. ಈ ಜಿಡ್ಡಿನಿಂದ ಸ್ವಚ್ಛಗೊಳ್ಳುವುದು ಸುಲಭ ಸಾಧ್ಯತೆಯಾಗಿರುವುದಿಲ್ಲ.



ಮಾರುಕಟ್ಟೆ ನೀತಿಯು ಹುಟ್ಟುಹಾಕುವ ಗ್ರಾಹಕ ಸಂಸ್ಕೃತಿಯು ಭಸ್ಮಾಸುರ ಬಯಕೆಯಿದ್ದ ಹಾಗೆ. ಗ್ರಾಹಕನ ಶಕ್ತಿ-ಸಾಮರ್ಥ್ಯ ಭೋಗಪ್ರಧಾನ ಕುಣಿತವಾಗಿ ತನ್ನನ್ನು ತಾನೇ ಭಸ್ಮವಾಗಿಸಿಕೊಳ್ಳುತ್ತದೆ. ಮೋಹಿನಿಯ ರೂಪಕ್ಕೆ ಮರುಳಾಗಿ, ಆ ಎಲ್ಲ ನಿಬಂಧನೆಗಳನ್ನೂ ಒಪ್ಪಿ ಸಂಭ್ರಮದಿಂದ ಕುಣಿಯುವ ಭಸ್ಮಾಸುರ ಭ್ರಮೆಯಂತೆ ಗ್ರಾಹಕ ಮನಸ್ಸು ಬೆಳೆದಿದೆ. ಇದರಿಂದ ಸಮುದಾಯಗಳಲ್ಲಿ ಸಹಜವಾಗಿ ಬೆಳೆದುಬಂದ ಸಾಮಾಜಿಕ ವ್ಯವಧಾನ ಮತ್ತು ವಿವೇಕ ಕಣ್ಮರೆಯಾಗುತ್ತದೆ. ಮಾರುಕಟ್ಟೆ ನೀತಿಯು ನೇಪಥ್ಯಕ್ಕೆ ಸಮುದಾಯದ

ಸ್ಮೃತಿ ಪರಂಪರೆಯನ್ನೇ ಅಳಿಸಿಬಿಡುವಷ್ಟು ಸಮರ್ಥ ವಾಗಿರುತ್ತದೆ. ಒಂದು ನಿದರ್ಶನ ಗಮನಿಸೋಣ. ೧೯೮೪ರಲ್ಲಿ ಯೂನಿಯನ್ ಕಾರ್ಬೈಡ್ ಎಂಬ ಬಹುರಾಷ್ಟ್ರೀಯ ಕಂಪನಿಯಿಂದ ಭೋಪಾಲ್‌ನಲ್ಲಿ ಘಟಿಸಿದ ವಿಷಾನಿಲ ದುರಂತ ಸಾವಿರಾರು ಮಂದಿಯನ್ನು ಬಲಿತೆಗೆದುಕೊಂಡಿತು. ಸಾವಿರಾರು ಜನರನ್ನು ಜೀವಂತ ನರಕಕ್ಕೆ ತಳ್ಳಿತು. ಈ ಒಂದು ಕಂಪನಿಯನ್ನು ದಂಡಿಸಲು ನಮ್ಮ ಸರಕಾರಕ್ಕೂ ಸಾಧ್ಯವಾಗಿಲ್ಲ, ನ್ಯಾಯಾಂಗಕ್ಕೂ ಸಾಧ್ಯವಾಗಿಲ್ಲ. ಸ್ವತಃ ಸರ್ಕಾರ ಕೇಳಿದ ಪರಿಹಾರ ಮೊತ್ತದ ಭಾಗಶಃ ಹಣ ಮಾತ್ರ ಸಂದಾಯಮಾಡಿ ಕಂಪನಿ ಅಲ್ಲೇ ಮುಂದುವರಿಯಿತು, ಲಾಭ ಗಳಿಸಿತು. ಬಹುರಾಷ್ಟ್ರೀಯ ಕಂಪನಿಗಳ ಎದುರು ನಮ್ಮ ಕಾನೂನು ಮತ್ತು ಸರಕಾರಗಳೂ ಮುಖೇಡಿಗಳಾಗುವುದಕ್ಕೆ ಈ ಒಂದು ಉದಾಹರಣೆ ಸಾಕು. ಆದರೆ ಇಂತಹ ಸ್ಮೃತಿಗಳಿಂದ ಸಮುದಾಯದ ಮನಸ್ಸನ್ನು ಕದಲಿಸುವುದು ಮುಕ್ತ ಆರ್ಥಿಕ ನೀತಿಯ ಉದ್ದೇಶ. ಕಳೆದ ಇಪ್ಪತ್ತು ವರ್ಷಗಳಿಂದ ಇದು ಯಶಸ್ವಿಗೊಳ್ಳುತ್ತಲೂ ನಡೆದಿದೆ.

ಕಳೆದೆರಡು ದಶಕಗಳಿಂದ ಮಹಿಳಾ ವಿಷಯಗಳಲ್ಲೂ ಇಂತಹ ಸಮೂಹ ಸನ್ನಿಗೆ ಒಳಗಾಗುತ್ತಿದ್ದೇವೆ. ''ಮಹಿಳೆಯರಿಗೆ ಮೀಸಲಾತಿ ಯಾಕೆ ? ಮಹಿಳಾ ಶಿಕ್ಷಣ ಮತ್ತು ದುಡಿಮೆಯ ಕ್ಷೇತ್ರ 'ನ ಭೂತೋ ನ ಭವಿಷ್ಯತಿ' ಎಂಬಷ್ಟು ಬದಲಾಗಿಬಿಟ್ಟಿದೆ. ಮಹಿಳೆ ಯಾವುದರಲ್ಲಿ ಹಿಂದಿದ್ದಾಳೆ ? ಮಹಿಳಾಪರ ಸಂಗತಿಗಳು ಕೇವಲ ಮಧ್ಯಮವರ್ಗದ ತೆವಲುಗಳಾಗಿವೆ, ಅಕೆಡೆಮಿಕ್ ಚರ್ವಿತ ಚರ್ವಣಗಳಾಗಿವೆ.'' – ಇಂತಹ ಅಭಿಪ್ರಾಯಗಳು ಜವಾಬ್ದಾರಿಯುತ ವ್ಯಕ್ತಿಗಳಿಂದ ಸ್ಥಾನಗಳಿಂದ ಆಗಾಗ ಕೇಳಿಬರುತ್ತವೆ, ಕೇಳಿಸಲಾಗುತ್ತವೆ. ಆದರೆ ಸುಸನ್ನಾ ಜಾರ್ಜ್ ಎಂಬ ಮಹಿಳಾ ಚಿಂತಕಿಯ ಪ್ರಕಾರ ''ಬಂಡವಾಳಶಾಹಿಯು survival of the fittest ಎಂಬ ತಂತ್ರ ಬಳಸುತ್ತದೆ. ಮತ್ತು ತಳವರ್ಗದೊಂದಿಗೆ ಮಹಿಳಾ ಬದುಕು ಈ ದುರಂತಕ್ಕೆ ಒಳಗಾಗುತ್ತದೆ.'' ಮಹಿಳಾ ಸಂಖ್ಯೆ ಕುಸಿತ, ಮಹಿಳಾ ಸಂಬಂಧೀ ಸಾಮಾಜಿಕ ಅಪರಾಧೀಕರಣದ ಹೆಚ್ಚಳಗಳು ಈ ಅಭಿಪ್ರಾಯಕ್ಕೆ ಪೂರಕವಾಗಿವೆ. ''ಜಾಗತೀಕರಣ ಮಹಿಳಾ ದಮನನೀತಿಯನ್ನು ಅನುಸರಿಸುತ್ತದೆ. ಸಮಾಜಮುಖಿ ಚಿಂತನೆ ಅಪ್ರಸ್ತುತ ಎಂಬ ಭಾವನೆ ರೂಪುಗೊಳ್ಳುತ್ತದೆ'' – ಎಂದು ಡಿ. ಡೊಮೆನಿಕ್ ಅವರು ಅಭಿಪ್ರಾಯಪಡುತ್ತಾರೆ. ಈ ಮಾತಿಗೆ ಪೂರಕವಾದ ಸಂಗತಿಗಳು ಭಾರತದಲ್ಲಿ ನಡೆಯುತ್ತಿವೆ.



ವಿಶ್ವವಾಣಿಜ್ಯ ಸಂಸ್ಥೆಯೊಂದಿಗಿನ ಒಪ್ಪಂದದ ಪ್ರಕಾರ ನಮ್ಮ ಸರ್ಕಾರಗಳು ಕೃಷಿ, ಶಿಕ್ಷಣ, ಆರೋಗ್ಯದಂತಹ ಆದ್ಯತೆಯ ವಲಯಗಳಿಗೆ ಗಣನೀಯವಾಗಿ ಸಬ್ಸಿಡಿಯನ್ನು ಕಡಿತಗೊಳಿಸಿವೆ. ವೃತ್ತಿ ಶಿಕ್ಷಣದ ದುಬಾರಿ ಶುಲ್ಕ ಹಾಗೂ ಉನ್ನತ ಶಿಕ್ಷಣ ಕ್ಷೇತ್ರದ ಪೇಮೆಂಟ್ ಸೀಟ್‌ಗಳು ಮಹಿಳೆಯ ಶಿಕ್ಷಣದ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಬೀರುತ್ತವೆ. ಭಾರತೀಯ ಸಂದರ್ಭದಲ್ಲಿ ಮಹಿಳೆಗೆ ಶಿಕ್ಷಣ ಮತ್ತು ಕುಟುಂಬವೃತ್ತಿ ಹಕ್ಕುದಾರಿಕೆಯಲ್ಲ, ಅದೊಂದು ಕೌಟುಂಬಿಕ ಋಣ. ಇಂಥ ಸ್ಥಿತಿಯಲ್ಲಿ ಇದು ಮಹಿಳೆಗೆ ಸಾಂಪ್ರದಾಯಿಕ ಓದು ಮತ್ತು ಉದ್ಯೋಗಕ್ಕೆ ಒತ್ತಾಯಿಸುತ್ತದೆ. ಸಮಾಜದಲ್ಲಿ ತಳವೂರಿರುವ ಪಿತೃಪ್ರಧಾನ ಮೌಲ್ಯಗಳು ಮಹಿಳಾ ಶಿಕ್ಷಣದ ಮೇಲೆ ದುಬಾರಿ ಮೊತ್ತ ವೆಚ್ಚಮಾಡಲು ಒಪ್ಪುವುದಿಲ್ಲ. ಆದ್ದರಿಂದ ಇತ್ತೀಚಿನ ವರ್ಷಗಳಲ್ಲಿ ಹೆಣ್ಣುಮಕ್ಕಳ ಸಾಕ್ಷರತೆಯ ಪ್ರಮಾಣ ಹೆಚ್ಚುತ್ತಿದೆಯಾದರೂ ವಿದ್ಯಾಭ್ಯಾಸದ ಮಟ್ಟದಲ್ಲಿ ಗಣನೀಯ ಇಳಿಕೆ ಕಂಡುಬರುತ್ತಿದೆ. ಮಹಿಳಾ ಶಿಕ್ಷಣ ಮತ್ತು ದುಡಿಮೆ ಸೇವಾವಲಯಕ್ಕೆ ಸೀಮಿತಗೊಳ್ಳುತ್ತಿದೆ; ಅಧಿಕಾರೀ ವಲಯವನ್ನು ಸ್ವೀಕರಿಸುವಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದೆ. 'ಯಾವುದೇ ಕ್ಷೇತ್ರದ ಒಳವಿಭಜನೆಯ ಅನುಪಾತ ಈ ಅಂಶವನ್ನು ಮನದಟ್ಟಾಗಿಸುತ್ತದೆ. ಮಹಿಳೆಯರು ನರ್ಸ್, ಶಿಕ್ಷಕಿ, ಕಂಪ್ಯೂಟರ್ ಆಪರೇಟರ್, ಗ್ರಾಮ ಪಂಚಾಯತಿ ಸದಸ್ಯೆ ಹೀಗೆ ಕೆಳಹಂತದ ದುಡಿಮೆಗಳಲ್ಲಿದ್ದಾರೆ. ಆದರೆ ವೈದ್ಯ, ಅಧಿಕಾರಿ, ಕಂಪ್ಯೂಟರ್ ಇಂಜಿನಿಯರ್, ಶಾಸಕ ಇಂತಹ ಆಯಕಟ್ಟಿನ ಅಧಿಕಾರಯುತ ದುಡಿಮೆಗಳಿಂದ ವ್ಯವಸ್ಥಿತವಾಗಿ ದೂರದಲ್ಲಿದ್ದಾರೆ. ಮಹಿಳಾ ದುಡಿಮೆ ಪಿತೃಪ್ರಧಾನ ವ್ಯವಸ್ಥೆಯ ಪೂರಕ ಸೇವಾವಲಯವಾಗಿ ನಿಂತಿದೆ. ಇಂತಹ ದುಡಿಮೆ ಸಾಮಾಜಿಕ ಅಭಿಪ್ರಾಯ ರೂಪಿಸಲು ಅವಕಾಶವನ್ನು ನೀಡುವುದಿಲ್ಲ, ಬದಲಿಗೆ ಜೈವಿಕ ಮತ್ತು ಕೌಟುಂಬಿಕ ಜವಾಬ್ದಾರಿಯೊಂದಿಗೆ ಮತ್ತೊಂದು ಹೊಣೆಗಾರಿಕೆಯಾಗಿದೆ. ಈ ದುಡಿಮೆಯ ಸಂಬಳ ಮಹಿಳೆಗೆ ಆರ್ಥಿಕ ಭದ್ರತೆಯನ್ನು ಒದಗಿಸುತ್ತದಾದರೂ, ಈ ಭದ್ರತೆಯನ್ನು ಉಳಿಸಿಕೊಳ್ಳಲು ಪಿತೃಪ್ರಧಾನ ಮೌಲ್ಯಗಳನ್ನು ಜಾಗರೂಕತೆಯಿಂದ ನಿಭಾಯಿಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಮೀಸಲಾತಿ ಎಂಬ ಪರಿಕಲ್ಪನೆಯೇ ಅಂಚಿಗೆ ತಳ್ಳಲ್ಪಡುತ್ತಿರುವ ಹೊತ್ತಲ್ಲಿ ಸಾಂಪ್ರದಾಯಿಕ ದುಡಿಮೆಯ ವಲಯದಲ್ಲಿ ಕೂಡ ಸಂಭವನೀಯತೆಗಳು ಕಡಿಮೆಯಾಗುತ್ತಿವೆ. ಸರ್ಕಾರಿ ವಲಯದಲ್ಲಿ ಬಸ್ ಕಂಡಕ್ಟರ್‌ರಂತಹ ಹುದ್ದೆಗಳು ಸಾಂಪ್ರದಾಯಿಕ ಶಿಕ್ಷಣ ಪಡೆದ ಮಹಿಳೆಯರಿಗೆ ಉದ್ಯೋಗದ ಹೊಸ ವಿಸ್ತರಣೆಗಳಾಗಿದ್ದವು. ಆದರೆ ಸಾರಿಗೆ ಕ್ಷೇತ್ರದಲ್ಲಿ ಖಾಸಗೀಕರಣ ಹೆಚ್ಚಿದಂತೆ ಸಹಜವಾಗಿ ಮಹಿಳಾ ಉದ್ಯೋಗಾವಕಾಶಗಳು ಅಲ್ಲೂ ಕುಂಠಿತಗೊಳ್ಳುತ್ತಿವೆ.

ಸಾಂಪ್ರದಾಯಿಕ ಕೃಷಿ ಮತ್ತು ಕೃಷಿಪೂರಕ ಚಟುವಟಿಕೆಗಳಲ್ಲಿ ಮಹಿಳಾ ದುಡಿಮೆ ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತ ಬಂದಿತ್ತು. ಸಾವಯವ ಕೃಷಿ ವಿಧಾನದಲ್ಲಿ ಬೀಜ ನಿರ್ಮಾಣದಿಂದ ಧಾನ್ಯ ಸಂಗ್ರಹದವರೆಗೆ ಎಲ್ಲ ಹಂತಗಳಲ್ಲೂ ಮಹಿಳಾ ಪಾಲುದಾರಿಕೆಯಿತ್ತು. ಮಹಿಳಾ ಕೃಷಿ ಕಾರ್ಮಿಕರಿಲ್ಲದ ಕೃಷಿ ವಲಯವನ್ನು ಗಮನಿಸುವುದೇ ಸಾಧ್ಯವಿರಲಿಲ್ಲ. ಆದರೆ ಈಗ ಕೃಷಿವಲಯ ಕೈಗಾರಿಕಾ ವಲಯವಾಗಿ ಬದಲಾಗುತ್ತಿದೆ. ಮಾರುಕಟ್ಟೆಯ ಲಾಭನೀತಿ ಮತ್ತು ಯಾಂತ್ರಿಕ ಕೃಷಿ ಚಟುವಟಿಕೆಗಳು ಮಹಿಳೆಯರನ್ನು ಕೃಷಿ ಅನಕ್ಷರಸ್ಥರನ್ನಾಗಿ ರೂಪಿಸತೊಡಗಿವೆ. ಆಧುನಿಕ ಬೇಸಾಯ ಪದ್ಧತಿಯ ವಿದ್ಯುತ್, ಯಂತ್ರಗಳು, ಕ್ರಿಮಿನಾಶಕಗಳು, ಕಟಾವು, ಔಷಧಿ ಸಿಂಪಡಿಕೆಯ ಪ್ರಮಾಣ – ಇಂತಹ ಎಲ್ಲ ಪರಿಭಾಷೆ ಮತ್ತು ಪರಿಕ್ರಮ ಮಹಿಳಾ ಸಂವೇದನೆಗೆ ಅಪರಿಚಿತವಾದದ್ದು. ಸೂಕ್ತ ತರಬೇತಿ ಮತ್ತು ತೊಡಗಿಸಿಕೊಳ್ಳುವಿಕೆ ಸಾಧ್ಯವಾಗದಂತೆ ಆಧುನಿಕ ಬೇಸಾಯ ಪದ್ಧತಿಯಲ್ಲಿ ತಡೆಗಳಿವೆ. ಯಂತ್ರಗಳು ಕಡಿಮೆ ಮಟ್ಟದ ಮಾನವ ಶ್ರಮವನ್ನು ಬಯಸುತ್ತವೆ. ಮಾನವ ಶ್ರಮದ ಕಡಿತವೆಂದರೆ ಮಹಿಳಾ ದುಡಿಮೆಯ ಕಡಿತವೇ ಆಗಿರುತ್ತದೆ. ಇದರಿಂದಾಗಿ ಮಹಿಳಾ ದುಡಿಮೆಯ ಸಾಮರ್ಥ್ಯ ಕೃಷಿ ಕಾರ್ಮಿಕಳಾಗಿ ಬದಲಾಯಿತು. ಮುಕ್ತ ಮಾರುಕಟ್ಟೆ ನೀತಿಗೆ ಸೋತು ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಚಿತ್ರ ಒಂದೆಡೆಯಾದರೆ, ಕುಟುಂಬ ಜವಾಬ್ದಾರಿ ಮತ್ತು ಕೃಷಿಯ ಅಪರಿಚಿತ ಸ್ಥಿತಿಯಿಂದಾಗಿ ಮಹಿಳಾ ಶ್ರಮ ನಿರುಪಯೋಗಿಯಾಗಿದೆ. ಇನ್ನೊಂದೆಡೆ ಸಾಮಾಜಿಕ ಉತ್ಪಾತಗಳಿಗೆ ಕಾರಣವಾಗುವ ಚಿತ್ರ ನಮ್ಮ ಮುಂದಿದೆ.

ಜಾಗತೀಕರಣದಿಂದಾಗಿ ಭಾರತದ ಸಣ್ಣ ಮತ್ತು ಮಧ್ಯಮ ಉದ್ಯಮಗಳು ಬಾಗಿಲು ಮುಚ್ಚಿದವು. ಕೈಗಾರಿಕೆಗಳು ಹಾನಿಯಲ್ಲಿದ್ದರೆ ಅವು ಮೊದಲು ಹೊರಕಳಿಸುವುದು ಮಹಿಳಾ ಕಾರ್ಮಿಕರನ್ನು. ಮಹಿಳಾಹಿತಕ್ಕಾಗಿ ರೂಪಿಸಲ್ಪಟ್ಟ ಕಾನೂನಿನ ನಿಬಂಧನೆಗಳನ್ನು ಮುಂದಿಟ್ಟುಕೊಂಡೇ ಸುಲಭವಾಗಿ ಜಾರಿಕೊಳ್ಳುವುದು ಉದ್ಯಮಪತಿಗಳಿಗೆ ರೂಢಿಯಾಗಿದೆ. ಸೂರತ್‌ನಲ್ಲಿ ಜವಳಿ ಉದ್ಯಮ ಮುಚ್ಚಿದಾಗ, ದೇಶದಾದ್ಯಂತ ಔಷಧಿ ಕಂಪನಿಗಳಲ್ಲಿ ಔಷಧಿಗಳನ್ನು ಸೀಲ್ ಮಾಡುವ ಘಟಕಗಳು ಯಾಂತ್ರೀಕರಣಗೊಂಡಾಗ ಲಕ್ಷಾಂತರ ಮಹಿಳಾ ಕಾರ್ಮಿಕರು ಉದ್ಯೋಗ ಕಳೆದುಕೊಂಡರು. ಕಾರ್ಖಾನೆಗಳಲ್ಲಿ ಕಾರ್ಮಿಕರು ಉತ್ಪಾದನೆಯ ಒಂದು ಹಂತದಲ್ಲಿ ಪಾಲುದಾರಿಕೆ ಹಾಗೂ ನೈಪುಣ್ಯವನ್ನು ಪಡೆದಿರುತ್ತಾರೆ. ಆ ಕೆಲಸ ಕೈ ತಪ್ಪಿದಾಗ ಅಕ್ಷರಶಃ ನಿರುದ್ಯೋಗ ನಿರ್ಮಾಣವಾಗುತ್ತದೆ. ಮಹಿಳಾ ದುಡಿಮೆ ಪ್ರದೇಶ ಕೇಂದ್ರಿತವಾಗಿರುವುದರಿಂದ ಮತ್ತೊಂದು ಉದ್ಯೋಗವನ್ನರಸಿ ಅನ್ಯಸ್ಥಳಗಳಿಗೆ ಹೋಗುವುದು ಸಾಧ್ಯವಿರುವುದಿಲ್ಲ. ತೀರಾ ಹಕ್ಕುದಾರಿಕೆಯ ಉದ್ಯೋಗಗಳನ್ನೇ ಅವರು ಈ ಕಾರಣದಿಂದ ಕಳೆದುಕೊಳ್ಳುತ್ತಾರೆ. ಇತ್ತೀಚೆಗಷ್ಟೇ ಮಹಾನಗರಗಳಲ್ಲಿ ಉತ್ತರ ಕರ್ನಾಟಕದ ರೊಟ್ಟಿ ಊಟ ಜನಪ್ರಿಯಗೊಳ್ಳುತ್ತಿದೆ. ಅಲ್ಲಿ ರೊಟ್ಟಿ ಬಡಿಯುವ ಅಡಿಗೆ ಮಾಡುವ ಕಾರ್ಮಿಕರು ಗಂಡಸರೇ ವಿನಾ ಹೆಂಗಸರಲ್ಲ. ಕೆಲಸ ದುಡಿಮೆಯಾಗಿ ಪರಿವರ್ತನೆಗೊಂಡಾಗ ಮಹಿಳೆ ದುಡಿಮೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಇದರಿಂದಾಗಿ ತಾನು ಇರುವ ಪರಿಸರದಲ್ಲಿಯೇ ಉದ್ಯೋಗವನ್ನರಸುವಾಗ ಮಹಿಳೆಯರು ಮನೆಗೆಲಸದಂತಹ ಅಸಂಘಟಿತ ವಲಯದಲ್ಲಿ ಪರಸ್ಪರ ಪ್ರತಿಸ್ಪರ್ಧಿಗಳಾಗಿ, ಕಡಿಮೆ ಕೂಲಿಗೆ ದುಡಿಯುತ್ತಾರೆ.

ಯಂತ್ರಗಳು ಉತ್ಪಾದನೆಯನ್ನು ಹೆಚ್ಚಿಸಿ, ಮಾರುಕಟ್ಟೆಯನ್ನು ವಿಸ್ತರಿಸುತ್ತವೆ. ವಸ್ತುವಿನ ಬೆಲೆ ಕಡಿಮೆಯಾಗುತ್ತದೆ. ಇಂತಹ ಯಾಂತ್ರಿಕ ಸ್ಪರ್ಧೆಯನ್ನು ಎದುರಿಸಲು ಮಹಿಳಾ ದುಡಿಮೆಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಖಾದಿ, ಸೆಣಬು, ಬಿದಿರು, ಮರದ ಗೊಂಬೆ, ಖಾದ್ಯವಲಯಗಳಲ್ಲಿ ತೊಡಗಿಸಿಕೊಂಡ ಮಹಿಳೆಯರೂ ನಿರುದ್ಯೋಗಿಗಳಾಗಬೇಕಾಯಿತು ಅಥವಾ ಉದ್ಯೋಗ ತೃಪ್ತಿಯಿಂದ ವಂಚಿತರಾಗಬೇಕಾಯ್ತು. ನಮ್ಮಲ್ಲಿ ಫ್ಯಾಶನ್ ಮತ್ತು ರೆಡಿಮೇಡ್ ಬಟ್ಟೆ ಉದ್ಯಮ ಮುಗಿಲು ಮುಟ್ಟಿದಾಗ, ಸರ್ಕಾರಿ ಯೋಜನೆಗಳಲ್ಲಿ ಮಹಿಳೆಯರಿಗೆ ಉತ್ತೇಜನ ನೀಡಲು ಹೊಲಿಗೆ ಯಂತ್ರಗಳನ್ನು ವಿತರಿಸ ಲಾಗುತ್ತಿತ್ತು. ಹೊಲಿಗೆ ಯಂತ್ರಗಳಿಂದ ಉಪಜೀವನ ನಡೆಸಬಹುದು ಎಂಬ ಸಾಧ್ಯತೆಯೇ ಹಾಸ್ಯಾಸ್ಪದವಾಗಿತ್ತು! ಕರಾವಳಿ ಜಿಲ್ಲೆಗಳಲ್ಲಿ ಸಾಂಪ್ರದಾಯಿಕ ಮೀನುಗಾರಿಕೆ ನಡೆಯುತ್ತಿದ್ದಾಗ ಮೀನುಮಾರಾಟದ ವಹಿವಾಟು ಹೆಂಗಸರ ಕೈಯಲ್ಲಿತ್ತು. ಅವರು ಸಲೀಸಾಗಿ ಕುಟುಂಬ ನಿರ್ವಹಣೆ ನಡೆಸುತ್ತಿದ್ದರು. ಆದರೆ ಯಾಂತ್ರಿಕ ದೋಣಿ ಮತ್ತು ಶೈತ್ಯೀಕರಣ ಬಂದ ಮೇಲೆ ಸಗಟು ಖರೀದಿ ಆರಂಭವಾಗಿ ಇಡೀ ಉದ್ದಿಮೆ ಪುರುಷ ಕೇಂದ್ರಿತ ವಾಯಿತು. ಜೀವನ ನಿರ್ವಹಣೆಗೆ ಸಂಪೂರ್ಣವಾಗಿ ಕುಟುಂಬದ ಯಜಮಾನರ ಅಡಿಯಾಳಾಗಿರಬೇಕಾದ ಸ್ಥಿತಿ ಒದಗಿಬಂತು. ಹೆಂಗಸರು ಸರ್ಕಾರಿ ಪ್ರಾಯೋಜಿತ ಮತ್ತು ಖಾಸಗಿ ರೆಸಾರ್ಟ್‌ಗಳಲ್ಲಿ ವಿದೇಶಿ ಪ್ರವಾಸಿಗರ ಕೂಲಿಗಳಾಗಿ ಲೈಂಗಿಕ ಕಾರ್ಯಕರ್ತೆಯರಂತೆ ಬದುಕಲು ಒತ್ತಾಯಿಸಲ್ಪಟ್ಟರು. ಇದರಿಂದ ಸಾಮಾಜಿಕ ಸ್ವಸ್ಥತೆ ಕದಡುತ್ತಿದೆ. ಏಡ್ಸ್‌ನಂತ ಕಾಯಿಲೆಗಳು ಹಬ್ಬುತ್ತಿವೆ. ಮಹಿಳಾ ದುಡಿಮೆ ಘನತೆಯನ್ನು ಕಳೆದುಕೊಂಡಿದೆ.

ಬಹುರಾಷ್ಟ್ರೀಯ ಕಂಪನಿಗಳು ಇತ್ತೀಚೆಗಷ್ಟೇ 'ಫೆಮಿನೈಸೇಶನ್ ಆಫ್ ಲೇಬರ್' ಅಥವಾ 'ಫ್ಲೆಕ್ಸಿಬಲ್ ಲೇಬರ್' ಕ್ರಮವನ್ನು ಜಾರಿಗೆ ತರುತ್ತಿವೆ. ಕಾರ್ಮಿಕ ರೆಲ್ಲರೂ ಮಹಿಳೆಯರೇ ಎಂಬ ನಿಲುವು ಮೇಲ್ನೋಟಕ್ಕೆ ಮಹಿಳಾ ಹಿತ ಕಾಯುವಂತೆ ತೋರುತ್ತದೆ. ಆದರೆ ಇದು ಸಂಪೂರ್ಣವಾಗಿ ಬಂಡವಾಳಶಾಹಿಗಳ ಹಿತಾಸಕ್ತಿಯನ್ನು ಮುಚ್ಚಟೆಯೊಳಗೆ ಇಟ್ಟುಕೊಂಡಿದೆ. ಮಹಾಭಾರತ ಯುದ್ಧ ನಡೆವಾಗ ಕೃಷ್ಣ ಮಾಡಿದ ಯುದ್ಧ ನಿಬಂಧನೆಯ ಘೋಷವಾಕ್ಯವನ್ನು ನೆನಪಿಸುವಂತೆ ಇದೆ. – "ಒಬ್ಬ ಪಾಂಡವ ಮಡಿದರೂ ರಾಜ್ಯ ಕೌರವರಿಗೆ. ಒಬ್ಬ ಕೌರವ ಉಳಿದರೂ ರಾಜ್ಯ ಕೌರವರಿಗೆ." – ಇಂತಹ ಸರ್ವನಾಶದ ಚಿಂತನೆ ಇದೂ ಕೂಡ. ಮಹಿಳೆಯರಿಗೆ ದುಡಿಮೆ ಎಂಬುದು ಕೌಟುಂಬಿಕ ರಿಸ್ಕ್. ದುಡಿಮೆಯ ಕ್ಷೇತ್ರದಲ್ಲಿಯ ತೊಂದರೆಗಳನ್ನು ಕುಟುಂಬ ನಿವಾರಿಸುವುದಿಲ್ಲ, ಬದಲು ಹಿಂದೇಟು ಹಾಕಿಸುತ್ತದೆ. ಎಷ್ಟೋ ವೇಳೆ ಇದು ಕುಟುಂಬ ಜೀವನವನ್ನೂ ಘಾಸಿಗೊಳಿಸಬಹುದಾಗಿದೆ. ಆದ್ದರಿಂದ ಮಹಿಳೆಯರು ದುಡಿಮೆಯಲ್ಲಿ ಲಾಭಕ್ಕಿಂತ ಸುರಕ್ಷಿತತೆಗೆ ಹೆಚ್ಚು ಗಮನ ಕೊಡುತ್ತಾರೆ. ತುಂಬ ಜತನದಿಂದ ಉದ್ಯೋಗವನ್ನು ರಕ್ಷಿಸಿಕೊಳ್ಳುತ್ತಾರೆ. ಈ ನಾಡಿಮಿಡಿತ ವನ್ನು ಉದ್ಯಮಪತಿಗಳು ಅರಿತಿದ್ದಾರೆ. ಅಲ್ಲದೇ ಮಹಿಳೆಯರು ಕಾರ್ಖಾನೆಯ ನಂತರದ ಅವಧಿಯಲ್ಲಿ ಪರಸ್ಪರ ಬೆರೆಯುವ, ಇಲ್ಲಿಯ ಆಗು-ಹೋಗುಗಳನ್ನು ಚರ್ಚಿಸುವ ಸಾಧ್ಯತೆ ತುಂಬ ಕಡಿಮೆ. ಮಹಿಳೆಯರು ಹಲವು ಪಾತ್ರಗಳನ್ನು, ಜವಾಬ್ದಾರಿಗಳನ್ನು ನಿರ್ವಹಿಸ ಬೇಕಾಗಿರುವುದರಿಂದ ಸಂಘಟಿತರಾಗಿ ಬೋನಸ್, ಲಾಭ ಮುಂತಾದವುಗಳ ಬಗ್ಗೆ ಹಕ್ಕೊತ್ತಾಯ ಮಂಡಿಸುವುದು ಸುಲಭವಲ್ಲ. ಜೊತೆಗೆ ಅಂತಹ ಬೆಳವಣಿಗೆ ಆಕಸ್ಮಾತ್ ಕಂಡರೂ ಮಹಿಳಾ ಸಂಘಟನೆ – ಶ್ರಮವನ್ನು ಮೂಲೆಗುಂಪು ಮಾಡಲು ಸಾವಿರಾರು ದಾರಿಗಳಿವೆ!

ತಿಂಗಳಿಗೆ ಕೋಟಿಗಟ್ಟಲೆ ವಹಿವಾಟು ಹೊಂದಿರುವ ಕಂಪನಿಗಳು ಕೂಡ ಮಹಿಳಾ ಕಾರ್ಮಿಕರನ್ನು ಅಸಂಘಟಿತ ವಲಯವನ್ನಾಗಿ ರೂಪಿಸಿಕೊಳ್ಳಲು ಉತ್ಸುಕವಾಗಿರುತ್ತವೆ. ನಮ್ಮ ದೇಶದಲ್ಲಿ ಬೀಡಿ ಉದ್ಯಮ ಮೊಟ್ಟಮೊದಲು ಮಹಿಳಾ ಕಾರ್ಮಿಕರನ್ನು ಅಸಂಘಟಿತ ವಲಯವಾಗಿ ರೂಪಿಸಿ ಲಾಭ ಪಡೆಯಿತು. ಇದರಿಂದ ಕಾರ್ಖಾನೆಗಳು ಮಹಿಳಾ ಸಂಬಂಧಿ ಕಾನೂನಿನ ಅನ್ವಯಿಕೆಯಿಂದ ಹೊರತಾಗಿಬಿಡುತ್ತವೆ. ಜಾಗತೀಕರಣದ ಸಂದರ್ಭದಲ್ಲಿ ಇಂಟರ್‌ನೆಟ್ ಮತ್ತು ಕಂಪ್ಯೂಟರ್ ಸೌಲಭ್ಯಗಳಿಂದಾಗಿ ಕೋಟಿಗಟ್ಟಲೆ ಮಹಿಳಾ ಕಾರ್ಮಿಕರು ಅಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ. ಪ್ರಾಜೆಕ್ಟ್‌ಗಳನ್ನು ಪಡೆದುಕೊಂಡು ಮನೆಯಲ್ಲಿಯೇ ಅದನ್ನು ಮುಗಿಸಿ ಕೊಡುವ ರೀತಿಯಿದು. ಇದರಿಂದಾಗಿ ಮಹಿಳೆ ಮನೆ ಯಲ್ಲಿಯೇ ಕಂಪ್ಯೂಟರ್ ಮುಂದೋ ಮೂಲೆಯಲ್ಲೋ ಕುಳಿತು ದುಡಿದು ತಿಂಗಳ ವರಮಾನ ಹೆಚ್ಚಿಸಿಕೊಳ್ಳುವುದು ಯಾರಿಗೆ ತಾನೆ ಬೇಡ? ಕುಟುಂಬದ ಯಜಮಾನಿಕೆಗೆ ಅವಳ ಸುರಕ್ಷತೆಯ ಬಗ್ಗೆ ರಿಸ್ಕ್ ಇಲ್ಲ. ಗೃಹಕೃತ್ಯದಲ್ಲಿ – ಮಕ್ಕಳ ಪಾಲನೆ-ಪೋಷಣೆಯಲ್ಲಿ ಯಾವ ವ್ಯತ್ಯಯವೂ ಇಲ್ಲ. ಇದು ಪಿತೃವ್ಯವಸ್ಥೆಗೆ ಸಂಭ್ರಮದ ವಿಷಯವೇ! ಶ್ರಮದ ವ್ಯಕ್ತಿ ಪ್ರತಿನಿಧೀಕರಣದ ಜರೂರಿಲ್ಲದ ಈ ದುಡಿಮೆ ಮಹಿಳೆಯ ಬದುಕಿನ ಮೇಲೆ ನೇತ್ಯಾತ್ಮಕ ಪರಿಣಾಮಗಳನ್ನು ಬೀರುತ್ತಿದೆ.

೧. ಇಲ್ಲಿ ಮಹಿಳೆ ಕಾರ್ಮಿಕಳಾಗಿ ಪರಿಗಣಿತವಾಗುವು ದಿಲ್ಲವಾದ್ದರಿಂದ ಕಾರ್ಮಿಕ ಕಾಯ್ದೆಗಳ, ಸೌಲಭ್ಯಗಳ ಅನುಕೂಲಗಳಿಂದ ಆಚೆಗೆ ತಳ್ಳಲ್ಪಡುತ್ತಾಳೆ. ಗುತ್ತಿಗೆಗಳನ್ನು ಪಡೆದುಕೊಳ್ಳುವ ಸ್ಪರ್ಧೆ ಹಾಗೂ ಒತ್ತಡಕ್ಕೆ ಒಳಗಾಗ ಬೇಕಾಗುತ್ತದೆ. ದುಡಿಮೆ ಪ್ರತಿ ಗಳಿಗೆಯಲ್ಲೂ ಅನಿಶ್ಚಿತ ವಾಗಿರುತ್ತದೆ. ಕಂಪನಿಯ ನಷ್ಟದ ಪರಿಣಾಮಕ್ಕೆ ಬಾಧ್ಯಸ್ಥ ಳಾಗಬೇಕಾಗುತ್ತದಾದರೂ, ಲಾಭದಲ್ಲಿ ಹಕ್ಕುದಾರಿಕೆ ಇರುವುದಿಲ್ಲ.

೨. ದುಡಿಮೆಗಾರಳ ಸಂಪರ್ಕ ಬಂಡವಾಳಶಾಹಿ ಗಳೊಂದಿಗೆ ಅಂದರೆ ಮಾಲೀಕರೊಡನೆ ಮಾತ್ರ ನಡೆಯುತ್ತೆ. ಸಹದುಡಿಮೆಗಾರರಿಂದ, ಗ್ರಾಹಕರಿಂದ ದೂರವೇ ಇರುವುದರಿಂದ ದುಡಿಮೆಗೆ ನಿರ್ದಿಷ್ಟ ಅಥವಾ ಯೋಗ್ಯ ಕೂಲಿಯನ್ನು ಪಡೆಯುವ ಸಾಧ್ಯತೆ ಕಡಿಮೆ. ಗುತ್ತಿಗೆಗಳನ್ನು ಉಳಿಸಿಕೊಳ್ಳುವ ತುರ್ತಿನಲ್ಲಿ ಅನಪೇಕ್ಷಿತ ರಾಜಿ-ಸಹಕಾರಗಳಿಗೂ ಬಲಿಯಾಗಬೇಕಾಗುತ್ತದೆ.

೩. ದುಡಿಮೆಯ ಕುರಿತ ಸಾಮೂಹಿಕ ತರಬೇತಿ ಮತ್ತು ತಿಳುವಳಿಕೆ ವ್ಯಕ್ತಿಕೇಂದ್ರಿತ ದುಡಿಮೆಯಲ್ಲಿ ಲಭಿಸುವುದಿಲ್ಲವಾದ್ದರಿಂದ ಗುಣಮಟ್ಟವನ್ನು ಎತ್ತರಿಸಿ ಕೊಳ್ಳುವುದು, ಸ್ಪರ್ಧಾತ್ಮಕವಾಗಿ ರೂಪುಗೊಳ್ಳುವುದು ಸಾಧ್ಯವಿಲ್ಲ.



೪. ಕೆಲಸದ ಅವಧಿಯಲ್ಲಿ ಎದುರಾಗುವ ವಿದ್ಯುತ್ ಕಡಿತ, ಬಂದ್, ಕಂಪ್ಯೂಟರ್ ಕೆಡುವಿಕೆಯಂತಹ ಯಾವುದೇ ಅಡಚಣೆಗಳು ವೈಯಕ್ತಿಕವಾಗಿ ಗಣನೆಗೊಳ್ಳು ವುದರಿಂದ ಅಸಾಧ್ಯ ಒತ್ತಡಕ್ಕೆ ಬಲಿಯಾಗಬೇಕಾಗುತ್ತದೆ.

೫. ಮನೆ ಮಹಿಳೆಯ ಮೊದಲ ಆದ್ಯತೆಯೆಂಬ ಭಾವನೆ ಆಳವಾಗಿ ಬೇರೂರಿರುವಾಗ ಮನೆಯ ಜವಾಬ್ದಾರಿಗಳಿಗೆ ಹೆಚ್ಚು ಗಮನ ನೀಡಬೇಕಾಗುತ್ತದೆ. ಅಡಿಗೆ, ಮಗುವಿನ ಪಾಲನೆ, ಹಿರಿಯರ ಶುಶ್ರೂಷೆ, ಗೃಹಿಣೀ ಕರ್ತವ್ಯ ಸಂಹಿತೆಗಳು ಅವಳ ದುಡಿಮೆಯಲ್ಲಿ ದುಷ್ಪರಿಣಾಮ ಬೀರುತ್ತವೆ. ಈ ಜರೂರುಗಳಲ್ಲಿ ವೇಳೆಯನ್ನು ಮಿಗಿಸಿಕೊಳ್ಳುವುದು ಮತ್ತು ಏಕಾಗ್ರತೆ ಸಾಧಿ ಸಿಕೊಳ್ಳುವುದು ಹರಸಾಹಸವಾಗಿಬಿಡುತ್ತದೆ.

೬. ಉದ್ಯೋಗದ ಪರಿಸರದಲ್ಲಿ ಸಿಗುವ ಅನುಕೂಲ ಮತ್ತು ಅವಕಾಶ ಮನೆಯಲ್ಲಿ ಸಾಧ್ಯವಾಗದೆ ದುಡಿಮೆಯ ಗುಣಮಟ್ಟ ಕುಸಿಯುತ್ತದೆ. ಏಕಕಾಲದಲ್ಲಿ ಹಲವು ಪಾತ್ರಗಳನ್ನು ನಿಭಾಯಿಸುವ ಮಾನಸಿಕ-ದೈಹಿಕ ಯಾತನೆಗೆ ಮಹಿಳೆ ಬಲಿಯಾಗಬೇಕಾಗುತ್ತದೆ.

೭. ದಿನದ ಕಷ್ಟ ಹೊತ್ತು ಲಭಿಸಬಹುದಾದ ಹೊರಜಗತ್ತಿನ ಸಂಪರ್ಕ, ಚಿಂತನೆಯ ವಿಸ್ತರಣೆ ಮತ್ತು ಮಾನವೀಯ ಸಂಬಂಧಗಳಿಂದ ವಂಚಿತಳಾಗ ಬೇಕಾಗುತ್ತದೆ.

೮. ಇಷ್ಟಾಗಿಯೂ ಇಂತಹ ದುಡಿಮೆ ಉತ್ಪಾದನೆ ಯಾಗುತ್ತದೆಯೇ ಹೊರತು ಆರ್ಥಿಕ ಭದ್ರತೆ ಯಾಗುವುದಿಲ್ಲ. ಬದಲು, ಕುಟುಂಬ ಮತ್ತು ಬಂಡವಾಳಶಾಹಿಗಳ ಕೃಪಾಪೋಷಣೆಯಲ್ಲಿ ನಡೆಸುವ ಕಸರತ್ತಾಗುತ್ತದೆ.

ಜಗತ್ತಿನ ಒಟ್ಟು ದುಡಿಮೆಗಾರರಲ್ಲಿ ೨/೩ ಮಹಿಳಾ ದುಡಿಮೆಗಾರರಿದ್ದರೂ ಅವರು ಮಾರುಕಟ್ಟೆಯ ನಿಯಂತ್ರಣದ ಶಕ್ತಿಯನ್ನು ಪಡೆದಿಲ್ಲ. ಅವರು ಗುಲಾಮಿ ದುಡಿಮೆಗಾರರಾಗಿದ್ದಾರೆ, ಅಷ್ಟೆ. ಜಾಗತೀಕರಣ ಮಹಿಳೆ ಯರನ್ನು ಅಸಂಘಟಿತ ವಲಯದ ಕಾರ್ಮಿಕರನ್ನಾಗಿ ಮಾಡುತ್ತಿದೆ. ದೇಹಬದ್ಧವಾದ ಮತ್ತು ಸೇವಾಕ್ಷೇತ್ರದ ಕಾರ್ಮಿಕರನ್ನಾಗಿ ಪರಿವರ್ತಿಸುತ್ತಿರುವುದು ಅಪಾಯಕಾರಿ ಪ್ರಕ್ರಿಯೆಯಾಗಿದೆ.

ಡಾ॥ ವಿನಯಾ
ಶ್ರೀ ಸಿದ್ಧೇಶ್ವರ ಸರ್ಕಾರಿ ಪದವಿ ಕಾಲೇಜು
ನರಗುಂದ, ಗದಗ ಜಿಲ್ಲೆ

# ಉಪಯುಕ್ತ ಅನುವಾದ ಅಪರೂಪದ ಕೃತಿ




ಸಂಪಾದಕಿ : **ಡಾ|| ಶ್ರೀದೇವಿ ಕೆ. ನಾಯರ್**
ಅನುವಾದಕಿ : **ಪ್ರೊ|| ಪಾರ್ವತಿ ಜಿ. ಐತಾಳ್**
ಪುಟಗಳು : ೧೯೨ ಬೆಲೆ: ರೂ. ೯೫
ಪ್ರಕಾಶಕರು : **ನವಕರ್ನಾಟಕ ಪ್ರಕಾಶನ**

**ಡಾ|| ಎಲ್. ಸಿ. ಸುಮಿತ್ರಾ**

ಬಹುಭಾಷೆಗಳನ್ನುಳ್ಳ ಭಾರತದಂತಹ ದೇಶದಲ್ಲಿ 'ಅನುವಾದ ಸಾಹಿತ್ಯ' ನಮ್ಮ ನೆರೆರಾಜ್ಯಗಳ ಜನರನ್ನು ಅರಿಯಲು, ಅವರ ಸಾಂಸ್ಕೃತಿಕ ಲೋಕಕ್ಕೆ ಪ್ರವೇಶಿಸಲು ಅಗತ್ಯವಾದ ಸೇತುವೆಯನ್ನು ನಿರ್ಮಿಸುವ ಕೆಲಸ ಮಾಡುತ್ತದೆ. ಈಗಾಗಲೇ ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್‌ನಂತಹ ಸಂಸ್ಥೆಗಳು ನೆರೆರಾಜ್ಯ ಕೇರಳದ ಸಾಹಿತ್ಯವನ್ನು ಬೇರೆ ಬೇರೆ ವಿದ್ವಾಂಸರಿಂದ ಅನುವಾದ ಮಾಡಿಸಿವೆ. ವೈಕ್ಕಂ ಮಹಮದ್ ಬಷೀರ್‌ರ ಕೃತಿಗಳನ್ನು ಅನುವಾದಿಸಿದ ವೆಂಕಟರಾಜ-ಪುಣಿಂಚಿತ್ತಾಯ (ನನ್ನಜ್ಜನಿಗೊಂದಾನೆಯಿತ್ತು), ಬಿ. ಕೆ. ತಿಮ್ಮಪ್ಪ (ಬಾಲ್ಯ ಕಾಲಸಖಿ ಮತ್ತು ಪಾತುಮ್ಮನ ಆಡು), ಮತ್ತೆ ಎಂ. ಟಿ. ವಾಸುದೇವನ್ ನಾಯರ್ ಅವರ (ಚೌಕಟ್ಟಿನಮನೆ) ಹಾಗೂ ಎಂ. ಟಿ. ಅವರ ಕತೆಗಳನ್ನು ಅನುವಾದಿಸಿರುವ ಕೆ. ಕೆ. ನಾಯರ್ ಅವರಂತಹವರ ಸಾಲಿಗೆ ಇತ್ತೀಚೆಗೆ ಸೇರ್ಪಡೆಯಾಗಿರುವವರು ಪ್ರೊ|| ಪಾರ್ವತಿ ಜಿ. ಐತಾಳ್.

ವೆಟ್ಟೂರು ರಾಮನ್ ನಾಯರ್ ಅವರ 'ಬದುಕಲು ಮರೆತ ಸ್ತ್ರೀ' ಪಾರ್ವತಿಯವರ ಮೊದಲ ಅನುವಾದಿತ ಕೃತಿ. ಅದಕ್ಕೆ ದೊರೆತ ಉತ್ತಮ ಪ್ರತಿಕ್ರಿಯೆಯಿಂದ ಉತ್ತೇಜಿತರಾಗಿ ಅವರು ಎಂ. ಟಿ. ವಾಸುದೇವನ್ ನಾಯರ್ ಅವರ 'ಅಸುರವಿತ್ತ್' ಕಾದಂಬರಿಯನ್ನು 'ದುರ್ಬೀಜ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ತಂದಿದ್ದಾರೆ. ಎಂ.ಟಿ.ಯವರ ಕತೆಗಳನ್ನು ಅನುವಾದಿಸಿದ್ದಾರೆ. ಈಗ ಮಲಯಾಳಂನಲ್ಲಿ ಇತ್ತೀಚೆಗೆ ಪ್ರಕಟವಾದ 'ಮಲಯಾಳದ 10 ಕತೆಗಾರ್ತಿಯರು' ಪುಸ್ತಕವನ್ನು ಕನ್ನಡಕ್ಕೆ ತಂದಿದ್ದಾರೆ.

ಲೇಖಕಿಯರ ಪರಿಚಯ, ಪ್ರಸ್ತಾವನೆ, ಸಂದರ್ಶನಗಳನ್ನೂ ಈ ಕೃತಿ ಒಳಗೊಂಡಿದೆ. ಸೃಜನಶೀಲ ಮನಸ್ಸಿನ ಜೊತೆಗೆ ಕಲಾತ್ಮಕತೆ, ಸೂಕ್ಷ್ಮ ಸಂವೇದನೆ, ಅನ್ವೇಷಣಾ ಮನೋಭಾವ, ವೈಚಾರಿಕತೆ, ಚಿಕಿತ್ಸಕ ದೃಷ್ಟಿಗಳೂ ಮೇಳವಿಸಿದಾಗ ಮತ್ತೆ ಮತ್ತೆ ಓದಬೇಕೆನ್ನಿಸುವ ಕಥೆ ಕವಿತೆ ಕಾದಂಬರಿಗಳು ಜನ್ಮ ತಳೆಯುತ್ತವೆ. ಈ ಎಲ್ಲಾ ಅಂಶಗಳೂ ಸೇರಿರುವ ಅತ್ಯುತ್ತಮ ಹತ್ತು ಕಥೆಗಳ ಸಂಗ್ರಹ 'ಮಲಯಾಳದ 10 ಕಥೆಗಾರ್ತಿಯರು' ೨೦೦೨ರಲ್ಲಿ ಮಲಯಾಳಂನಲ್ಲಿ ಪ್ರಕಟವಾಗಿರುವ ಪುಸ್ತಕ ಪಾರ್ವತಿ ಐತಾಳರ ಕಾಳಜಿಯಿಂದ ಕನ್ನಡದಲ್ಲಿ ಬಹಳ ಕಡಿಮೆ ಅವಧಿಯಲ್ಲಿ ಪ್ರಕಟವಾಗಿದೆ (ಪ್ರಕಾಶನ : ನವಕರ್ನಾಟಕ). ಸೋದರ ಭಾಷೆಗಳ ಸಮಕಾಲೀನ ಸಾಹಿತ್ಯ ಸಂವೇದನೆ ಮತ್ತು ಚಿಂತನೆಗಳ ಬಗ್ಗೆ ಕುತೂಹಲವುಳ್ಳವರ ಚಿಂತನಾಶೀಲತೆಗೆ ಸಾಕಷ್ಟು ಆಹಾರ ಒದಗಿಸುವ ಪುಸ್ತಕ ಇದು. ಮಲಯಾಳಂನ ಇಂದಿನ ಪ್ರಮುಖ ಲೇಖಕಿಯರ ಕಾಳಜಿಗಳನ್ನು ಅಭಿವ್ಯಕ್ತಿಸುವ, ಪ್ರಾತಿನಿಧಿಕವೆನಿಸುವ ಹತ್ತು ಕಥೆಗಳ ಜೊತೆಗೆ ಅವರ ಪರಿಚಯ ಸಂದರ್ಶನಗಳು ಇಲ್ಲಿವೆ.

ಸಂದರ್ಶನದಲ್ಲಿ ಸಂಪಾದಕಿ ಡಾ|| ಶ್ರೀದೇವಿ ಕೆ. ನಾಯರ್ ಲೇಖಕಿಯರಿಗೆ ಉಪಯುಕ್ತವಾದ ಪ್ರಶ್ನೆಗಳನ್ನು ಕೇಳಿ ಪಡೆದಿರುವ ಉತ್ತರಗಳು ಕುತೂಹಲಕರವಾಗಿವೆ. ಮಹಿಳಾ ಅಧ್ಯಯನಕಾರರೂ, ಸಾಹಿತ್ಯ ಚರಿತ್ರಕಾರರೂ ಗಮನಿಸಲೇಬೇಕಾದ ಅನೇಕ ಅಂಶಗಳೂ ಇವೆ. 'ಕಮಲಾ ದಾಸ್'ರಂತಹ ಹಿರಿಯ ಲೇಖಕಿಯಿಂದ ಪ್ರಾರಂಭಿಸಿ, ಅಷಿತಾ, ಚಂದ್ರಮತಿ, ಸಾರಾ ಜೋಸೆಫ್, ಗ್ರೇಸಿ, ಗೀತಾ ಹಿರಣ್ಯನ್, ಬಿ. ಎಂ. ಸುಹರಾ ಮತ್ತು ಈ ಸಲದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ 'ಸಿತಾರಾ'ವರೆಗೆ ಹತ್ತೂ ಜನ ಲೇಖಕಿಯರ ಕತೆಗಳು ಇಲ್ಲಿ ಸಂಗ್ರಹಿತವಾಗಿವೆ.

ಇಲ್ಲಿರುವ ಕಥೆಗಳಂತೆ, ಕಥೆಗಾರ್ತಿಯರ ಸಂದರ್ಶನಗಳೂ ಮೌಲಿಕವಾಗಿವೆ. ಅಷಿತಾ, ಚಂದ್ರಮತಿ, ಕಮಲಾ ದಾಸ್ ಮುಂತಾದವರು ಬರಹಗಾರ್ತಿಯರಾದುದರಿಂದಲೇ ತಾವು ಎದುರಿಸಬೇಕಾದ ಸಮಸ್ಯೆಗಳ ಕುರಿತು ಮಾತನಾಡಿದ್ದಾರೆ. ಚಂದ್ರಿಕಾ ಚಂದ್ರಮತಿ ಎಂದು ಹೆಸರು ಬದಲಾಯಿಸಿಕೊಂಡು ಬರೆಯಬೇಕಾಯಿತು ಎಂಬುದು ಅಂತಹ ಸಮಸ್ಯೆಗಳ ಸೂಚಕ ಅಂಶವಾಗಿದೆ.

ಅಷಿತಾ, ತಮ್ಮ ಬರವಣಿಗೆಯ ಮೊದಲ ವರ್ಷಗಳನ್ನು ನೆನಪಿಸಿಕೊಳ್ಳುತ್ತಾ, ತಮ್ಮ ''ಮದುವೆಗೆ ಮೊದಲು ವಿವಾಹಿತ ಸ್ತ್ರೀಯ ಕುರಿತೂ ನಂತರ ಅವಿವಾಹಿತೆಯ ಕುರಿತೂ ಬರೆಯುತ್ತಿದ್ದೇನೆ'' ಎಂದು ಹೇಳುತ್ತಾ ''ಕಥೆಯೆಂದರೆ ಬಯಲಿನಲ್ಲಿ ನಿಂತು ಮಾಡುವ ಭಾಷಣವಲ್ಲ'' ಎಂದಿದ್ದಾರೆ (ಪುಟ ೩೧). ಅದುಮಿಡಲ್ಪಟ್ಟ ಭಾರತೀಯ ಸ್ತ್ರೀಯ ಭಾವನೆಗಳನ್ನು, ನೋವುಗಳನ್ನು ಕುರಿತು ಹೇಳುತ್ತಾ, ''ಸತ್ತ ನಂತರ ಸುಡುವಾಗ ಹಸಿಮಾಂಸದ ವಾಸನೆ ಎಲ್ಲಿಂದಾದರೂ ಬರುವುದಿದ್ದರೆ ಅದು ಹೃದಯದಿಂದಲೇ ಬರಬಹುದು. ಅದು ಉರಿದುಹೋಗಲು ಸ್ವಲ್ಪ ಕಷ್ಟವಾಗಬಹುದು.'' ಅಷಿತಾರ ದೃಷ್ಟಿಯಲ್ಲಿ ''ಸಾಹಿತ್ಯ ಸೃಷ್ಟಿಯೆಂದರೆ ಒಂದು ಆತ್ಮ ಇನ್ನೊಂದು ಆತ್ಮದ ಜೊತೆ ಸಂವಾದ ನಡೆಸುವುದು (ಪುಟ ೩೦). ಚಂದ್ರಮತಿಯವರ ಪ್ರಕಾರ ''ಉಸಿರುಕಟ್ಟಿ ಒದ್ದಾಡುವಾಗ ಪ್ರಾಣವಾಯುವಿಗಾಗಿ ಪಡುವ ಶ್ರಮವೇ ಬರವಣಿಗೆ''. ಗೀತಾ ಹಿರಣ್ಯನ್ ''ನನ್ನ ಪಾಲಿಗೆ ಬರವಣಿಗೆಯೆಂದರೆ, ನನ್ನನ್ನೇ ನಾನು ಓದಿಕೊಳ್ಳುವ ಒಂದು ಪ್ರಕ್ರಿಯೆ'' ಎಂದು ಅಭಿಪ್ರಾಯಪಟ್ಟರೆ, ಬಿ. ಎಂ. ಸುಹರಾ, ''ಎಲ್ಲರೂ ಭಾಗಶಃ ಆದರೂ ತಮ್ಮನ್ನೇ ತಾವು ಬರೆದುಕೊಳ್ಳುವವರು. ಮನಸ್ಸಿನಲ್ಲಿ ಅನೇಕಾನೇಕ ಸಮಸ್ಯೆಗಳ ಮತ್ತು ಹೊರಗೆ ಹೇಳಿಕೊಳ್ಳಲಾಗದ ವಿಚಾರಗಳ ಮಂಥನವಾದಾಗ ಅವುಗಳಿಂದ ನನ್ನನ್ನು ರಕ್ಷಿಸಿಕೊಳ್ಳಲು ನಾನು ಬರವಣಿಗೆಯ ಆಶ್ರಯ ಹುಡುಕಿ ಹೋಗುತ್ತೇನೆ'' (ಪುಟ ೬-೭) ಎನ್ನುತ್ತಾರೆ.

ಆದರೆ, ಕಲ್ಪನೆಯ ಕಣ್ಣು ಸಾಹಿತ್ಯ ಸೃಷ್ಟಿಯಲ್ಲಿ ಮಹತ್ವದ ಪಾತ್ರವಹಿಸುತ್ತದೆಂದು ಹೇಳುತ್ತಾ ಚಂದ್ರಮತಿ ''ಪ್ರತಿಯೊಂದು ಭಾವವನ್ನು ನಾವು ತಿಳಿದುಕೊಳ್ಳುವುದು (ಎಲ್ಲವನ್ನೂ ಸ್ವತಃ ಅನುಭವಿಸಿ ಅಲ್ಲ) ಅತ್ಯಾಚಾರದ ಬಗ್ಗೆ ಬರೆಯಬೇಕಿದ್ದರೆ ಅದನ್ನು ಅನುಭವಿಸಿಯೇ ಆಗಬೇಕೆಂದಿಲ್ಲ, ಸಾವಿನ ಕುರಿತು ಬರೆಯುವವರು ಸತ್ತು ನೋಡಿ ಬರೆಯುತ್ತಾರೇನು ಹಾಗಾದರೆ? ಅನುಭವಿಸಿಯೇ ಇಲ್ಲದ ಸತ್ಯಗಳನ್ನು, ಅರ್ಥಮಾಡಿಕೊಳ್ಳುವ ಭಾವಗಳನ್ನು ಮತ್ತು ಕಾಣದ ದೃಶ್ಯಗಳನ್ನು ಕೇಳದ ಶ್ರುತಿಗಳನ್ನು ಎಲ್ಲವನ್ನೂ ಅನುಭವವೇದ್ಯವಾಗಿಸುವ ಶಕ್ತಿಯಿದೆ ಕಲ್ಪನೆಯ ಇಂದ್ರಜಾಲಕ್ಕೆ...'' (ಪುಟ ೧೩). ಈ ಪ್ರತಿಭೆ ಇದ್ದರೂ ಓದು, ಚರ್ಚೆ, ಸಂವಾದ, ಸಂಚಾರ ಇವೆಲ್ಲವೂ ಬರವಣಿಗೆಯನ್ನು ಉತ್ತಮಪಡಿಸಿಕೊಳ್ಳುವ ಸಾಧನವಾಗಬೇಕು. ಎಡಗೈಯಿಂದ ತೊಟ್ಟಿಲು ತೂಗಿ, ಬಲಗೈಯಿಂದ ಬರೆಯುತ್ತಿದ್ದ ಲಲಿತಾಂಬಿಕಾ ಅಂತರ್ಜನಂ ಅವರ ಉದಾಹರಣೆ ಕೊಡುತ್ತಾ ಸಂಪಾದಕಿ ಶ್ರೀದೇವಿ ನಾಯರ್ ಇವತ್ತಿನವರೆಗೂ (ಪರಿಸ್ಥಿತಿಯಲ್ಲಿ ಹೇಳುವಂಥ ಬದಲಾವಣೆಗಳು) ಯಾವುದೂ ಸಂಭವಿಸಿಲ್ಲ, ಸಂಸಾರದ ಭಾರ ಮತ್ತು ಅಡುಗೆಮನೆ ಕೆಲಸದ ಜೊತೆ ಉದ್ಯೋಗರಂಗವೂ ಸೇರಿ, ತಮ್ಮ ಪ್ರತಿಭೆಯನ್ನು ಪ್ರಕಟಪಡಿಸಲು ಸ್ತ್ರೀಯರಿಗೆ ಒಪ್ಪಿಗೆ ಸಿಕ್ಕಿದೆಯೆಂಬುದನ್ನು ಬಿಟ್ಟರೆ ಬೇರೇನೂ ವ್ಯತ್ಯಾಸವಿಲ್ಲ'' (ಪುಟ ೧೩) ಎನ್ನುತ್ತಾರೆ.

ಮಾಧವಿ ಕುಟ್ಟಿಯವರು ಬರೆಹದಲ್ಲಿ ಸಮಾಜದ ಕಟ್ಟುಪಾಡುಗಳನ್ನು ಮೀರಿದವರೆನ್ನುವ ಕಾರಣಕ್ಕೆ ಕೇರಳದಲ್ಲಿ ಕಹಿ ಸನ್ನಿವೇಶಗಳನ್ನು ಎದುರಿಸಬೇಕಾಯಿತೆಂದು ಹೇಳುತ್ತಾ ಶ್ರೀದೇವಿ ನಾಯರ್ ''ಸ್ತ್ರೀಯ ಕನಸು

ಗಳಿಗೂ ಶೀಲವೆನ್ನುವುದು ಅತ್ಯಗತ್ಯವೆಂದು ಕಟ್ಟುನಿಟ್ಟು ಮಾಡಿದ ಸಮಾಜವು ಕಥೆಗಳ ಅಶ್ಲೀಲತೆಗಾಗಿ ಮಾಧವಿ ಕುಟ್ಟಿಯವರನ್ನು ಶಿಕ್ಷಿಸಿತು'' ಎಂದು (ಪುಟ ೫) ಉಲ್ಲೇಖಿಸಿದ್ದಾರೆ.

ಕಮಲಾ ದಾಸ್ ಈ ಕುರಿತು, ಮೂರು ದಶಕಗಳ ಹಿಂದೆ ತಾವು ಕೇರಳಕ್ಕೆ ಬಂದಿದ್ದಾಗ ಅಲ್ಲಿ ಉಳಿದು ಕೊಂಡ ಹೋಟೆಲಿನ ಎದುರು ನಿಂತು ಜನ 'ಮಾಧವಿ ಕುಟ್ಟಿ ಗೋ ಬ್ಯಾಕ್' ಎಂದು ಕೂಗುತ್ತಿದ್ದರು. ಈಗ ಪರಿಸ್ಥಿತಿ ಬದಲಾಗಿದೆ, ''ಮಲಯಾಳದಲ್ಲಿ ಅತ್ಯಂತ ಹೆಚ್ಚು ಸಂಭಾವನೆ ಪಡೆಯುತ್ತಿರುವ ಬರಹಗಾರ್ತಿ ನಾನೇ'' ಎಂದು ಹೇಳುತ್ತಾರೆ (ಪುಟ ೧೧೪).

ಮುಂದುವರೆದು, ''ಒಬ್ಬ ಬರಹಗಾರನಿಗಾಗಲೀ ಅಥವಾ ಬರಹಗಾರ್ತಿಗಾಗಲೀ ರಾಜಕೀಯ ಅಥವಾ ಧಾರ್ಮಿಕ ಬದ್ಧತೆ ಇರಬಾರದು. ಯಾಕೆಂದರೆ ನಾನು ಹಿಂದೂ ಎಂಬ ಪ್ರಜ್ಞೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದರೆ ಆ ಧರ್ಮವನ್ನು ಎತ್ತಿಹಿಡಿಯಲು ಮಾತ್ರವೇ ನನ್ನಿಂದ ಸಾಧ್ಯ. ಎಡಪಂಥೀಯ ಅಥವಾ ಬಲಪಂಥೀಯ ಒಲವುಗಳು ನನ್ನಲ್ಲಿದ್ದರೆ ಅಲ್ಲಿನ ರಾಜನನ್ನು ಪರಿಹಾಸ್ಯ ಮಾಡಲಿಕ್ಕಾಗಲೀ ಟೀಕಿಸಲಿಕ್ಕಾಗಲೀ ನನ್ನಿಂದ ಸಾಧ್ಯವಿಲ್ಲ.. ಕೇರಳದ ಫೆಮಿನಿಸಂ ರಾಜಕೀಯ ಪಕ್ಷದೊಂದಿಗೆ ಸಂಬಂಧ ವಿಟ್ಟುಕೊಂಡಿದೆ. ಆ ಕಾರಣಕ್ಕಾಗಿ ನಾನು ಅದನ್ನು ವಿರೋಧಿಸುತ್ತೇನೆ. ಆ ರೀತಿಯ ಚಳುವಳಿಗಳು ಸ್ತ್ರೀಯರ ಪರಿಮಿತಿಯ ವಲಯವನ್ನು ಇನ್ನಷ್ಟು ಕಿರಿದಾಗಿಸುತ್ತವೆ'' ಎಂಬ ಮಾತುಗಳಲ್ಲಿ ತನ್ನ ಬದ್ಧತೆ ನಿಲುವುಗಳನ್ನು ಕುರಿತಂತೆ ಸ್ಪಷ್ಟೀಕರಣ ನೀಡುತ್ತಾರೆ (ಪುಟ ೪೮).

ಸ್ತ್ರೀಯರು ಬರೆದ ಕಥೆಗಳಲ್ಲಿ ಅವರ ಆತ್ಮಕಥಾಂಶ ವನ್ನು ಓದುಗರು ಹುಡುಕಲು ಪ್ರಯತ್ನಿಸುವುದು ಒಂದು ದೋಷ ಎನ್ನುವ ಚಂದ್ರಮತಿ ''ನಾನು ಕಥೆಗಳಲ್ಲಿ ಬರೆಯುವ ಪ್ರೇಮ ಸಂಬಂಧಗಳೆಲ್ಲವೂ ನನ್ನವೇ ಎಂದು ಹೇಳಿ ನನ್ನ ಮೇಲೆ ಆರೋಪ ಹೊರಿಸುವವರು ಅಂತಹ ಕಥೆಗಳನ್ನು ಪುರುಷರು ಬರೆದರೆ ಅವರ ಕಿರೀಟಕ್ಕೆ ಇನ್ನೊಂದು ಗರಿಯನ್ನು ಸಿಕ್ಕಿಸಲು ಸಿದ್ಧರಾಗಿರುತ್ತಾರೆ. ಪುರುಷನ ಹೆಮ್ಮೆ ಗೌರವಗಳನ್ನು ಹೆಚ್ಚಿಸುವ ಅವೇ ವಿಚಾರಗಳನ್ನು ಸ್ತ್ರೀಯು ಚಿತ್ರಿಸಿದಾಗ ಆಕೆ ಅಪಮಾನಿಸಲ್ಪಡುತ್ತಾಳೆ'' ಎಂದು ತಮ್ಮದೇ ಕಹಿ ಅನುಭವವನ್ನು ನೋವಿನಿಂದ ಹೇಳಿಕೊಂಡಿದ್ದಾರೆ (ಪುಟ ೫೦). ಸಾರಾ ಜೋಸೆಫ್ ಕೂಡಾ ''ಪುರುಷರು ಹೆಚ್ಚು ಬುದ್ಧಿವಂತರು, ಕೆಲವೊಂದು ವಿಚಾರಗಳನ್ನೇ ಹೇಳುವ ಅವಕಾಶ ಪುರುಷರಿಗೆ ಮಾತ್ರ ಇರುವುದು ಎಂಬ ಅಭಿಪ್ರಾಯ ನಮ್ಮ ಸಮಾಜದಲ್ಲಿದೆ'' (ಪುಟ ೧೫೨) ಎನ್ನುತ್ತಾರೆ.

ಬಷೀರರ ಕಥೆಗಳನ್ನು ಮೆಚ್ಚುವ ಪ್ರಿಯಾ ಎ. ಎಸ್. – ''ಸಣ್ಣ ಸಂಗತಿಗಳಲ್ಲೂ ಕೂಡಾ ಬದುಕಿನ ಪ್ರೀತಿ ಇರುತ್ತದೆ'' ಎನ್ನುತ್ತಾರೆ.

ಇಲ್ಲಿರುವ ಹತ್ತು ಕಥೆಗಳಲ್ಲಿ ಪ್ರತಿಯೊಂದೂ ವಿಭಿನ್ನವಾಗಿದೆ. ವಸ್ತು ಮತ್ತು ನಿರೂಪಣೆ ನವೀನವಾಗಿದೆ. ಸಮಕಾಲೀನ ಭಾರತೀಯ ಹೆಣ್ಣಿನ ಮನಸ್ಸಿನ ಅಭಿವ್ಯಕ್ತಿ ಇಲ್ಲಿದೆ. ದಿನನಿತ್ಯದ ವಿಧೇಯ ಬದುಕಿಗಿಂತ ಭಿನ್ನವಾಗಿ ಮಾತನಾಡಿದಾಗ 'ಹುಚ್ಚಿ' ಎಂದು ಕರೆಸಿಕೊಳ್ಳುವ ಗೃಹಿಣಿಯ ಕಥೆ 'ಹುಚ್ಚು' ಉದ್ಯೋಗಸ್ಥ ಹೆಣ್ಣಿನ ಪರಿಸರ (ಕವಿತೆಯ ಕಥೆ), ಶ್ರಮಜೀವಿ ಹೆಣ್ಣಿನ ಕಥೆ 'ಒರೋತ ಮತ್ತು ಭೂತಗಳು', ತನ್ನದಲ್ಲದ ತಪ್ಪಿಗೆ ಕೈದಿಯಾಗಿರುವ ಸ್ತ್ರೀ (ಅಪೂರ್ಣ ವಿರಾಮಗಳು), ಅವಿವಾಹಿತ ತಾಯಾಗಲು ಕಷ್ಟಪಡುವ 'ಪ್ರಕಾಶಿನಿಯ ಕಥೆ', ಲೈಂಗಿಕ ಶೋಷಣೆಗೆ ಒಳಗಾಗುವ ಬಡಹೆಣ್ಣಿನ 'ಅಸಂಘಟಿತೆ' ಕಥೆಗಳ ಜೊತೆಗೆ ಚಂದ್ರಿಕಾ ಅವರ 'ಬೆಳದಿಂಗಳು ಮತ್ತು ಹಾವುಗಳು' ತನ್ನ ಸಾಂಕೇತಿಕತೆಯಿಂದಾಗಿಯೇ ವಿಶಿಷ್ಟವಾಗಿವೆ. ಅತೃಪ್ತ ಲೈಂಗಿಕ ಬದುಕು, ಎಳೆಯ ಮನಸ್ಸಿನ ಗೃಹಿಣಿಯೊಬ್ಬಳ ಅಂತರಂಗ ಇಲ್ಲಿ ಸೂಕ್ಷ್ಮವಾಗಿ, ಅಷ್ಟೇ ಶಕ್ತವಾಗಿ ಅನಾವರಣಗೊಂಡಿದೆ. ಸಿತಾರಾ ಅವರ 'ಅಗ್ನಿ' ಕಥೆಯ ಪ್ರಿಯಾ ಅತ್ಯಾಚಾರಕ್ಕೆ ಗುರಿಯಾದರೂ ಧೃತಿಗೆಡದೆ ಹಾಗೆ ಮಾಡಿದವರಿಗೆ ಬುದ್ಧಿ ಕಲಿಸುವ ಗಟ್ಟಿತನವನ್ನು ತೋರುತ್ತಾಳೆ. ಕೃಷಿ ಕಾರ್ಮಿಕಳಾದ ಒರೋತ ಭೂತಕ್ಕೂ ಕತ್ತಲೆಗೂ ಹೆದರದ ಧೈರ್ಯಶಾಲಿ. ಆದರೆ ಅವಳ ಗಂಡನಿಗೆ ಒಬ್ಬನೇ ಇರಲು ಭಯ. ಸಾರಾ ಜೋಸೆಫ್ ಗಂಡು-ಹೆಣ್ಣು ಇಬ್ಬರ ಮಾನವೀಯ ನಿಲುವು ಏಕರೂಪವಾಗಿರುವುದನ್ನೂ, ಸಂಪ್ರದಾಯನಿಷ್ಠ ಸಮಾಜ ಅವರಲ್ಲಿ ಭಿನ್ನತೆ ಆರೋಪಿಸಿರುವುದನ್ನೂ ಸಮರ್ಥವಾಗಿ ಚಿತ್ರಿಸಿದ್ದಾರೆ. 'ಒರೋತ ಮತ್ತು ಭೂತಗಳು' ಕಥೆಯಲ್ಲಿ ಕಮಲಾ ದಾಸ್‌ರ ಪ್ರಸಿದ್ಧ ಕತೆ 'ಹಕ್ಕಿಯ ವಾಸನೆ' ಈಗಾಗಲೇ ಕನ್ನಡದಲ್ಲಿ ಪ್ರಕಟ ವಾಗಿದೆಯಾದರೂ ಅವರ ಸಂದರ್ಶನ ಅವರ ವ್ಯಕ್ತಿತ್ವದ ಅನೇಕ ಅಪರಿಚಿತ ಮುಖಗಳನ್ನು ಅನಾವರಣಗೊಳಿಸಿದೆ. ಮಲಯಾಳಂನಲ್ಲಿ 'ಮಾಧವಿ ಕುಟ್ಟಿ' ಎಂಬ ಹೆಸರಿನಿಂದಲೂ ಇಂಗ್ಲಿಷ್‌ನಲ್ಲಿ ಕಮಲಾ ದಾಸ್ ಎಂದೂ ಬರೆಯುವ ಈ ಕತೆಗಾರ್ತಿ ಈಗ ಕಮಲಾ ಸುರಯ್ಯ ಆಗಿದ್ದಾರೆ. ಅವರ ಆತ್ಮಚರಿತ್ರೆಯಲ್ಲಿ 'ಅನೇಕ ಪ್ರೇಮಗಳು ನಿಜವೇ' ಎಂಬ ಪ್ರಶ್ನೆಗೆ 'ಹೌದು' ಎಂದು ಉತ್ತರಿಸಿದ್ದಾರೆ. ಹಲವು ಭಾಷೆಗಳಿಗೆ ಅನುವಾದವಾಗಿರುವ ಅವರ ಆತ್ಮಚರಿತ್ರೆ ಜಪಾನೀ ಭಾಷೆಯಲ್ಲೂ ಪ್ರಕಟವಾಗಿ ಜಪಾನಿನ ಒಂದು ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕವಾಗಿದೆ. ಅಂತಹ ಕೃತಿಗಳು ಪಠ್ಯಪುಸ್ತಕಗಳಾಗುವುದು ಸ್ತ್ರೀ-ಪುರುಷರ ಪ್ರೀತಿ ಅವಲಂಬನೆ ಎಷ್ಟು ಮಹತ್ವದ್ದು ಎಂಬ ಬಗ್ಗೆ ಪ್ರಸ್ತಾಪಿಸುತ್ತಾ ''ಮದುವೆಯಾಗದೇ ಉಳಿಯುವ ಯುವಕ-ಯುವತಿಯರನ್ನು ಕಾಣುವಾಗ ನನಗೆ ನೆನಪಾಗುವುದು 'unclaimed parcels'ನ್ನು ''ಯಾರಿಗೂ ಬೇಡದವರಾದ್ದರಿಂದಲೇ ಅಲ್ಲವೇ ಅವರು ಹಾಗಿರುವುದು ?'' ಎಂದು ಪ್ರಶ್ನಿಸುತ್ತಾರೆ. ಪತಿ ತೀರಿಕೊಂಡಾಗ ತಮಗೆ ಸತಿ ಹೋಗಬೇಕು ಎಂದೆನಿಸಿ ಉಪವಾಸ ಕೈಗೊಂಡಿದ್ದನ್ನೂ ಮಗ ತಮ್ಮನ್ನು ಆಸ್ಪತ್ರೆಗೆ ಸೇರಿಸಿದ್ದನ್ನೂ ವಿವರಿಸುವ ಕಮಲಾ ದಾಸ್‌ರ ಸಂದರ್ಶನ ಅವರ ತೀವ್ರ ಜೀವನಾಸಕ್ತಿಯಿಂದಾಗಿ ಕಥೆಗಿಂತಲೂ ಹೆಚ್ಚು ಸ್ವಾರಸ್ಯಕರವಾಗಿದೆ. ಶ್ರೀದೇವಿ ನಾಯರ್ ಈ ಸಂದರ್ಶನ ನಡೆಸಿದ ಒಂದು ವಾರದ ನಂತರ ಕಮಲಾ ದಾಸ್ ಮುಸ್ಲಿಂ ಆಗಿ ಮತಾಂತರ ಗೊಂಡದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಸಮಕಾಲೀನ ಲೇಖಕಿಯರ ಚಿಂತನೆ ಮತ್ತು ಅವರ ಸಾಹಿತ್ಯದ ಸ್ವರೂಪಗಳನ್ನು ಪರಿಚಯಿಸುವ ಅವರ ಕಥೆಗಳು ಮತ್ತು ಸಂದರ್ಶನಗಳನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡ ಓದುಗರಿಗೆ ಅತ್ಯುತ್ತಮ ಕೃತಿಯೊಂದನ್ನು ನೀಡಿದ್ದಕ್ಕೆ ಪಾರ್ವತಿ ಐತಾಳ್ ಮತ್ತು ನವಕರ್ನಾಟಕ ಪ್ರಕಾಶನ ಸಂಸ್ಥೆ ಅಭಿನಂದನಾರ್ಹರು.

ಡಾ॥ ಎಲ್. ಸಿ. ಸುಮಿತ್ರಾ
ಅಶ್ವಿನಿ, ಅನಿಕೇತನ ರಸ್ತೆ, ಸೊಪ್ಪುಗುಡ್ಡೆ
ತೀರ್ಥಹಳ್ಳಿ - ೫೭೭ ೪೩೨




ಬೀದರಿನಲ್ಲಿ ೫.೮.೦೫ರಂದು ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪೊಲೀಸ್ ವರಿಷ್ಠಾಧಿಕಾರಿ ಉಮೇಶಕುಮಾರ್ ಉದ್ಘಾಟಿಸಿದರು. ಡಾ॥ ಜಗನ್ನಾಥ ಹೆಬ್ಬಾಳೆ ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ವೀರೇಂದ್ರ ಸಿಂಪಿ, ಶ್ರೀ ಬಾಬುರಾವ್ ಹೊನ್ನ, ಶ್ರೀ ತಾರಾನಾಥ ಶೆಟ್ಟಿ ಅವರಲ್ಲದೆ ಹಲವಾರು ಸಾಹಿತ್ಯಾಸಕ್ತ ಗಣ್ಯರು ಭಾಗವಹಿಸಿದ್ದರು.

# ದೇವರ ಜಾಡ್ಯ ಮತ್ತು — ವಚನಕಾರರು —

> ಮನುಷ್ಯನ ಸರ್ವಾಂಗೀಣ ಉನ್ನತಿಗೆ ವಚನಗಳಷ್ಟೇ ಸಾಕು. ಅವುಗಳನ್ನು ಲಕ್ಷ್ಯಕೊಟ್ಟು ಓದಬೇಕು. ಚೆನ್ನಾಗಿ ಚಿಂತನ ಮಾಡಬೇಕು. ದೈನಂದಿನ ಬದುಕಿನಲ್ಲಿ ಅಳವಡಿಸುವ ಪ್ರಯತ್ನ ಬೇಕು. ಆಗ ನಾವು ವಿಶ್ವದ ಮಾನವತೆಯ ಕಡೆಗೆ ಮುಖಮಾಡಿ ನಿಲ್ಲುತ್ತೇವೆ. ಆಗ ವಚನಕಾರರು ವಿಶ್ವವನ್ನೇ ಮಹಾಮನೆಯನ್ನಾಗಿ ಪರಿವರ್ತಿಸಲು ಹೊರಟವರು ಎಂದು ಹೇಳುವ ಹಕ್ಕು ಪ್ರಾಪ್ತವಾಗುತ್ತದೆ.

ಕೆ. ಬಿ. ಮುತ್ತೂರ

ದೇವರನ್ನು ಹುಡುಕುವ ಪ್ರಯತ್ನವನ್ನು ದೂರವಿಡಬೇಕು. ಅಷ್ಟೇ ಅಲ್ಲ; ಅದನ್ನು ಶಾಶ್ವತವಾಗಿ ದೂರವಿಡಬೇಕು. ಅದೊಂದು ವ್ಯರ್ಥ ಕಾಲಕ್ಷೇಪ. ಯಾವುದನ್ನು ಹುಡುಕಲು ಸಾಧ್ಯವಿಲ್ಲವೋ ಅದನ್ನು ಹುಡುಕಿಕೊಂಡು ಹೋಗುವುದು ವ್ಯರ್ಥವಲ್ಲದೆ ಮತ್ತೇನು? ದೇವರು ಇಲ್ಲ. ಅವನನ್ನು ಹುಡುಕುವುದಲ್ಲ, ಅವನನ್ನು ಸೃಷ್ಟಿಸಲಾಗುತ್ತದೆ. ದೇವರನ್ನು ಹುಡುಕುವುದು ಎಂಬುದು ಅವನನ್ನು ಸೃಷ್ಟಿಸುವುದು ಅಥವಾ ಅವನನ್ನು ಕಟ್ಟಿಕೊಳ್ಳುವುದೇ ಆಗಿದೆ. ದೇವರು ಮತ್ತು ದೆವ್ವಗಳ ವಿರುದ್ಧ ಮಾತನಾಡುವ ಬದಲು ದೇವರನ್ನು ಹುಡುಕುವಿಕೆಯ ಬಗ್ಗೆ ಮಾತನಾಡಿದರೆ ಅದರ ಅರ್ಥವೇನು? ನೀನು ಅದೆಷ್ಟೇ ಶುದ್ಧವಾಗಿ, ಆದರ್ಶಪೂರ್ವಕವಾಗಿ ದೇವತೆಯನ್ನು ಆರಾಧಿಸಿದರೂ ಅದು ಕೇವಲ ದೇವತಾರಾಧನೆಯೇ ಆಗುತ್ತದೆ. ಅದು ಹುಡುಕಿಕೊಂಡ ದೇವತೆ ಇರಬಹುದು. ಇಲ್ಲವೆ ಕಟ್ಟಿಕೊಂಡ ದೇವತೆ ಇರಬಹುದು. ಎರಡರ ನಡುವೆ ಅಂತಹ ವ್ಯತ್ಯಾಸವೇನೂ ಇಲ್ಲ.

ಈ ವಿಷಯವನ್ನು ಕುರಿತು ೧೨ನೇ ಶತಮಾನದ ವಚನಗಳನ್ನು ಅತ್ಯಂತ ಸೂಕ್ಷ್ಮವಾಗಿ ಕೂಲಂಕಷವಾಗಿ ಪರಿಶೀಲಿಸಿದರೆ ಸತ್ಯವು ಅರಿವಾಗುತ್ತದೆ. ಎಂಟನೂರು ವರುಷಗಳಿಂದ ಇಲ್ಲಿಯವರೆಗೂ ಅನೇಕ ಪಂಡಿತರು ವಚನಗಳ ವಿಶ್ಲೇಷಣೆ ಮಾಡಿದ್ದಾರೆ. ಆ ಕಟುಸತ್ಯವನ್ನು ಎದುರಿಸಲಾಗದೆ ವಾಸ್ತವಾಂಶವನ್ನು ಮರೆಮಾಚಿ ವಚನಗಳಿಗೆ ದೇವರು ಧರ್ಮಗಳ ನಕಲಿ ಸೈದ್ಧಾಂತಿಕ ಉಡುಪನ್ನು ತೊಡಿಸಿ ಶೋಷಣೆಯ ರಾಜಮಾರ್ಗವನ್ನೇ ಸೃಷ್ಟಿಸಿ, ತಮ್ಮ ಧೂರ್ತತನ ಮತ್ತು ಮೈಗಳ್ಳತನವನ್ನು ಪ್ರದರ್ಶಿಸಿದ್ದಾರೆ. ಮುಗ್ಧಜನ ಇದೇ ಸತ್ಯವೆಂದೂ ಇದೇ ನಿಜವಾದ ಧರ್ಮವೆಂದೂ ನಂಬಿದರು. ಕರ್ನಾಟಕದ ಎಲ್ಲ ಬಸವ ಸಮಿತಿಗಳು ಇದನ್ನೇ ಮಾಡಿದವು. ವಚನ ಸಾಹಿತ್ಯಕ್ಕೆ, ಬಸವಧರ್ಮಕ್ಕೆ ಹಿನ್ನಡೆಯಾಗಿದ್ದರೆ, ಬಸವ ಸಮಿತಿಗಳಿಂದಲೇ ಆಗಿದೆಯಲ್ಲದೆ, ಸಾಮಾನ್ಯ ಜನರಿಂದಲ್ಲ. ಬಸವಣ್ಣನ ವಿಚಾರಧಾರೆಯಂತೆ ಹೆಚ್ಚು ಕಡಿಮೆ ನಡೆದುಕೊಂಡು ಬಂದವರೆಂದರೆ ಸಾಮಾನ್ಯವಾಗಿ ದುಡಿಯುವ ಜನರೇ ಹೊರತು, ಬಸವಸಾಹಿತ್ಯದ ಸಂಶೋಧಕರು, ಬಸವ ಸಮಿತಿಗಳು, ಮಠಾಧೀಶರೂ ಅಲ್ಲ. ಈ ಮಾತಿಗೆ ವಚನ ಸಾಹಿತ್ಯದ ಕೆಲವು ಉತ್ತಮ ಉದಾಹರಣೆಗಳನ್ನು ಕೊಡುತ್ತೇನೆ. ಪರಿಶೀಲಿಸಬಹುದು :

*ಆವ ಕಾಯಕವಾದರೂ ಸ್ವಕಾಯಕ ಮಾಡಿ*
*ಗುರುಲಿಂಗ ಜಂಗಮದ ಮುಂದಿಟ್ಟು*
*ಒಕ್ಕುದ ಹಾರೈಸಿ, ಮಿಕ್ಕುದ ಕೈಕೊಂಡು*
*ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು*
*ಜೀವ ಹೋದಡೆ ಸಾಯಿ*
*ಇದಕ್ಕಾ ದೇವರ ಹಂಗೇಕೆ ?*
*ಭಾಪು ಲದ್ದೆಯ ಸೋಮಾ*

ಇಲ್ಲಿ ಲದ್ದೆಯ ಸೋಮನೆಂಬ ಶರಣ ದೇವರನ್ನು ಹುಡುಕಲು ಹೋಗಲಿಲ್ಲ, ದೇವರನ್ನು ಸೃಷ್ಟಿಸಲು ಹೋಗಿಲ್ಲ. ಕಟ್ಟಿಕೊಳ್ಳಲು ಹೋಗಿಲ್ಲ. ತನ್ನ ಕಾಯಕದಲ್ಲಿ ನಿರತ, ತನ್ನ ಕಾಯಕದ ಫಲಾನುಭವಿ, ಉಳಿದದ್ದು ದಾಸೋಹ. ಅವನಿಗೆ ಮರಣ ಮಹಾನೌಮಿಯಾಗಿದೆ. ಈ ಮಾತು ಯಾರಿಗಾದರೂ ಗೊತ್ತಿದೆಯೇ ?

*ತನು ಭಕ್ತ ಮನ ದಾಸೋಹಿ*
*ಇಂದ್ರಿಯಗಳೇ ಪ್ರಸಾದಿಗಳು*
*ಸಜ್ಜನ ಶರಣರ ಪ್ರಾಣವೇ ಲಿಂಗ*
*ಇದು ಕಾರಣ ಕೂಡಲ ಚನ್ನಸಂಗಮದೇವ*
*ಹೊರಗೇನುವನೂ ಅರಸಲಿಲ್ಲ.*

ದೇಹವನ್ನು ಕಾಯಕಕ್ಕೆ ಬಳಸಿದ, ಮನವನ್ನು ದಾಸೋಹಕ್ಕೆ ನಿಲ್ಲಿಸಿದ, ಇಂದ್ರಿಯಗಳನ್ನು ಜ್ಞಾನಕ್ಕೆ ಅಣಿಗೊಳಿಸಿದ ಸಜ್ಜನ ಶರಣರಲ್ಲಿ ಮೈಮರೆದ ಚನ್ನಬಸವಣ್ಣ ದೇವರನ್ನು ಹುಡುಕಲೂ ಇಲ್ಲ, ಕಟ್ಟಿಕೊಳ್ಳಲೂ ಇಲ್ಲ.

*ಕರ್ತನೊಬ್ಬನೆ ದೇವ, ಸತ್ಯವೇ ಸುಭಾಷೆ*
*ಭೃತ್ಯಾಚಾರವೇ ಆಚಾರವಯ್ಯಾ*
*ಮತ್ತೆ ದೇವರಿಲ್ಲ ಮತ್ತೆ ಆಚಾರವಿಲ್ಲ*
*ಮತ್ತೆ ಸುಭಾಷೆ ಎಂಬುದಿಲ್ಲ*
*ಮಹಂತ ಸಕಳೇಶ್ವರ ದೇವರನೊಲಿಸಿದ*
*ಪುರಾತರ ಪಥವಿದು ಅಮಿತಥವಿಲ್ಲದೆ ನಂಬುವುದು*

ಕಾಯಕ ಮಾಡುವವ ನಾನೇ, ಸತ್ಯ ಅಹಿಂಸೆಗಳೇ ನನ್ನ ಮಾತುಗಾರಿಕೆಯ ಜೀವಾಳ. ಕಾಯಕವೇ ನನ್ನ ನಿತ್ಯದ ಆಚಾರ. ಇದರ ಹೊರತಾಗಿ ನನಗೆ ದೇವರಿಲ್ಲ. ಮತ್ತೊಂದು ಆಚಾರವಿಲ್ಲ. ಮತ್ತೊಂದು ಭಾಷೆ ಕೂಡ ಇಲ್ಲ. ಇದು ಸುಳ್ಳಲ್ಲವೆಂದು ನಂಬಿಯೇ ತೀರುವುದು.

*ನೆನೆ, ನೆನೆ ಎಂದಡೆ ಏನ ನೆನೆವೆನಯ್ಯಾ*
*ಎನ್ನ ಕಾಯವೇ ಕೈಲಾಸವಾಯಿತ್ತು*
*ಎನ್ನ ಮನವೇ ಲಿಂಗವಾಯಿತ್ತು*
*ಎನ್ನ ತನುವೇ ಸೆಜ್ಜೆಯಾಯಿತ್ತು*
*ನೆನೆವಡೆ ದೇವನುಂಟೆ ?*
*ಗುಹೇಶ್ವರ ಲಿಂಗ ಲೀನವಾಯಿತ್ತು.*

ವಚನಸಾಹಿತ್ಯ ಸಾಮ್ರಾಟ ಪ್ರಭುದೇವ ಕೇಳುತ್ತಾನೆ: ನೆನೆ, ನೆನೆ ಎಂದರೆ ಏನನ್ನು ನೆನೆಯುವುದು? ಯಾವುದನ್ನು ನೆನೆಯುವುದು? ನನ್ನ ದೇಹ ಕೈಲಾಸವೇ ಆಗಿದೆ. ನನ್ನ ಮನಸ್ಸು ಒಳ್ಳೆಯದರಲ್ಲಿ ಲೀನವಾಗಿದೆ. ನನ್ನ ದೇಹ ಗುರು ಲಿಂಗ ಜಂಗಮದ ಪೀಠವೇ ಆಗಿದೆ. ಇದರ ಹೊರತಾಗಿ ಬೇರೆ ದೇವರೇನಾದರೂ ಇರುವನೇನು? ಎಂದು ಪ್ರಶ್ನಿಸುತ್ತಾನೆ.

*ಭೂಮಿಯೊಳಗಿಲ್ಲ, ಆಕಾಶದೊಳಗಿಲ್ಲ*
*ಚತುರ್ದಶ ಭುವನದೊಳಗಿಲ್ಲ. ಹೊರಗಿಲ್ಲ*
*ಏನೆಂದರಿಯರು, ಎಂತೆಂದರಿಯರು ಹೇಳಿರಯ್ಯ*
*ಕೃತಯುಗದ ಮಾತು ಬೇಡ*
*ಗುಹೇಶ್ವರ ಅಂದೂ ಇಲ್ಲ ಇಂದೂ ಇಲ್ಲ.*

ಭೂಮಿ, ಆಕಾಶ, ಅಲ್ಲದೆ ಹದಿನಾಲ್ಕು ಲೋಕಗಳಲ್ಲಿಯೂ ಇಲ್ಲ. ಅವುಗಳ ಹೊರಗೂ ಇಲ್ಲ. ಅದು ಏನು ಎನ್ನುವುದೂ ಗೊತ್ತಿಲ್ಲ. ಅದು ಎಂತಹದ್ದು ಅದೂ ಗೊತ್ತಿಲ್ಲ. ಹಿಂದಿನ ಹಳೆ ಕಥೆ ಬೇಡ. ಆ ದೇವರು ಅಂದೂ ಇಲ್ಲ, ಇಂದೂ ಇಲ್ಲ. ಇದು ನಿಶ್ಚಯ.

ಹಸಿವಿನ ಪ್ರೇಮಕ್ಕೆ ಬೋನವ ಹಿಡಿಯುವರು
ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು
ದೇವರಿಲ್ಲ ಭಕ್ತರಿಲ್ಲ, ನಾನೂ ಇಲ್ಲ, ನೀನೂ ಇಲ್ಲ.
ಗುಹೇಶ್ವರಾ ಪೂಜಿಸುವವರೂ ಇಲ್ಲ
ಪೂಜೆಗೊಂಬವರೂ ಇಲ್ಲ

ಬೆಕ್ಕು ಇಲಿಯನ್ನು ಹಿಡಿದು ಅದರೊಡನೆ ಚೆನ್ನಾಟವಾಡಿ ತಿನ್ನುವಂತೆ ಅನ್ನ ನೀರುಗಳನ್ನು ತಂದು ನೀರಿನ ದಾಹದ ಪ್ರೀತಿಗೆ ಸ್ನಾನ ಮಾಡಿಸುವುದು, ಹಸಿವೆಯನ್ನು ತೃಪ್ತಿ ಪಡಿಸಲಿಕ್ಕೆ ನೈವೇದ್ಯ ಹಿಡಿದು ಊಟ ಮಾಡುವುದು, ಇವು ಭ್ರಮೆಯಿಂದಾಗುವ ಮಾನಸಿಕ ಚಟಗಳು. ದೇವರೂ ಇಲ್ಲ, ಭಕ್ತನೂ ಇಲ್ಲ, ಪೂಜಿಸುವವನೂ ಇಲ್ಲ, ಪೂಜೆಗೊಳ್ಳುವವನೂ ಇಲ್ಲ. ಇದೆಲ್ಲ ಕೇವಲ ಭ್ರಮೆ.

ಇಂಥ ಇನ್ನೂ ಅನೇಕ ವಚನಗಳನ್ನು ಉದಾಹರಿಸ ಬಹುದು. ಇನ್ನೂ ಮುಂದುವರಿದು, ಜಗತ್ತಿನ ಮೂಲೆ ಮೂಲೆಗಳಲ್ಲಿ ಜರುಗುವ ದೇವರ ವೈಭವೀಕರಣದ ಬಗ್ಗೆ ಹೇಳುವುದಾದರೆ : ಉದಾಹರಣೆಗೆ, ಅಮೆರಿಕಾ, ಇಂಗ್ಲೆಂಡ್ ಹಾಗೂ ಇನ್ನಿತರ ಹಲವು ದೇಶಗಳಲ್ಲಿ ನಾವು ಸ್ವತಂತ್ರರು ಎಂದು ಜಂಭಕೊಚ್ಚಿಕೊಳ್ಳುತ್ತಿರುವ ಈ ದೇಶ ಗಳಲ್ಲಿ ಎಲ್ಲೆಲ್ಲಿಯೂ ಪ್ರಜಾಪ್ರಭುತ್ವ, ಜನತೆ, ಜನಮನ ಹಾಗೂ ವಿಜ್ಞಾನ ಮುಂತಾದವುಗಳ ಹೆಸರಿನಲ್ಲಿ ಕೆಲವು ಸಂಗತಿಗಳನ್ನು ಮುಂದುಮಾಡುವುದು ಕುಹಕವೆಂದು ಪ್ರಜ್ಞಾವಂತರಿಗೆ ತಿಳಿದಿದೆ. ಜನತೆ ಮತ್ತು ದುಡಿಯುವ ಜನರನ್ನು ತಣಿಸಲು, ತೃಪ್ತಿಪಡಿಸಲು ಒಲ್ಲೆಲ್ಲಾ ಈ ಶುದ್ಧ ಆದರ್ಶಯುತ ದೇವರನ್ನು ಸೃಷ್ಟಿಸಿ, ಅವನಲ್ಲಿರುವ ಶ್ರದ್ಧೆ ಯನ್ನು ಕೊಂಡಾಡುವ ಪರಿಪಾಠವಿದೆ. ಮತಧರ್ಮದ ಭಾವನೆ, ದೇವರ ಕಲ್ಪನೆ ಅಥವಾ ದೇವರೊಡನೆ ಚಕ್ಕಂದವಾಡುವುದು, ಇವೆಲ್ಲಾ ಪ್ರಜಾಪ್ರಭುತ್ವ ಎಂದು ಕರೆದುಕೊಳ್ಳುವ ಬಂಡವಾಳಶಾಹಿಗೆ ಅಂಟಿರುವ ಒಂದು ಅಸಾಧ್ಯ ಕೊಳಕು. ಅವರು ತಮ್ಮದೇ ಆದ ಕಾರಣಕ್ಕೆ ಧೂರ್ತತನಕ್ಕೆ ಸ್ವಾರ್ಥ ಸಾಧನೆಗೆ, ಅಂಥ ಭಾವನೆಗೆ ಸೊಪ್ಪು ಹಾಕುತ್ತಾರೆ. ಆದ್ದರಿಂದಲೇ ಅದು ಅಪಾಯಕಾರಿ ಕೊಳಕು. ಇಂದಿನ ಈ ಜ್ವಲಂತ ಸಮಸ್ಯೆಗೆ ಎಂಟುನೂರು ವರ್ಷಗಳ ಹಿಂದೆಯೇ ವಚನಕಾರರು ಎಚ್ಚರಿಕೆಯ ಗಂಟೆ ಬಾರಿಸಿದ್ದರೆಂದು ಈ ಕೆಳಗಿನ ವಚನಗಳಿಂದ ಗೊತ್ತಾಗುತ್ತದೆ.

ಕಲ್ಲಿಯ ಹಾಕಿ ನೆಲ್ಲವ ತಳಿದು
ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ
ವಾಗಾದ್ವೈತವ ಕಲಿತು
ಸಂಸ್ಕೃತದ ಮಾತಿನ ಪಸರವ ಮುಂದಿಟ್ಟುಕೊಂಡು
ಮತ್ಸ್ಯನ ವಕ್ತ್ರದಲ್ಲಿ ಗ್ರಾಸವ ಹಾಕುವಂತೆ
ಆದೇತರ ನುಡಿ ಮಾತಿನ ಮರೆ
ಆತುರ ವೈರಿ ಮಾರೇಶ್ವರಾ

ಕಳ್ಳ ಹಕ್ಕಿಯನ್ನು ಹಿಡಿಯುವ ಉದ್ದೇಶದಿಂದ ಕಾಳನ್ನು ಚೆಲ್ಲಿ ಬಲೆಯ ಬೀಸುವಂತೆ, ಜಾಲಗಾರ ಮೀನಿನ ಬಾಯಿಗೆ ಆಹಾರವನ್ನು ಚೆಲ್ಲಿ ಮೀನು ಹಿಡಿಯುವಂತೆ, ಸಂಸ್ಕೃತದ ಶಬ್ದಗಳ ಜಾಲವನ್ನು ಪಸರಿಸುತ್ತ ತನ್ನ ವಾಗಾಡಂಬರದಿಂದ ಜನರನ್ನು ಮರುಳುಗೊಳಿಸುವ ನುಡಿ, ಅದೇತರ ನುಡಿ ಅದು ಸತ್ಯವನ್ನು ಮರೆಮಾಡಿ ಮೋಸಗೊಳಿಸುವ ಮಾತು.

ವೇದಗಳು ವೇದಿಸಲರಿಯದೆ ಕೆಟ್ಟವು
ಶಾಸ್ತ್ರಗಳು ಸಾಧಿಸಲರಿಯದೆ ಕೆಟ್ಟವು
ಪುರಾಣ ಪೂರೈಸಲರಿಯದೆ ಕೆಟ್ಟವು
ಹಿರಿಯರು ತಮ್ಮ ತಾವರಿಯದೆ ಕೆಟ್ಟರು
ತಮ್ಮ ಬುದ್ಧಿ ತಮ್ಮನ್ನೇ ತಿಂದಿತ್ತು
ನಿಮ್ಮನ್ನೆತ್ತ ಬಲ್ಲರು ಗುಹೇಶ್ವರಾ

ವೇದಗಳು ವೇದಿಸಲೇ ಇಲ್ಲ. ಶಾಸ್ತ್ರಗಳು ಸಾಧಿಸಲೇ ಇಲ್ಲ. ಪುರಾಣಗಳು ಏನನ್ನೂ ಪೂರೈಸಲೇ ಇಲ್ಲ. ಹಿರಿಯರು ತಮ್ಮನ್ನ ತಾವು ತಿದ್ದಿಕೊಳ್ಳದೆ ಸುಮ್ಮನೆ ಕೆಟ್ಟುಹೋದರು. ಅವರ ಬುದ್ಧಿ ವಿಚಾರಗಳು ಅವರನ್ನೇ ಹಾಳು ಮಾಡಿದವು. ಸತ್ಯ ಸಂಗತಿ ಅವರಿಗೆ ಗೊತ್ತಾಗಲೇ ಇಲ್ಲ.

ವೇದಗಳೆಂಬವು ಬ್ರಹ್ಮನ ಭೂತಾಟ
ಶಾಸ್ತ್ರಗಳೆಂಬವು ಸರಸ್ವತಿಯ ಗೊಡ್ಡಾಟ
ಆಗಮಂಗಳೆಂಬವು ಋಷಿಯ ಮರುಳಾಟ
ಪುರಾಣಂಗಳೆಂಬವು ಪೂರ್ವದವರ ಗೊಡ್ಡಾಟ
ಇಂತಿವನರಿದವರ ನೇತಿಗಳೆದು
ನಿಜದಲ್ಲಿ ನಿಂದಿಪ್ಪಾತನೆ
ಗುಹೇಶ್ವರನಲ್ಲಿ ಅಚ್ಚ ಲಿಂಗೈಕ್ಯನು

ವೇದ, ಶಾಸ್ತ್ರ, ಆಗಮ, ಪುರಾಣ ಮುಂತಾದವು ಗಳನ್ನೆಲ್ಲ ಅರಿತವರೆಂದು ಹೇಳಿಕೊಳ್ಳುವವರನ್ನು ಅಲ್ಲಗಳೆದು ಸತ್ಯ ಸಂಗತಿಯನ್ನು ತಿಳಿದಿದ್ದರೆ ಆತ ಗುಹೇಶ್ವರ ಲಿಂಗದಲ್ಲಿ ಅಚ್ಚಲಿಂಗೈಕ್ಯನು.

ವೇದಶಾಸ್ತ್ರ ಆಗಮ, ಪುರಾಣಗಳೆಲ್ಲವು
ಕೊಟ್ಟಣವ ಕುಟ್ಟಿದ ನುಚ್ಚುತೌಡು ಕಾಣ ಬೋ
ಇವ ಕುಟ್ಟಲೇಕೆ ? ಕುಸುಕಲೇಕೆ ?
ಅತ್ತಲಿತ್ತ ಹರಿವ ಮನವ ಶಿರವನರಿದಡೆ
ಬಚ್ಚಬರಿಯ ಬಯಲು ಚನ್ನಮಲ್ಲಿಕಾರ್ಜುನ

ವೇದಾಗಮಶಾಸ್ತ್ರ ಪುರಾಣಗಳ ಓದುವುದೆಂದರೆ ತೌಡು ಕುಟ್ಟಿದಂತೆ, ತೌಡು ಕುಟ್ಟುವುದರಿಂದ ಸ್ವಚ್ಛ ಮಾಡುವುದರಿಂದ ಲಾಭವೇನು ? ಅದರಂತೆ ವೇದಾಗಮಗಳಿಂದ ಯಾವ ಪ್ರಯೋಜನವೂ ಆಗದು. ವಿಷಯವಾಸನೆಗೆ ಅತ್ತಿತ್ತ ಹರಿದಾಡುವ ಮನಸ್ಸನ್ನು ನಿಲ್ಲಿಸಲು ಸತ್ಯದ ಹಾದಿ ಸುಗಮವಾಗುತ್ತದೆ ಎನ್ನುತ್ತಾಳೆ ಮಹಾದೇವಿ.

ಓದಿದ ಹಿರಿಯರು, ವೇದದ ಹಿರಿಯರು
ಶಾಸ್ತ್ರದ ಹಿರಿಯರು, ವೇಷದ ಹಿರಿಯರು
ಭಾಷೆಯ ಹಿರಿಯರು ಇವರೆಲ್ಲರು ತಮ್ಮ
ಮೆರೆದರಲ್ಲದೆ
ನಿಮ್ಮ ಮೆರೆದುದಿಲ್ಲ ತಮ್ಮ ಮರೆದು ನಿಮ್ಮ ಮೆರೆದಡೆ
ಕೂಡಿಕೊಂಡಿಪ್ಪ ಕೂಡಲಸಂಗಮದೇವ.

ವೇದಶಾಸ್ತ್ರಗಳನ್ನು ಓದಿ, ಒಳ್ಳೆಯ ವೇಷಭೂಷಣ ಗಳಿಂದ ಒಳ್ಳೆಯ ಮಾತುಗಾರಿಕೆಯಿಂದ ತಾವು ಮೆರೆದರಲ್ಲದೆ ಸತ್ಯವನ್ನು ಎತ್ತಿ ಹಿಡಿಯಲಿಲ್ಲ. ಅಸತ್ಯವನ್ನು ತೊರೆದು ಸತ್ಯವನ್ನು ಎತ್ತಿಹಿಡಿದಾಗ ಕೂಡಲಸಂಗಮ ದೇವನೆಷ್ಟು ಸರ್ವಾಂಗ ಸುಂದರ !

ಮನುಷ್ಯನ ಸರ್ವಾಂಗೀಣ ಉನ್ನತಿಗೆ ವಚನ ಗಳಷ್ಟೇ ಸಾಕು. ಅವುಗಳನ್ನು ಲಕ್ಷ್ಯ ಕೊಟ್ಟು ಓದಬೇಕು. ಚೆನ್ನಾಗಿ ಚಿಂತನೆ ಮಾಡಬೇಕು. ದೈನಂದಿನ ಬದುಕಿನಲ್ಲಿ ಅಳವಡಿಸುವ ಪ್ರಯತ್ನ ಬೇಕು. ಆಗ ನಾವು ವಿಶ್ವದ ಮಾನವತೆಯ ಕಡೆಗೆ ಮುಖಮಾಡಿ ನಿಲ್ಲುತ್ತೇವೆ. ಆಗ ವಚನಕಾರರು ವಿಶ್ವವನ್ನೇ ಮಹಾಮನೆಯನ್ನಾಗಿ ಪರಿವರ್ತಿಸಲು ಹೊರಟವರು ಎಂದು ಹೇಳುವ ಹಕ್ಕು ಪ್ರಾಪ್ತವಾಗುತ್ತದೆ.

ಕೆ. ಡಿ. ಮುತ್ತೂರ
ಮಲ್ಲಮ್ಮ ನಗರ, 'ಕಲ್ಯಾಣಕುಂಜ', ಮುಧೋಳ - ೫೮೭ ೩೧೩

ದರಿದ್ರ ನಾರಾಯಣ
ಯಾತ್ರೆಗೆ ಬಂದಿದ್ದೀರಾ ?
ಬನ್ನಿ ಸಾರ್...
ಅಯ್ಯೋ ನಿಂತೇ ಇದ್ದೀರಲ್ಲ
ಕುಳಿತುಕೊಳ್ಳಿ
ಕುರ್ಚಿ ಬೇಕೆ ?
ಕುಂಡಿ ಊರಲು
ಸಾರಿ ಸರ್...
ಇದು ಕೊಳೆಗೇರಿ
ತಗ್ಗು ದಿನ್ನೆಯ ನೆಲದ ಮೇಲೆ
ನಮ್ಮ ಬಾಳಿನ ಸವಾರಿ
ನೀವೂ ಇಲ್ಲೇ ತಳವೂರಿ !




ಡಿ. ವಿ. ಬಡಿಗೇರ
ತೆಗ್ಗಿನಪೇಟೆ, ಗದಗ - ಬೆಟಗೇರಿ - ೫೮೨ ೧೦೨

# ಭಾಷೆ ಚಿತ್ರರಂಗ ರಾಜಕೀಯ

■ ನಾ. ದಿವಾಕರ



**ಯಾ**ವುದೇ ಒಂದು ಭಾಷೆ ಬೆಳೆಯುವುದು ಅದರ ಸಾಂಸ್ಕೃತಿಕ-ಸಾಹಿತ್ಯಿಕ-ಚಾರಿತ್ರಿಕ ಹಿನ್ನೆಲೆಯನ್ನು ಅವಲಂಬಿಸಿರುತ್ತದೆ. ಭಾರತೀಯ ಭಾಷೆಗಳಲ್ಲಿ ಪ್ರಾಚೀನ ಭಾಷೆಯೆಂದು ಹೆಸರು ಗಳಿಸಿರುವ ಕನ್ನಡ ಭಾಷೆ ಕಳೆದ ೫೦೦೦ ವರ್ಷಗಳಲ್ಲಿ ಮಹತ್ತರವಾದ ಬೆಳವಣಿಗೆಗಳನ್ನು ಕಂಡಿದೆ. ವಿಭಿನ್ನ ಸಿದ್ಧಾಂತಗಳನ್ನು ಪ್ರತಿಪಾದಿಸಿರುವ ಎಲ್ಲಾ ಸಾಹಿತ್ಯ ಪ್ರಕಾರಗಳೂ ಇಂದಿನ ಸಮಾಜಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಮಾರ್ಗದರ್ಶಕವಾಗಿ ಪರಿಣಮಿಸುತ್ತವೆ. ಮಧ್ಯಮ ಹಾಗೂ ಮೇಲ್ವರ್ಗದ ಜನತೆ ಆಂಗ್ಲ ಶಿಕ್ಷಣದಿಂದ ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಎಷ್ಟೇ ಪ್ರಭಾವಿತರಾದರೂ ಸಾಹಿತ್ಯದ ಬೇರುಗಳು ಭಾಷೆಯನ್ನು ಗಟ್ಟಿಗೊಳಿಸುತ್ತಲೇ ಇರುವುದು ಸಾಹಿತ್ಯ ಪರಂಪರೆಯ ಪರಿಣಾಮವೆಂದೇ ಹೇಳಬಹುದು. ಭಾರತದಲ್ಲಿಯೇ ಅತಿ ಹೆಚ್ಚು ಜ್ಞಾನಪೀಠ ಪ್ರಶಸ್ತಿ ಗಳಿಸಿರುವ ಕೀರ್ತಿ ಕನ್ನಡ ಭಾಷೆಗೆ ಸಲ್ಲುವುದಾದರೆ ಅದು ಕನ್ನಡಿಗರಿಗೂ ಸಲ್ಲುತ್ತದೆ. ಇಂತಹ ಸಮೃದ್ಧ ಸಾಹಿತ್ಯವನ್ನು ರಕ್ಷಿಸಿಕೊಂಡು ಬಂದಿರುವುದು ಹೆಮ್ಮೆಯ ಸಂಗತಿ.

ಈಗ ಕನ್ನಡವನ್ನು ಉಳಿಸಿ, ಬೆಳೆಸಿಕೊಂಡು ಹೋಗುವ ಪ್ರಶ್ನೆ ಇಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ. ಬಹುತೇಕವಾಗಿ ಭಾಷೆಯ ಪ್ರಶ್ನೆ ಉದ್ಭವಿಸಿದಾಗ ಆಂಗ್ಲಭಾಷೆ ಆಕ್ರಮಣಕ್ಕೊಳಗಾಗುತ್ತದೆ. ಆಂಗ್ಲ ಮಾಧ್ಯಮದ ಶಾಲೆಗಳಿಂದಲೇ ಕನ್ನಡ ಭಾಷೆಯ ಬೆಳವಣಿಗೆ ಕುಂಠಿತವಾಗುತ್ತಿದೆ ಎಂಬ ಕೂಗು ಕೇಳಿಬರುತ್ತಿದೆ. ಈ ಅಭಿಪ್ರಾಯವನ್ನು ತಳ್ಳಿಹಾಕಲಾಗುವುದಿಲ್ಲ. ಆದರೂ ಕೇವಲ ಒಂದು ಪರ ಭಾಷೆಯು ಕನ್ನಡದಂತಹ ಶ್ರೀಮಂತ ಭಾಷೆಯನ್ನು ನಿರ್ನಾಮ ಮಾಡುವುದು ಅಸಾಧ್ಯದ ಮಾತೆನಿಸುತ್ತದೆ. ತಮಿಳರ ಸಂಖ್ಯೆ ಹೆಚ್ಚಾಗಿರುವುದರಿಂದ, ಆಂಗ್ಲ ಮಾಧ್ಯಮ ಶಾಲೆಗಳು ಹೆಚ್ಚಾಗಿರುವುದರಿಂದ ಕನ್ನಡ ಭಾಷೆಯೇ ಅವಸಾನದ ಹಂತದಲ್ಲಿದೆ ಎಂದು ಹೇಳುವುದು ಮರಗಳನ್ನರಸಿ ಅರಣ್ಯವನ್ನು ಕಳೆದುಕೊಂಡಂತಾಗುತ್ತದೆ. ನಿಜ, ಆಂಗ್ಲ ಮಾಧ್ಯಮದ ಶಾಲೆಗಳಿಂದ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡದ ಬಳಕೆ ಕಡಿಮೆಯಾಗುತ್ತಿದೆ. ಮಧ್ಯಮ ವರ್ಗ-ಮೇಲ್ವರ್ಗದವರಲ್ಲಿ ಮಮ್ಮಿ ಡ್ಯಾಡಿ ಸಂಸ್ಕೃತಿ ಬೆಳೆಯುತ್ತಿದೆ. ಮಂಗಳವಾರ ಎಂದರೆ ಅರ್ಥವಾಗದೆ ಇಂಗ್ಲಿಷಿನಲ್ಲಿ ಹೇಳಿ ಎನ್ನುವ ಕನ್ನಡಿಗ ಕಾಲೇಜು ವಿದ್ಯಾರ್ಥಿಗಳು ಕರ್ನಾಟಕದಲ್ಲಿದ್ದಾರೆ. ಇದಕ್ಕೆ ಮೂಲಕಾರಣ ಕರ್ನಾಟಕ ಸರ್ಕಾರ ಮತ್ತು ಇಲ್ಲಿನ ಜನಪ್ರತಿನಿಧಿಗಳು. ಗೋಕಾಕ್ ಚಳುವಳಿ ನಡೆದು ೩ ದಶಕಗಳು ಕಳೆದಿವೆ. ಸರೋಜಿನಿ ಮಹಿಷಿ ವರದಿ ಪ್ರಕಟವಾಗಿ ೨ ದಶಕಗಳು ಕಳೆದಿವೆ. ಆದರೂ ಯಾವುದೇ ಸರ್ಕಾರವೂ ಕನ್ನಡವನ್ನು ಆಡಳಿತ ಭಾಷೆಯಾಗಿ



ಅಳವಡಿಸುವಲ್ಲಿ, ಪ್ರಾಥಮಿಕ ಶಿಕ್ಷಣದಲ್ಲಿ ಅನುಷ್ಠಾನಗೊಳಿಸುವಲ್ಲಿ ಆಸಕ್ತಿ ತೋರಿಲ್ಲ. ಕರ್ನಾಟಕದ ರಾಜಕಾರಣಿಗಳೂ ಸಹ ಈ ವೈಫಲ್ಯದ ಜವಾಬ್ದಾರಿ ಹೊರಬೇಕಾಗುತ್ತದೆ. ರಾಜ್ಯೋತ್ಸವದಂದು ನಾಡಿನ ನರನಾಡಿಗಳಲ್ಲಿ ಹರಿದಾಡುವ ಕನ್ನಡಾಭಿಮಾನ, ಮರುಕ್ಷಣದಲ್ಲಿ ರಾಜಕೀಯ ಸ್ವರೂಪ ಪಡೆದಿರುತ್ತದೆ. ಈ ನಿಟ್ಟಿನಲ್ಲಿ ಕನ್ನಡಪರ ಹೋರಾಡುವ ಸಂಘಟನೆಗಳೂ ಸಹ ವಿಫಲವಾಗಿವೆ. ನಾಮಫಲಕ, ಸರ್ಕಲ್‌ಗಳು, ರಸ್ತೆಗಳು, ಧ್ವಜಸ್ತಂಭಗಳು ಮತ್ತು ಅದ್ದೂರಿ ರಾಜ್ಯೋತ್ಸವಗಳಲ್ಲೇ ಈ ಸಂಘಟನೆಗಳ ಕನ್ನಡಾಭಿಮಾನ ಮುಳುಗಿಹೋಗಿರುತ್ತದೆ. ತಾಯಿ ಭುವನೇಶ್ವರಿಯ ಆರಾಧನೆಯಿಂದಲೇ ಕನ್ನಡ ಭಾಷೆ ಸಂಸ್ಕೃತಿ ಉಳಿಯುವುದಿಲ್ಲವೆಂಬ ಅರಿವು ಈ

**ಯಾವುದೇ ಒಂದು ಭಾಷೆ ಬೆಳೆಯುವುದು ಅದರ ಸಾಂಸ್ಕೃತಿಕ-ಸಾಹಿತ್ಯಿಕ-ಚಾರಿತ್ರಿಕ ಹಿನ್ನೆಲೆಯನ್ನು ಅವಲಂಬಿಸಿರುತ್ತದೆ. ಭಾರತೀಯ ಭಾಷೆಗಳಲ್ಲಿ ಪ್ರಾಚೀನ ಭಾಷೆಯೆಂದು ಹೆಸರು ಗಳಿಸಿರುವ ಕನ್ನಡ ಭಾಷೆ ಕಳೆದ ೫೦೦೦ ವರ್ಷಗಳಲ್ಲಿ ಮಹತ್ತರವಾದ ಬೆಳವಣಿಗೆಗಳನ್ನು ಕಂಡಿದೆ.**

ಸಂಘಟನೆಗಳಿಗೆ ಮೂಡಬೇಕಾಗಿದೆ. ಕರ್ನಾಟಕದಲ್ಲಿ ನೆಲೆಸಿದವರೆಲ್ಲರೂ ಕನ್ನಡಿಗರೆಂದಾದಲ್ಲಿ, ಸಮಸ್ತ ಕನ್ನಡಿಗರೂ ಆರಾಧನಾ ಸಂಸ್ಕೃತಿಯನ್ನು ಒಪ್ಪುವುದಿಲ್ಲವೆಂಬ ಸತ್ಯವನ್ನು ಈ ಸಂಘಟನೆಗಳು ಗ್ರಹಿಸುವುದು ಅತ್ಯವಶ್ಯ. ಕನ್ನಡ, ಕನ್ನಡ ಭಾಷೆಯ ಅಳಿವು ಉಳಿವು ಡಾಲರ್‌ಗಳ ಹಿಂದೆ ಓಡುವ ವರ್ಗವನ್ನು ಅವಲಂಬಿಸಿಲ್ಲ. ಪಾಶ್ಚಿಮಾತ್ಯ ಸಂಸ್ಕೃತಿಗೆ ಜೋತುಬಿದ್ದವರನ್ನೂ ಅವಲಂಬಿಸಿಲ್ಲ. ಹಾಗಾಗಿದ್ದಲ್ಲಿ ಈ ವೇಳೆಗೆ ಕನ್ನಡ ಭಾಷೆ ಅವಸಾನ ಹೊಂದಿರಬೇಕಾಗಿತ್ತು. ಕನ್ನಡ ಭಾಷೆಯ ಅಭಿವೃದ್ಧಿ, ಉಳಿವು ಸಾಮಾನ್ಯ ಜನರನ್ನು ಅವಲಂಬಿಸಿರುತ್ತದೆ; ಸಮಾಜದ ಶೇ. ೮೦ರಷ್ಟಿರುವ ರೈತ-ಕಾರ್ಮಿಕ-ಕಲಾವಿದ-ಸಾಹಿತಿ-ಬರಹಗಾರ-ಕವಿ-ನಾಟಕಕಾರರನ್ನು ಅವಲಂಬಿಸಿರುತ್ತದೆ. ಸಾಮಾನ್ಯ ಜನತೆಯ, ದುಡಿಯುವ ವರ್ಗಗಳ, ಮನೆಯಂಗಳದಲ್ಲಿ ಕನ್ನಡ ಭಾಷೆ ವೃದ್ಧಿಸುತ್ತದೆ. ಈ ದೃಷ್ಟಿಯಿಂದ ನೋಡಿದರೆ ಕನ್ನಡ ಭಾಷೆಗೆ ಯಾವುದೇ ಅಪಾಯವಿಲ್ಲವೆಂದೇ ಹೇಳಬಹುದು. ಆಂಗ್ಲ ಭಾಷೆಯನ್ನು ಗುರಿಯಾಗಿಟ್ಟುಕೊಂಡು ವಾದಿಸಿದಲ್ಲಿ ಎಲ್ಲಾ ಚರ್ಚೆ ವಾದವಿವಾದಗಳೂ ನಗರಗಳಿಗೇ ಸೀಮಿತವಾಗಲಿರುವ ಸಾಧ್ಯತೆಗಳಿವೆ. ಈಗಾಗಿರುವುದೂ ಅದೇ ಎಂದು ಹೇಳಬಹುದು. ರಾಜಧಾನಿ ಬೆಂಗಳೂರಿನಲ್ಲಿ ಕನ್ನಡಿಗರ ಸಂಖ್ಯೆ ಕುಸಿದಿದೆ ಎಂದ ಮಾತ್ರಕ್ಕೆ ದೊಡ್ಡ ಹುಯಿಲೆಬ್ಬಿಸಲಾಗುತ್ತಿದೆ. ಬೆಂಗಳೂರಿನಂತಹ ಮೆಟ್ರೊಪಾಲಿಟನ್ ನಗರಗಳಲ್ಲಿ ಭಾಷೆಯ ತುಣುಕುಗಳನ್ನು ಹುಡುಕುವುದು ಸಾಗರದಲ್ಲಿ ಹರಳು ಶೋಧಿಸಿದಂತಾಗುತ್ತದೆ. ಮುಂಬಯಿ, ಕೊಲ್ಕತ್ತಾ, ಹೈದರಾಬಾದ್, ಚೆನ್ನೈಗಳಲ್ಲೂ ಆಯಾ ರಾಜ್ಯಗಳ ಭಾಷೆ ಇದೇ ಪರಿಸ್ಥಿತಿ ಎದುರಿಸುತ್ತಿಲ್ಲವೇ ?

ಕನ್ನಡ ಭಾಷೆಗೆ ಬೆಂಗಳೂರು ಮಾತ್ರ ಕೇಂದ್ರಸ್ಥಾನವಲ್ಲ ಅಲ್ಲವೇ ? ಹಾಗೆ ನೋಡಿದರೆ ಕನ್ನಡ ಸಾಹಿತ್ಯದ ದಿಗ್ಗಜರು ಹೊರಗಿದ್ದವರೇ ಆಗಿದ್ದಾರೆ. ಧಾರವಾಡ, ಕೋಲಾರ, ಮಂಡ್ಯ, ಮೈಸೂರು, ಶಿವಮೊಗ್ಗ, ಮಲೆನಾಡು ಪ್ರದೇಶಗಳಿಂದಲೇ ಕನ್ನಡ ಸಾಹಿತ್ಯ ಸಮೃದ್ಧತೆಯನ್ನು ಪಡೆದುಕೊಂಡಿದೆ. ಆದರೂ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಅದರ ಹಿಂದಿನ ರಾಜಕಾರಣ ಎಲ್ಲವೂ ಬೆಂಗಳೂರಿನಿಂದಲೇ ನಡೆಯುತ್ತದೆ. ಅತ್ಯಧಿಕ ಸಾಹಿತ್ಯ ಕಲಾ ಚಟುವಟಿಕೆಗಳು ಬೆಂಗಳೂರಿನಲ್ಲೇ ನಡೆಯುತ್ತವೆ. ವಚನ-ಶರಣ ಸಾಹಿತ್ಯ ಬೆಳೆಸಿದ ಉತ್ತರ ಕರ್ನಾಟಕವಾಗಲೀ ಜೈನ ಸಾಹಿತ್ಯ ಬೆಳೆಸಿದ ಮಲೆನಾಡಾಗಲೀ, ಬಂಡಾಯ ಸಾಹಿತ್ಯ ಬೆಳೆಸಿದ ಬಯಲುಸೀಮೆಯಾಗಲೀ

ಚಿತ್ರಗಳ ಗುಣಮಟ್ಟವನ್ನು ನೋಡಿದರೆ ಕನ್ನಡ ಚಿತ್ರರಂಗ ದಿನೇ ದಿನೇ ಅಧೋಗತಿಗಿಳಿಯುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಅಲ್ಲೊಂದು ಇಲ್ಲೊಂದು ಉತ್ತಮ ಚಿತ್ರಗಳನ್ನು ಹೊರತುಪಡಿಸಿದರೆ ಬಹುತೇಕ ಕನ್ನಡ ಚಿತ್ರಗಳು ಕೀಳು ಅಭಿರುಚಿಯುಳ್ಳದ್ದಾಗಿರುತ್ತವೆ. ಕರ್ನಾಟಕದ-ಕನ್ನಡಿಗರ ಸಂಸ್ಕೃತಿಯನ್ನು ರಕ್ಷಿಸಲು ಪಣ ತೊಡುವ ಚಿತ್ರೋದ್ಯಮದ ದಿಗ್ಗಜರು ತಮ್ಮದೇ ಸಿನಿಮಾಗಳಲ್ಲಿ ಏನನ್ನು ಪ್ರತಿಬಿಂಬಿಸುತ್ತಿದ್ದೇವೆಂದು ಅವಲೋಕಿಸುವುದು ಒಳಿತು.



ಕಡೆಗಣಿಸಲ್ಪಟ್ಟಿರುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಪರ ಸಂಘಟನೆಗಳು ತಮ್ಮ ದೃಷ್ಟಿಯನ್ನು ಬೆಂಗಳೂರಿನಿಂದಾಚೆಗೆ ಹಾಯಿಸುವುದು ಇಂದು ಅತ್ಯವಶ್ಯವಾಗಿದೆ.

ಏಕೆಂದರೆ, ಆಂಗ್ಲ ಮಾಧ್ಯಮದ ಶಾಲೆಗಳು ಗ್ರಾಮೀಣ ಪ್ರದೇಶಗಳಲ್ಲಿ ನಾಯಿಕೊಡೆಗಳಂತೆ ತಲೆ ಎತ್ತಿದರೂ, ಜಾಗತೀಕರಣದ ಪ್ರಭಾವದಿಂದ, ಮಾಧ್ಯಮಗಳಿಂದ ಪಾಶ್ಚಿಮಾತ್ಯ ಸಂಸ್ಕೃತಿ ದಾಳಿ ಮಾಡಿದ್ದರೂ ಇಲ್ಲಿ ಕನ್ನಡ ಒಂದು ಭಾಷೆಯಾಗಿ, ಸಂಸ್ಕೃತಿಯಾಗಿ ಜೀವಂತವಾಗಿದೆ. ಜನಪದದಲ್ಲಿ ಕಾವ್ಯ, ಕಲೆ, ನಾಟಕ, ಸಾಹಿತ್ಯದ ರೂಪಗಳಲ್ಲಿ ಕನ್ನಡ ಗ್ರಾಮೀಣ ಪ್ರದೇಶಗಳಲ್ಲಿ ತನ್ನ ಸ್ವಂತಿಕೆ ಉಳಿಸಿಕೊಂಡಿರುವುದನ್ನು ನಾವು ಕಾಣಬಹುದು. ಗ್ರಾಮೀಣ-ಪಟ್ಟಣ ಪ್ರದೇಶಗಳಲ್ಲಿ ದೈನಂದಿನ ಚಟುವಟಿಕೆಗಳಲ್ಲಿ ಆಂಗ್ಲ ಭಾಷೆಯ ಬಳಕೆ ಕಂಡುಬರುವುದೇ ಇಲ್ಲ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಇಂದಿನ ಬಹುತೇಕ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಶಿಕ್ಷಕರು ಪಾಠ ಮಾಡುವುದು ಕನ್ನಡದಲ್ಲೇ, ವಿದ್ಯಾರ್ಥಿಗಳು ಪರಸ್ಪರ ಮಾತನಾಡುವುದೂ ಕನ್ನಡದಲ್ಲೇ. ಶ್ರೀಮಂತರ ಮಕ್ಕಳು ಓದುವ ಶಾಲೆಗಳಲ್ಲಿ ಮತ್ತು ಬಿಷಪ್ ಕಾಟನ್‌ನಂತಹ ಶಾಲೆಗಳಲ್ಲಿ ಹೆಚ್ಚು ಹೆಚ್ಚು ಇಂಗ್ಲಿಷ್ ಬಳಕೆಯಾಗಬಹುದು. ಇಲ್ಲಿ ಹೇಳಬಯಸುವುದೇನೆಂದರೆ ಕೇವಲ



ಆಂಗ್ಲ ಮಾಧ್ಯಮ ಶಾಲೆಗಳ ಬೆಳವಣಿಗೆಯಿಂದ ಕನ್ನಡ ಭಾಷೆಗೆ ಯಾವುದೇ ಧಕ್ಕೆ ಉಂಟಾಗುವುದಿಲ್ಲ. ಬಹುಪಾಲು ಕನ್ನಡ ಸಾಹಿತಿ-ಕವಿ-ಬರಹಗಾರರು ಇಂಗ್ಲಿಷ್ ಪ್ರಾಧ್ಯಾಪಕರೇ ಆಗಿರುವುದನ್ನು ಗಮನಿಸಬಹುದು. ಇಂದಿನ ಜಾಗತೀಕರಣಗೊಂಡ ಸಮಾಜದಲ್ಲಿ ಶಿಕ್ಷಣ-ವಿದ್ಯಾಭ್ಯಾಸ ಕೇವಲ ಧನಾರ್ಜನೆಯ ಮೂಲವಾಗಿದೆಯೇ ಹೊರತು ಜ್ಞಾನಾರ್ಜನೆಯ ಉದ್ದೇಶ ಹೊಂದಿಲ್ಲ. ವಿಶೇಷವಾಗಿ ಮಧ್ಯಮ - ಕೆಳ ಮಧ್ಯಮ ವರ್ಗಗಳಲ್ಲಿ ನೌಕರಿ ಗಳಿಸುವುದೇ ವಿದ್ಯಾಭ್ಯಾಸದ ಪರಮೋದ್ದೇಶವಾಗಿರುವುದು ಸಹಜ. ಹಾಗಾಗಿ ಮಧ್ಯಮ ವರ್ಗದ ಪೋಷಕರೂ ಸಹ ತಮ್ಮ ಮಕ್ಕಳನ್ನು ಆಂಗ್ಲ ಮಾಧ್ಯಮಗಳಲ್ಲಿ ಓದಲು ಪ್ರೇರೇಪಿಸುತ್ತಾರೆ. ಆಂಗ್ಲ ಭಾಷೆಯಲ್ಲಿ ಪರಿಣತಿ ಇಲ್ಲದಿದ್ದಲ್ಲಿ ನೌಕರಿಯೆ ಲಭ್ಯವಾಗುವುದಿಲ್ಲ ಎಂಬ ಅಂಶ ಜನರಲ್ಲಿ ಮನೆ ಮಾಡಿದೆ. ಈ ಪ್ರವೃತ್ತಿ ಸಹಜವೂ ಕೂಡ. ಕನ್ನಡ ಮಾಧ್ಯಮದಲ್ಲಿ ಓದಿದ ಗ್ರಾಮೀಣ-ನಗರ ಪ್ರದೇಶದ ಮಕ್ಕಳು ಪರದಾಡುವುದನ್ನು ನೋಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ನಮ್ಮ ಸಮಾಜದಲ್ಲಿಯೂ ಕೂಡ ಇಂಗ್ಲಿಷ್ ಮಾತನಾಡುವುದು ಒಂದು ಘನತೆಯ ಪ್ರತಿಷ್ಠೆಯ ಸಂಕೇತವಾಗಿದೆ. ಅಚ್ಚ ಕನ್ನಡ ಮಾತನಾಡುವ, ಆಂಗ್ಲ ಭಾಷೆಯನ್ನು ಸರಿಯಾಗಿ ಪ್ರಯೋಗಿಸದ ಅಧಿಕಾರಿಗಳನ್ನು ಲೇವಡಿ ಮಾಡಲಾಗುತ್ತದೆ. ಯಾವುದೇ ಅಧಿಕಾರಿ ಗ್ರಾಮ್ಯ ಭಾಷೆಯಲ್ಲಿ ಮಾತನಾಡಿದಲ್ಲಿ ಅಂಥವರನ್ನು ಗೌಣವಾಗಿ ಕಾಣಲಾಗುತ್ತದೆ. ಶಿಷ್ಟ ಸಂಪ್ರದಾಯವನ್ನೇ ಸಾರ್ವತ್ರೀಕರಿಸುವ ಬ್ರಾಹ್ಮಣ್ಯದ ಕುರುಹನ್ನು ಇಲ್ಲಿ ಕಾಣಬಹುದಾಗಿದೆ. ಈ ಪ್ರವೃತ್ತಿ ಇತ್ತೀಚಿನ ಚಲನಚಿತ್ರಗಳಲ್ಲೂ ಇದೆ.

೯೦ರ ದಶಕದ ಹಿಂದಿನ ಚಿತ್ರಗಳಲ್ಲಿ ಗ್ರಾಮೀಣ ಪಾತ್ರ ವರ್ಗಗಳು ಗ್ರಾಮ್ಯ ಭಾಷೆಯನ್ನೇ ಬಳಸುತ್ತಿದ್ದುದನ್ನು ಸ್ಮರಿಸಬಹುದು. ಆದರೆ ಇಂದು ಗ್ರಾಮೀಣ ಹಿನ್ನೆಲೆಯ ಚಲನಚಿತ್ರಗಳಲ್ಲೂ ಸಹ ಬಹುಪಾಲು ಶಿಷ್ಟ ಭಾಷೆಯನ್ನೇ ಬಳಸಲಾಗುತ್ತಿದೆ. ಇನ್ನು ಉತ್ತರ ಕರ್ನಾಟಕದ ಸುಂದರ ಭಾಷೆ ಸಿನಿಮಾಗಳಲ್ಲಿ ಇತ್ತೆಂದರೆ ಆ ಪಾತ್ರ ಹಾಸ್ಯಕ್ಕೆ ಸೀಮಿತವಾಗಿರುತ್ತದೆ. ಕನ್ನಡ ಪರ ಹಗಲಿರುಳು ಶಂಖ ಊದುವ ಚಿತ್ರರಂಗದವರ ಹುಳುಕು ಇಲ್ಲಿ ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ, ಪ್ರಸ್ತುತ ಚಿತ್ರೋದ್ಯಮದ ಬಿಕ್ಕಟ್ಟನ್ನು ಅವಲೋಕನ ಮಾಡಿದಾಗ ವಸ್ತುನಿಷ್ಠವಾಗಿ ಕೆಲವು ಸಂಗತಿಗಳನ್ನು ಹೇಳಲೇಬೇಕಾಗುತ್ತದೆ. ಕನ್ನಡ ಚಲನಚಿತ್ರಗಳು ಯಶಸ್ವಿಯಾಗಿ ಓಡುತ್ತಿಲ್ಲ ಎಂಬ ಕಾರಣಕ್ಕೆ ಚಲನಚಿತ್ರ ವಾಣಿಜ್ಯ ಮಂಡಲಿಯೇ ಇಬ್ಭಾಗವಾಗಿ ಹೋಗಿದೆ. ಈ ಪ್ರಕ್ರಿಯೆಗಳ ಹಿಂದಿರುವುದು ವೈಯಕ್ತಿಕ ಪ್ರತಿಷ್ಠೆ-ರಾಜಕೀಯವೇ ಹೊರತು, ಕನ್ನಡ ಚಿತ್ರರಂಗದ ಯಾವುದೇ ಗಂಭೀರ ಸಮಸ್ಯೆಗಳಲ್ಲ. ಕನ್ನಡಕ್ಕಾಗಿಯೇ ತನುಮನಗಳನ್ನರ್ಪಿಸಿ ಪ್ರಾಣ ತೆರಲೂ ಸಿದ್ಧವಾಗಿರುವವರು, ಕನ್ನಡ ಭಾಷೆಗಾಗಿ ಅಲ್ಲದಿದ್ದರೂ, ಚಿತ್ರರಂಗಕ್ಕೆ ಯಾವ ಕಾಣಿಕೆ ನೀಡಿದ್ದಾರೆಂದು ಪ್ರಶ್ನಿಸಬೇಕಾಗುತ್ತದೆ. ಕೇವಲ ಕನ್ನಡ ಚಿತ್ರಗಳಲ್ಲಿ ನಟಿಸುವುದರಿಂದಲೇ ಸಮಸ್ತ ಕನ್ನಡಿಗರ ಕಣ್ಮಣಿಗಳಾಗಲು ಯಾರಿಗೂ ಸಾಧ್ಯವಾಗುವುದಿಲ್ಲ. ಕನ್ನಡ ಚಿತ್ರರಂಗ-ಪ್ರೇಕ್ಷಕರು ಇಂದು ಎದುರಿಸುತ್ತಿರುವ ಸಮಸ್ಯೆ ಎಂದರೆ ಪರಭಾಷಾ ಚಿತ್ರಗಳ ಹಾವಳಿ ಎಂಬುದು ಚಿತ್ರೋದ್ಯಮದವರ ಅಭಿಪ್ರಾಯ. ಆದರೆ



ಇದಕ್ಕಿಂತಲೂ ಗಂಭೀರ ಸ್ವರೂಪದಲ್ಲಿ ಕಂಡುಬರುವ ಸಮಸ್ಯೆ ಎಂದರೆ ತಾಂತ್ರಿಕತೆಯ ಕೊರತೆ, ನಟ ನಟಿಯರ ಕೊರತೆ, ಉತ್ತಮ ನಿರ್ದೇಶಕರ ಕೊರತೆ, ಉತ್ತಮ ಸಂಭಾಷಣೆ, ಗೀತೆ, ಸಂಗೀತದ ಕೊರತೆಗಳು... ಇತ್ಯಾದಿ.

ಚಿತ್ರಗಳ ಗುಣಮಟ್ಟವನ್ನು ನೋಡಿದರೆ ಕನ್ನಡ ಚಿತ್ರರಂಗ ದಿನೇ ದಿನೇ ಅಧೋಗತಿಗಿಳಿಯುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಅಲ್ಲೊಂದು ಇಲ್ಲೊಂದು ಉತ್ತಮ ಚಿತ್ರಗಳನ್ನು ಹೊರತುಪಡಿಸಿದರೆ ಬಹುತೇಕ ಕನ್ನಡ ಚಿತ್ರಗಳು ಕೀಳು ಅಭಿರುಚಿಯುಳ್ಳದ್ದಾಗಿರುತ್ತವೆ. ಕರ್ನಾಟಕ-ಕನ್ನಡಿಗರ ಸಂಸ್ಕೃತಿಯನ್ನು ರಕ್ಷಿಸಲು ಪಣ ತೊಡುವ ಚಿತ್ರೋದ್ಯಮದ ದಿಗ್ಗಜರು ತಮ್ಮದೇ ಸಿನಿಮಾಗಳಲ್ಲಿ ಏನನ್ನು ಪ್ರತಿಬಿಂಬಿಸುತ್ತಿದ್ದೇವೆಂದು ಅವಲೋಕಿಸುವುದು ಒಳಿತು. ರೀಮೇಕ್ ಸಂಸ್ಕೃತಿಗೆ ಶರಣಾಗಿರುವ ಚಿತ್ರೋದ್ಯಮ ತನ್ನ ಸ್ವಂತಿಕೆಯನ್ನೇ ಕಳೆದುಕೊಂಡುಬಿಟ್ಟಿದೆ. ಇನ್ನು ಕಥೆಯ ಬಗ್ಗೆ ಹೇಳುವಂತೆಯೇ ಇಲ್ಲ. ಪರಭಾಷಾ ಚಿತ್ರಗಳನ್ನು ಗಡ್ಡ ಮೀಸೆ ಸಮೇತವಾಗಿ ಭಟ್ಟಿ ಇಳಿಸುವ ಪ್ರವೃತ್ತಿ ಇಂದು ಹೆಚ್ಚುತ್ತಿದೆ. ಅತಿ ಹೆಚ್ಚು ಚಿತ್ರಗಳನ್ನು ನಿರ್ಮಿಸಿರುವ ದಾಖಲೆ ಹೊಂದಿರುವ ದ್ವಾರಕೀಶ್‌ರ ೪೬ ಚಿತ್ರಗಳಲ್ಲಿ ೪೨ ರೀಮೇಕ್‌ಗಳೇ ಆಗಿವೆ. ರೀಮೇಕ್ ಚಿತ್ರಗಳಲ್ಲಿ ನಟಿಸದೆ ಬಂದಿದ್ದ ಡಾ|| ರಾಜ್‌ರವರೂ ಸಹ ಈ ಬಲೆಗೆ ಸಿಲುಕಿದ್ದನ್ನು ಕಾಣಬಹುದು. ಇಂದಿನ ಪರಿಸ್ಥಿತಿ ನೋಡಿದರೆ ಶೇ. ೯೦ರಷ್ಟು ಚಿತ್ರಗಳು ರೀಮೇಕ್‌ಗಳಾಗಿರುತ್ತವೆ. ಏಕೆ ಕನ್ನಡದಲ್ಲಿ ಸಿನಿಮಾ ತಯಾರಿಸುವಂತಹ ಕಥೆ ಕಾದಂಬರಿಗಳಿಲ್ಲವೇ?

ಕನ್ನಡ ಚಿತ್ರೋದ್ಯಮದ ಮತ್ತೊಂದು ನ್ಯೂನತೆ ಎಂದರೆ ತಂತ್ರಜ್ಞಾನದ ಕೊರತೆ ಮತ್ತು ಆಮದು ಸಂಸ್ಕೃತಿ. ಚಿತ್ರ ನಿರ್ಮಾಣಕ್ಕೆ ಬಂಡವಾಳ ಹಾಕುವವರು, ತಾಂತ್ರಿಕ ವರ್ಗ, ಎಲ್ಲರೂ ಹೊರರಾಜ್ಯದವರೇ ಆಗಿರುತ್ತಾರೆ. ಆದ್ದರಿಂದಲೇ ಕನ್ನಡ ಚಿತ್ರರಂಗ ಒಂದು ಉದ್ಯಮವಾಗಿ ಬೆಳೆದಿಲ್ಲ. ಕ್ಷುಲ್ಲಕ ರಾಜಕೀಯ ಕಾರಣಗಳಿಗಾಗಿ ಚಿತ್ರೋದ್ಯಮವನ್ನು ಬಂದ್ ಮಾಡುವುದರಿಂದ ಅದನ್ನೇ ನಂಬಿ ಬಾಳುವ ಕಾರ್ಮಿಕರಿಗೆ ಅನ್ಯಾಯವೆಸಗಿದಂತಾಗುತ್ತದೆ. ಕನ್ನಡ ಚಿತ್ರರಂಗ ಬೆಳೆಯಬೇಕಾದರೆ ಹಿಂಸೆ, ಅಶ್ಲೀಲತೆ, ಆಮದು ಸಂಸ್ಕೃತಿಯನ್ನು ಕೈಬಿಟ್ಟು ಕನ್ನಡ ಸಂಸ್ಕೃತಿಯನ್ನು ಪ್ರತಿಬಿಂಬಿಸಬೇಕಿದೆ. ದೇಶಭಕ್ತಿಯ ಹೆಸರಿನಲ್ಲಿ, ಭಾಷಾಭಿಮಾನದ ಹೆಸರಿನಲ್ಲಿ ಹಿಂಸೆಯನ್ನು ವೈಭವೀಕರಿಸುವುದು ಸಮಾಜದ ಮೇಲೆ ನೇತ್ಯಾತ್ಮಕ ಪ್ರಭಾವವನ್ನು ಬೀರುತ್ತದೆ. ರಾಜ್ಯದ ಸಾಂಸ್ಕೃತಿಕ ಜೀವನದ

ಅಭಿವ್ಯಕ್ತಿ ಮಾಧ್ಯಮವಾಗಿ ಕಾರ್ಯ ನಿರ್ವಹಿಸುವತ್ತ ಕನ್ನಡ ಚಿತ್ರರಂಗ ಗಮನಹರಿಸಿದಲ್ಲಿ ಜನರಿಂದ ಉತ್ತಮ ಪ್ರತಿಕ್ರಿಯೆ ದೊರೆಯಬಹುದು. ಬದಲು, ಹಿಂಸೆ ಅಶ್ಲೀಲತೆಯನ್ನೇ ವೈಭವೀಕರಿಸುವುದನ್ನು ಕನ್ನಡ ಚಿತ್ರೋದ್ಯಮ ಮುಂದುವರಿಸಿಕೊಂಡು ಹೋಗುವುದಾದರೆ ಅನ್ಯ ಭಾಷೆಯ ನಿರ್ಮಾಪಕರೂ ಇದೇ ಕೆಲಸವನ್ನು ಇನ್ನೂ ಚೆನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ. ಹಾಗಾಗಿ ಕೇವಲ ಮನರಂಜನೆಗಾಗಿ ಸಿನಿಮಾ ನೋಡುವ ಮಂದಿ ಭಾಷೆಯನ್ನೂ ಲೆಕ್ಕಿಸದೆ ಪರಭಾಷಾ ಚಿತ್ರಗಳಿಗೆ ಶರಣಾಗುತ್ತಾರೆ. ಆ ಕಾರಣದಿಂದಾಗಿಯೇ 'ಚಿಗುರಿದ ಕನಸು', 'ನೀಲಾ'ಗಳಿಗಿಂತಲೂ 'ಏಕೆ ೪೭'ದಂತಹ ಚಿತ್ರಗಳು ಹೆಚ್ಚು ಯಶಸ್ವಿಯಾಗುತ್ತವೆ.

ಸದಭಿರುಚಿಯ ದೇಸೀ ಚಿತ್ರಗಳನ್ನು ನೀಡುವುದರೊಂದಿಗೆ ಚಿತ್ರೋದ್ಯಮವು ಕರ್ನಾಟಕದ ಜನತೆಯ ದೈನಂದಿನ ಸಾಮಾಜಿಕ ಆರ್ಥಿಕ ಸಮಸ್ಯೆಗಳಿಗೂ ಸ್ಪಂದಿಸಬೇಕಾಗುತ್ತದೆ. ಜನರ ಯಾವುದೇ ನೈಜ ಸಮಸ್ಯೆಗೂ ಸ್ಪಂದಿಸದ ಚಿತ್ರೋದ್ಯಮದವರಿಗೆ ಬಿಕ್ಕಟ್ಟು ಎದುರಾದಾಗ ಸಾಮಾನ್ಯ ಜನತೆ ಏಕೆ ಹೆಗಲು ನೀಡಬೇಕೆಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಸ್ಪಷ್ಟವಾಗಿ ಹೇಳುವುದಾದರೆ ಕನ್ನಡ ಭಾಷೆ ಸಂಸ್ಕೃತಿಯ ರಕ್ಷಣೆ ಕರ್ನಾಟಕದ ಸಮಸ್ತ ಜನತೆಯ ಜವಾಬ್ದಾರಿಯಾಗಬೇಕೇ ಹೊರತು ಧನಾರ್ಜನೆಯನ್ನೇ ಗಮನದಲ್ಲಿಟ್ಟುಕೊಂಡು ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಸಮಾಜದಲ್ಲಿ ಕ್ಷೋಭೆ ಉಂಟುಮಾಡುವಂತಹ ಚಿತ್ರಗಳನ್ನು ನಿರ್ಮಿಸುವುದು ಚಿತ್ರೋದ್ಯಮಕ್ಕೆ ಶೋಭೆ ತರುವುದಿಲ್ಲ.

ಕನ್ನಡ ಭಾಷೆ, ಸಂಸ್ಕೃತಿ, ಪರಂಪರೆಗಳ ರಕ್ಷಣೆ ಕನ್ನಡಿಗರ ಹೊಣೆಯಾದಲ್ಲಿ ಮಾತ್ರ ಇಂದಿನ ಸಂದಿಗ್ಧತೆ ನಿವಾರಣೆಯಾಗಬಹುದು. ರಕ್ಷಣೆ ಎಂದ ಮಾತ್ರಕ್ಕೆ ಕನ್ನಡ ಒಂದು ಭಾಷೆ ಸಂಸ್ಕೃತಿಯಾಗಿ ಅಪಾಯದ ಅಂಚಿನಲ್ಲಿದೆ ಎಂದರ್ಥವಲ್ಲ. ಆದರೆ ಕನ್ನಡ ಭಾಷೆ ಇನ್ನೂ ಎತ್ತರಕ್ಕೆ ಬೆಳೆಯಬೇಕಾಗಿದೆ. ನವ ಪೀಳಿಗೆಯ ಲೇಖಕರು ಕಡಿಮೆಯಾಗುತ್ತಿದ್ದಾರೆ. ಭೈರಪ್ಪ, ಅನಂತಮೂರ್ತಿಯವರ ಕೃತಿಗಳನ್ನು ಹೊರತುಪಡಿಸಿ ಬೇರಾವ ಉತ್ತಮ ಕಾದಂಬರಿಗಳೂ ಹೊರಬರುತ್ತಿಲ್ಲ. ವಿಮರ್ಶಾ ಕೃತಿಗಳು ಸಂಶೋಧನಾ ಕೃತಿಗಳು ಕಡಿಮೆಯಾಗುತ್ತಿವೆ. ಇದಕ್ಕೆ ಮುಖ್ಯ ಕಾರಣ ಕರ್ನಾಟಕದ ಜನತೆಯಲ್ಲಿ ಓದುವ ಹವ್ಯಾಸ ಕಡಿಮೆಯಾಗುತ್ತಿರುವುದು. ೭೦-೮೦ರ ದಶಕದ ಗುಣಮಟ್ಟದ ಕಾದಂಬರಿಗಳೂ ಇಂದು ಪ್ರಕಟವಾಗುತ್ತಿಲ್ಲ. ಕಾವ್ಯಲೋಕದಲ್ಲಿ ನಾಯಿಕೊಡೆಗಳಂತೆ ಕವಿಗಳು ಹುಟ್ಟಿಕೊಳ್ಳುತ್ತಿರುವರಾದರೂ ಉತ್ತಮ ಕಾವ್ಯ ರಚನೆಯಾಗುತ್ತಿಲ್ಲ. ಉತ್ತಮ ಕವಿಗಳೆಂದು ಹಣೆಪಟ್ಟಿ ಹೊತ್ತವರು ಜನತೆಯಿಂದ ವಿಮುಖರಾಗುತ್ತಿದ್ದಾರೆ. ಜನರ ಗ್ರಹಿಕೆಗೆ ಸಿಲುಕದ ವಸ್ತುವನ್ನೇ ಕಾವ್ಯ ಎನ್ನುವುದಾದರೆ ಅದು ಸಾಮಾಜಿಕ ಚೌಕಟ್ಟಿನಿಂದ ಹೊರಗೇ ಉಳಿಯುತ್ತದೆ. ಕಾವ್ಯದ ಸ್ವರೂಪವನ್ನು ಉಳಿಸಿಕೊಂಡು ಸಾಮಾನ್ಯ ಜನರ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸುವಂತಹ ಕಾವ್ಯ ಇಂದು ಹೆಚ್ಚು ಅಗತ್ಯವಾಗಿದೆ. ಕುವೆಂಪು ಅವರ ಹಾದಿಯಲ್ಲಿ ನಡೆಯುವುದು ಇಂದು ಅತ್ಯವಶ್ಯವಾಗಿದೆ. ಇನ್ನೊಂದೆಡೆ, ಕನ್ನಡ ಸಾಹಿತ್ಯ ಕೃತಿಗಳ ಬೆಲೆಗಳೂ ಸಾಮಾನ್ಯ ಜನರಿಗೆ ನಿಲುಕದಂತಾಗಿದೆ. ಸರ್ಕಾರವಾಗಲೀ ಸಾಹಿತ್ಯ ಪರಿಷತ್ ಆಗಲೀ ಕನ್ನಡ ಸಾಹಿತ್ಯ ಕೃತಿಗಳನ್ನು ಜನರ ಕೈಗೆಟಕುವ ದರದಲ್ಲಿ ನೀಡಲು ಯತ್ನಿಸುತ್ತಿಲ್ಲ. ಹಲವಾರು ಉದಯೋನ್ಮುಖ ಬರಹಗಾರರಿಗೆ, ಕವಿ, ಸಾಹಿತಿಗಳಿಗೆ ತಮ್ಮ ಕೃತಿಗಳನ್ನು ಪ್ರಕಟಿಸುವುದೇ ದುಸ್ತರವಾಗಿದೆ. ಕವಿ ಸಾಹಿತಿಗಳಲ್ಲಿ ಬೆಳೆದಿರುವ ಮಠದ ಸಂಸ್ಕೃತಿಯಿಂದ, ಗುಂಪುಗಾರಿಕೆಯಿಂದ ಯುವಕರಿಗೆ ಮನ್ನಣೆ ದೊರೆಯುತ್ತಿಲ್ಲ. ತಮ್ಮ ಕೃತಿ ಹೊರತರಲು ತಾವೇ ಹಣ ತೊಡಗಿಸಬೇಕಾದ ಪರಿಸ್ಥಿತಿ ಬಂದೊದಗಿದೆ. ಈ ನಿಟ್ಟಿನಲ್ಲಿ ಕನ್ನಡಪರ ಸಂಘಟನೆಗಳಾಗಲೀ, ಕನ್ನಡ ಸಂಘಗಳಾಗಲೀ ಉಸಿರೆತ್ತದಿರುವುದು ವಿಷಾದನೀಯ. ರಾಜ್ಯೋತ್ಸವದ ಜಾತ್ರೆ, ಮೆರವಣಿಗೆ, ಆಡಂಬರದ ಮನರಂಜನೆ, ಸಿನಿಮಾ ತಾರೆಯರ ವೈಭವೀಕರಣ, ವರ್ಷಕ್ಕೊಮ್ಮೆ ಧ್ವಜಾರೋಹಣ ಇಷ್ಟಕ್ಕೆ ಸೀಮಿತವಾಗಿರುವ ಕನ್ನಡ ಸಂಘ ಸಂಘಟನೆಗಳು ಸಾಹಿತ್ಯದ ಬಗ್ಗೆ ಭಾಷಾ ಬೆಳವಣಿಗೆಯ ಬಗ್ಗೆ ಗಮನಹರಿಸುವಂತೆಯೇ ಕಾಣುವುದಿಲ್ಲ. ಎಲ್ಲೋ ಕೆಲವು ಸಂಘಗಳು (ಉದಾಹರಣೆಗೆ, ನಾಗಮಂಡಲ) ಉತ್ತಮ ನಾಟಕ ಆಡುವುದನ್ನು ಬಿಟ್ಟರೆ ಉಳಿದಂತೆ ಕನ್ನಡ ಸಂಘಟನೆ ಒಂದು ದಂಧೆಯಾಗಿಬಿಟ್ಟಿದೆ. ಕೇವಲ ವಿಸಿಟಿಂಗ್ ಕಾರ್ಡ್ ಪ್ರೊಫೆಸರ್‌ಗಳಂತೆ ಪದವಿಗಳಿಗಾಗಿ ಸಂಘಗಳಲ್ಲಿ ಸೇರುವ ಗಣ್ಯರು ಒಂದು ರೀತಿಯಲ್ಲಿ ಕನ್ನಡ ಭಾಷೆಯ ಸ್ಥಗಿತತೆಗೆ ಕಾರಣರಾಗಿದ್ದಾರೆ. ಆಗಾಗ್ಗೆ ನಡೆಯುವ ಸಾಹಿತ್ಯ ಸಮ್ಮೇಳನ ಎಂಬ ಜಾತ್ರೆ ಸಮಾಜದಲ್ಲಿ ಇವರ ಘನತೆಯನ್ನು ಹೆಚ್ಚಿಸುತ್ತದೆ. ಆದರೆ ಸಾಹಿತ್ಯ ಮೂಲೆ ಗುಂಪಾಗುತ್ತದೆ. ಸಾಹಿತ್ಯ ಪರಿಷತ್ ಚುನಾವಣೆಗಳಲ್ಲಿ ನಡೆಯುವ ರಾಜಕೀಯ ಕಸರತ್ತುಗಳು, ದೋಷಾರೋಪಗಳು, ನಿಂದನೆಗಳು ಇದಕ್ಕೆ ನಿದರ್ಶನವಷ್ಟೆ.

**ಪ್ರಸ್ತುತ ಕರ್ನಾಟಕದ ಜನತೆ ಎದುರಿಸುತ್ತಿರುವ ಹಲವಾರು ಸಮಸ್ಯೆ, ಸಂದಿಗ್ಧತೆಗಳನ್ನು ನಿವಾರಿಸಲು ವಿಶಾಲ ದೃಷ್ಟಿಕೋನವುಳ್ಳ ಭಾಷಾ ಸಾಹಿತ್ಯ ಕಾಳಜಿಯುಳ್ಳ ದಾರ್ಶನಿಕತೆಯುಳ್ಳ ಸಂಘಟನೆಗಳು ಅಗತ್ಯವಾಗಿದೆ.**

ಈ ಹಿನ್ನೆಲೆಯಿಂದ ಪ್ರಸ್ತುತ ಕನ್ನಡಿಗರ ಸಂದಿಗ್ಧತೆಯನ್ನು ವಿಶ್ಲೇಷಿಸಿದಾಗ ಗ್ರಹಿಸಬಹುದಾದ ಒಂದು ಅಂಶವೆಂದರೆ ಕನ್ನಡಿಗರು ಆಕ್ರಮಿತ ಮನೋಭಾವದಿಂದ ಬಳಲುತ್ತಿದ್ದಾರೆ. ಮೊದಲಿನಂತೆ ಶಾಂತಿಪ್ರಿಯರಾಗಿಲ್ಲ, ಹಿಂಸಾ ಮನೋಭಾವ ಹೆಚ್ಚಾಗುತ್ತಿದೆ. ದ್ವೇಷ ಅಸೂಯೆಗಳು ಭಾಷಾಂಧತೆ ಮತಾಂಧತೆಯನ್ನು ಬೆಳೆಸುತ್ತಿವೆ. ಅತೃಪ್ತ ಮನಸ್ಸುಗಳನ್ನು ದುರುಪಯೋಗಪಡಿಸಿಕೊಳ್ಳುವ ಹಿಂಸಾಪ್ರವೃತ್ತಿಯ ಶಕ್ತಿಗಳು ಯುವ ಜನಾಂಗವನ್ನು ತಪ್ಪುದಾರಿಗೆಳೆಯುತ್ತಿವೆ. ಕರ್ನಾಟಕ ಹಾಗೂ ಕನ್ನಡದ ರಕ್ಷಣೆಗೆ ಟೊಂಕಕಟ್ಟಿ ನಿಂತಿರುವ ಹೋರಾಟಗಾರರ ಪಡೆಗಳು ಹೆಚ್ಚು ಹಿಂಸಾತ್ಮಕ ರೂಪ ತಾಳುತ್ತಿವೆ. ರಚನಾತ್ಮಕವಾದ ಯಾವುದೇ ಕಾರ್ಯಕ್ರಮಗಳಿಲ್ಲದೆ ಸಮಾಜಘಾತುಕ ಶಕ್ತಿಗಳಿಗೆ ಮುಕ್ತ ಅವಕಾಶ ನೀಡಲಾಗುತ್ತಿದೆ.

ಮಾಧ್ಯಮಗಳ ದಾಳಿಯಿಂದ ಯುವ ಜನರಲ್ಲಿ ಓದುವ ಹವ್ಯಾಸ ಕಡಿಮೆಯಾಗುತ್ತಿದೆ. ಪುಸ್ತಕಗಳನ್ನು ಕೊಂಡು ಓದುವವರ ಸಂಖ್ಯೆ ಕ್ಷೀಣಿಸುತ್ತಿದೆ, ಅಶ್ಲೀಲ ಸಾಹಿತ್ಯ ಬಲಗೊಳ್ಳುತ್ತಿದೆ. ಇಷ್ಟು ಸಾಲದೆಂಬಂತೆ ಚಲನಚಿತ್ರ ಮಾಧ್ಯಮವು ಈ ಎಲ್ಲಾ ನ್ಯೂನತೆಗಳಿಗೂ ಪುಷ್ಟಿ ನೀಡುವಂತಹ ಚಿತ್ರಗಳನ್ನು ನೀಡುತ್ತಿದೆ. ಇಂದು ಪರಭಾಷಾ ಚಿತ್ರಗಳನ್ನು ನಿಷೇಧಿಸಲು ಹೋರಾಡುತ್ತಿರುವ ಚಿತ್ರೋದ್ಯಮದ ದಿಗ್ಗಜರು ಈ ಸಮಸ್ಯೆಗಳನ್ನು ಕುರಿತು ಯೋಚಿಸಿದ್ದಾರೆಯೆ ? ಇಂದು ತಮ್ಮ ಹೋರಾಟವನ್ನೇ ಸಮಸ್ತ ಕನ್ನಡಿಗರ ಹೋರಾಟ ಎಂದು ಪ್ರತಿಪಾದಿಸಿ ಜನ ಬೆಂಬಲ ಅಪೇಕ್ಷಿಸುತ್ತಿರುವ ಚಿತ್ರೋದ್ಯಮ ಕನ್ನಡಿಗರಿಗಾಗಿ, ಕನ್ನಡ ಭಾಷೆ ಸಂಸ್ಕೃತಿ ಪರಂಪರೆಗಳ ರಕ್ಷಣೆ ಅಭಿವೃದ್ಧಿಗಾಗಿ ನೀಡಿರುವ ಕಾಣಿಕೆ ಏನು ? ಈ ನಿಟ್ಟಿನಲ್ಲಿ ಕೆಲವು ರಾಜಕಾರಣಿಗಳಿಗೂ ಸಿನಿಮಾ ನಟರಿಗೂ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ.

ಕನ್ನಡ ಚಿತ್ರೋದ್ಯಮದ ಸಮಸ್ಯೆ ಸಮಸ್ತ ಕನ್ನಡಿಗರ ಸಮಸ್ಯೆಯಲ್ಲ. ಈ ಹೋರಾಟಕ್ಕೆ ಕೆಲವು ಪುರೋಗಾಮಿ ಗುಂಪುಗಳೂ ಬೆಂಬಲ ಸೂಚಿಸಿರುವುದು ಅಚ್ಚರಿ ಮೂಡಿಸುವ ಸಂಗತಿಯಾಗಿದೆ. ಸಾಲದೆಂಬಂತೆ ಪ್ರಸ್ತುತ ಹೋರಾಟವನ್ನು ಗೋಕಾಕ್ ಚಳುವಳಿಗೆ ಹೋಲಿಸಿರುವುದು ಹಾಸ್ಯಾಸ್ಪದವೆನಿಸುತ್ತದೆ. ಇದು ಸಂಘ ಪರಿವಾರದವರು ಅಯೋಧ್ಯಾ ಚಳುವಳಿಯನ್ನು ಎರಡನೇ ಸ್ವಾತಂತ್ರ್ಯ ಚಳುವಳಿಗೆ ಹೋಲಿಸಿದಂತಾಗುತ್ತದೆ. ಎಲ್ಲೋ ಒಂದು ಕಡೆ ಕನ್ನಡಪರ ಸಂಘಟನೆಗಳು, ಚಿತ್ರೋದ್ಯಮದ ನಾಯಕರು ಸಂಘಪರಿವಾರದ ಪುರೋಹಿತಶಾಹಿ ಮನೋಭಾವಕ್ಕೆ ಜೋತು ಬಿದ್ದಿರುವುದು ಕಂಡುಬರುತ್ತದೆ. ಇಂತಹ ಪ್ರತಿಗಾಮಿ ಶಕ್ತಿಗಳಿಗೆ ಬೆಂಬಲ ನೀಡುವುದರಿಂದ ಕನ್ನಡಿಗರ ಭವಿಷ್ಯ ಕರಾಳವಾಗುವುದೇ ಹೊರತು ಅಭಿವೃದ್ಧಿ ಹೊಂದುವುದಿಲ್ಲ.

ಪ್ರಸ್ತುತ ಕರ್ನಾಟಕದ ಜನತೆ ಎದುರಿಸುತ್ತಿರುವ ಹಲವಾರು ಸಮಸ್ಯೆ, ಸಂದಿಗ್ಧತೆಗಳನ್ನು ನಿವಾರಿಸಲು ವಿಶಾಲದೃಷ್ಟಿಕೋನವುಳ್ಳ ಭಾಷಾ ಸಾಹಿತ್ಯ ಕಾಳಜಿಯುಳ್ಳ ದಾರ್ಶನಿಕತೆಯುಳ್ಳ ಸಂಘಟನೆಗಳು ಅಗತ್ಯವಾಗಿದೆ.

*ಚಿತ್ರಕೃಪೆ: ಕನ್ನಡ ಸಿನಿಮಾ*
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

**ನಾ. ದಿವಾಕರ**
೩೭೬, ೧೧ನೇ ಅಡ್ಡರಸ್ತೆ
ಶ್ರೀರಾಮಪುರ ೨ನೇ ಹಂತ
ಮೈಸೂರು - ೫೭೦ ೦೨೩



# ಮೂವರು ಮಹಾ ನಾಡಿ ನಿಪುಣರು

ಪ್ರಸಿದ್ಧ ಲೇಖಕರನ್ನು ನುಡಿ ನಿಪುಣರೆಂದು ಗೌರವಿಸುವುದಾದರೆ, ಪ್ರಸಿದ್ಧ ವೈದ್ಯರನ್ನು ನಾವು ನಾಡಿ ನಿಪುಣರೆಂದು ಗೌರವಿಸಬಹುದೇನೋ. ಬೆಂಗಳೂರಿನ ಡಾ|| ಸಿ. ಆರ್. ಚಂದ್ರಶೇಖರ್, ಶಿವಮೊಗ್ಗದ ಡಾ|| ಎಚ್. ಡಿ. ಚಂದ್ರಪ್ಪಗೌಡ ಹಾಗೂ ಬೆಳಗಾವಿಯ ಡಾ|| ಸದಾಶಿವಯ್ಯ ಜ. ನಾಗಲೋಟಿಮಠ – ಈ ಮೂವರು ನಾಡಿ ನಿಪುಣರು ಮಾತ್ರವಲ್ಲ, ನುಡಿ ನಿಪುಣರೂ ಆಗಿದ್ದಾರೆ. ಆತ್ಮಕಥನ ಬರೆದಿದ್ದಾರೆ. ಡಾ|| ಚಂದ್ರಶೇಖರರ 'ಹಿತ-ಅಹಿತ', ಡಾ|| ಚಂದ್ರಪ್ಪಗೌಡರ 'ವೈದ್ಯಾಧಿಕಾರಿಯ ಬದುಕು-ಬವಣೆ', ಡಾ|| ನಾಗಲೋಟಿಮಠ ಅವರ 'ಬಿಚ್ಚಿದ ಜೋಳಿಗೆ' ಓದಿದಾಗ ಸರ್ಜರಿ ಮಾಡುವ ಕೈಗಳು ಬರೆಯಲು ಹೊರಟರೆ ಭರ್ಜರಿ ಬರೆಯಬಲ್ಲವು ಎಂಬುದನ್ನು ಮನಗಾಣಬಹುದು.

ವೈದ್ಯಕೀಯ ಕ್ಷೇತ್ರದಲ್ಲಿ ಈ ಮೂವರು ಸಾಧಿಸಿರುವುದನ್ನು ಪರಿಶೀಲಿಸುವ ಶ್ರಮ ಇಲ್ಲಿ ತೆಗೆದುಕೊಂಡಿಲ್ಲ. ಈ ಮೂವರೂ ಎಂ.ಬಿ.ಬಿ.ಎಸ್. ಮಾಡಿರುವುದೇನೋ ನಿಜ. ಆದರೆ ಇವರಲ್ಲಿ ಯಾರೂ ಶ್ರೀಮಂತರ ಕುಟುಂಬದಲ್ಲೋ ವೈದ್ಯರ ಕುಟುಂಬದಲ್ಲೋ ಹುಟ್ಟಿ ವೈದ್ಯನಾಗಬೇಕೆಂಬ ಹಂಬಲದಿಂದ ವೈದ್ಯರಾದವರಲ್ಲ. ಮೂವರೂ ಕೆಳ ಮಧ್ಯಮ ವರ್ಗದ, ಶೈಕ್ಷಣಿಕವಾಗಿ ಹಿಂದುಳಿದ, ಮಹತ್ವಾಕಾಂಕ್ಷೆಗಳಿಲ್ಲದ, ಸರಳ ಜೀವನ ನಡೆಸುತ್ತಿದ್ದ ಕುಟುಂಬದಲ್ಲಿ ಹುಟ್ಟಿದವರು. ಬಡತನ ಅಡ್ಡ ಬಂದರೂ ಪ್ರತಿಭೆಗೆ ಸಿಗಬಹುದಾದ ಪ್ರೋತ್ಸಾಹದಿಂದ ಮೇಲೇರಿ ಬಂದವರು. ಈಗಿನ ಕಾಲದ ವೈದ್ಯರಂತೆ ವೈದ್ಯೆಯನ್ನೇ ಬಾಳಸಂಗಾತಿಯಾಗಿ ಆರಿಸಿ ಹಣಗಳಿಸಲು ವೈದ್ಯಕೀಯ ವೃತ್ತಿಯನ್ನು ದುರುಪಯೋಗಪಡಿಸಿಕೊಂಡವರಲ್ಲ. ಖಾಸಗಿ ವೈದ್ಯರಾಗಿರದೆ, ವೈದ್ಯಕೀಯ ಸಂಸ್ಥೆಗಳಲ್ಲಿ ನಿಷ್ಠೆಯಿಂದ, ನಿಸ್ವಾರ್ಥರಾಗಿ ದುಡಿದು ಹೆಸರು ಗಳಿಸಿದವರು. ವೈದ್ಯಕೀಯ ವೃತ್ತಿಗೆ ಘನತೆ ತಂದುಕೊಟ್ಟವರು. ಆದರ್ಶ ರೀತಿಯಲ್ಲಿ ಜೀವನವನ್ನು ಸಾಗಿಸಿ ಅನುಕರಣಕ್ಕೆ ಯೋಗ್ಯರಾದವರು. ಮಹಾನುಭಾವರು.

ಈ ಮೂವರಲ್ಲಿ ಡಾ|| ಚಂದ್ರಪ್ಪಗೌಡರು ಹಿರಿಯರು. ಅವರಿಗೆ ಈಗ ೭೫ ವರ್ಷ. ಡಾ|| ನಾಗಲೋಟಿಮಠ ಅವರಿಗೆ ೬೪ ವರ್ಷ. ಡಾ|| ಚಂದ್ರಶೇಖರ್ ಇವರಿಬ್ಬರಿಗಿಂತ ಕಿರಿಯರು. ಅವರಿಗೆ ಈಗ ೫೬ ವರ್ಷ. ಕೆಲಸದಿಂದ ಇನ್ನೂ ನಿವೃತ್ತಿಯಾಗಿಲ್ಲ. ಆದರೂ ಡಾ|| ಚಂದ್ರಪ್ಪಗೌಡರು ಹೇಳುವಂತೆ ಅವರು 'ಲಿವಿಂಗ್ ಲೆಜೆಂಡ್'! ವೈದ್ಯಕೀಯ ಸಾಹಿತ್ಯ ಸೃಷ್ಟಿಯಲ್ಲಿ, ಅದನ್ನು ಜನಪ್ರಿಯಗೊಳಿಸುವಲ್ಲಿ ಅವರು ಎತ್ತಿದ ಕೈ. ಮನೋವೈದ್ಯರಾಗಿ ಆ ಇಬ್ಬರಿಂದ ಭಿನ್ನವಾಗಿದ್ದಾರೆ, ಓದುಗರಿಗೆ ಹತ್ತಿರದವರಾಗಿದ್ದಾರೆ. ಅವರು ಕರ್ನಾಟಕದ ರಾಜಧಾನಿಯಾದ ಬೆಂಗಳೂರಲ್ಲೇ ಬಹಳ ಕಾಲದಿಂದ ನೆಲೆಸಿರುವುದು ಅವರ ಕೀರ್ತಿಗೆ ಹೆಚ್ಚಿನ ಇಂಬು ಕೊಟ್ಟಿರಬಹುದು. ಅಹಿತಕ್ಕಿಂತ ಹಿತವನ್ನೇ ಹೆಚ್ಚು ಕಂಡವರು.

ಡಾ|| ಚಂದ್ರಪ್ಪಗೌಡರ ಬಾಳಲ್ಲಿ ಹಿತ ಮತ್ತು ಅಹಿತ ಸಮಪಾಲನ್ನು ಕಂಡಿರಬಹುದು. ಅವರಿಗೆ ವಿದೇಶಕ್ಕೆ ಹೋಗುವ ಅವಕಾಶ ಸಿಕ್ಕಂತೆ ಕಾಣುವುದಿಲ್ಲ. ಸೇವೆಯಲ್ಲಿ ಕೂಡಾ ಸೀನಿಯಾರಿಟಿ ಸಿಗದೆ ನೊಂದುಕೊಂಡವರು. ಮುಳುಗಡೆಗೆ ತುತ್ತಾದವರು. ಬಾಳಸಂಗಾತಿಯನ್ನು ಕಳೆದುಕೊಂಡವರು. ಇಷ್ಟಾಗಿಯೂ ಶಾಂತವಾಗಿ ಬಾಳಿದವರು, ಬಾಳುತ್ತಿರುವವರು.

ಡಾ|| ನಾಗಲೋಟಿಮಠ ಅವರ ಬಾಳಲ್ಲಿ ಹಿತದ ಪಾಲಿಗಿಂತ ಅಹಿತದ ಪಾಲೇ ಹೆಚ್ಚೆಂದು ಕಾಣುತ್ತದೆ. ಬಾಲ್ಯದಲ್ಲಿ ಕುಸ್ತಿಯಲ್ಲಿ ಆಸಕ್ತರಾದ ಇವರಿಗೆ ಬಾಳೆಲ್ಲಾ ಕುಸ್ತಿ ಆಡುವಂತಾಯ್ತು. ತಾಯಿಯ ಹೊಟ್ಟೆಯಲ್ಲಿರುವಾಗಲೇ ಇವರ ತಂದೆ-ತಾಯಿ ಮನೆಯಿಂದ ಅಟ್ಟಲ್ಪಟ್ಟವರು. ಗದಗಿನ ಒಂದು ಪ್ರೆಸ್ಸಲ್ಲಿ ಕಸಗುಡಿಸುವ, ಚಹಾ ಸರಬರಾಜು ಮಾಡುವ ನೌಕರಿಯಿಂದ ಪ್ರಾರಂಭಿಸಿ, ಅದೇ ಪ್ರೆಸ್ಸಿನ ಮಾಲೀಕರಾಗಿ ಕಷ್ಟಪಟ್ಟು ಮೇಲೇರಿದ ತಂದೆಯ ನಿಧನದ ನಂತರ ಸಮಸ್ತ ಆಸ್ತಿ ಪಾಸ್ತಿ ಕಳೆದುಕೊಂಡು ನಿರ್ಗತಿಕರಾಗಿ, ಅನಂತರ ತಾಯಿಯನ್ನೂ ಕಳೆದುಕೊಂಡು, ಬೆನ್ನಿಗೆಬಿದ್ದ ತಂಗಿಯನ್ನೂ ಸಂರಕ್ಷಿಸಿಕೊಂಡು, ಶಿಕ್ಷಣ ಮುಂದುವರಿಸುವ ಸಲುವಾಗಿ ಮದುವೆಯಾಗಿಯೂ ತೊಂದರೆಗಳಿಂದ ಮುಕ್ತಿ ಪಡೆಯದೆ ಗುರಿಮುಟ್ಟಿದ ವೀರ ನಾಗಲೋಟಿಮಠ. ಅವರ ಜೀವನ ಚರಿತ್ರೆ ಓದುವಾಗ ನಮಗೆ ಕಣ್ಣು ಒದ್ದೆಯಾಗುತ್ತದೆ. ಹೋರಾಟಕ್ಕೆ ನಿಂತರೆ ಅವಮಾನಕ್ಕೂ ಅಂಜದವರಲ್ಲ. ಒಮ್ಮೆ ಕೆಳದರ್ಜೆಯ ನೌಕರರೇ ಅವರ ಮೇಲೆ ಎರಗಿದರು. ಆದರೂ ಜಪ್ಪೆನ್ನದ ಜೀವ. ಹಾಗಾಗಿ ಇವರ ಕಥೆ ಮತ್ತಿಬ್ಬರ ಕಥೆಗಿಂತ ಹೆಚ್ಚು ತೀವ್ರವಾಗಿ ನಮ್ಮ ಮನದಾಳಕ್ಕೆ ಇಳಿಯುತ್ತದೆ.

ಈ ತ್ರಿಮೂರ್ತಿಗಳು ಒಬ್ಬರಿಗಿಂತ ಒಬ್ಬರು ಘಟಾನುಘಟಿಗಳು. ಮೂವರೂ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಜನಾನುರಾಗವನ್ನು ಗಳಿಸಿದ್ದಾರೆ. ಇಂಥ ಅಪರೂಪದ ವೈದ್ಯರು ಮುಂದಿನ ಪೀಳಿಗೆಯ ವೈದ್ಯರಿಗೆ ಮಾರ್ಗದರ್ಶಿಗಳು.


ಡಾ|| ಎಚ್. ಡಿ. ಚಂದ್ರಪ್ಪಗೌಡ


ಡಾ|| ಸ. ಜ. ನಾಗಲೋಟಿಮಠ


ಡಾ|| ಸಿ. ಆರ್. ಚಂದ್ರಶೇಖರ್

**ಹಾಲಾಡಿ ಮಾರುತಿರಾವ್**
೧೮೦/೨೮, 'ಇಂಚರ', ೩ನೇ ಕ್ರಾಸ್, ೧೫ನೇ ಮುಖ್ಯರಸ್ತೆ, ಕುರುಬರಹಳ್ಳಿ, ಬೆಂಗಳೂರು - ೫೬೦ ೦೮೬




# ಈ ಅನುಭವ

ಚಿಕ್ಕವನಾಗಿದ್ದಾಗಿನಿಂದಲೂ ಕೋಲು, ದೊಣ್ಣೆ ಇವುಗಳ ಮೇಲೆ ನನಗೆ ಅಪರಿಮಿತ ಒಲವು. ಚಿಕ್ಕವನಾಗಿದ್ದಾಗ 'ಒಬ್ಬ ರಾಜಕುಮಾರನಾಗಿ ಶತ್ರುಗಳ ಜೊತೆ ಕತ್ತಿವರಸೆ ಮಾಡಿ ಅವರನ್ನು ಸೋಲಿಸಬೇಕು' ಎಂಬುದೇ ನನ್ನ ಆಸೆಯಾಗಿತ್ತು. ನಮ್ಮಣ್ಣನಿಗೆ ಜೀಪ್ ಓಡಿಸಬೇಕು ಎಂದು ಆಸೆ. ಸ್ವಾಮಿ ವಿವೇಕಾನಂದರು ಚಿಕ್ಕವರಾಗಿದ್ದಾಗ ತಾನು ದೊಡ್ಡವನಾದ ಮೇಲೆ ಟಾಂಗಾವಾಲಾ ಆಗಬೇಕೆಂಬ ಆಸೆ ಇತ್ತಂತೆ. ಹೀಗೆ ನಾನು ನನ್ನ ಇತರ ಸ್ನೇಹಿತರನ್ನು ಕೇಳಿದಾಗ ಅವರು ಚಿಕ್ಕವರಾಗಿದ್ದಾಗ ಡ್ರೈವರ್, ಕಂಡಕ್ಟರ್ ಇತ್ಯಾದಿ ಆಗಬೇಕೆಂದು ಆಸೆಪಟ್ಟಿದ್ದರೆಂದು ತಿಳಿಯಿತು. ಈಗ ನನ್ನ ಐದು-ಆರು ವರ್ಷದ ತಮ್ಮಂದಿರನ್ನು ಕೇಳಿದರೆ 'ಶಕ್ತಿಮಾನ್ ಆಗಬೇಕು, ಸಚಿನ್ ಟೆಂಡೂಲ್ಕರ್' ಆಗಬೇಕು ಎನ್ನುತ್ತಾರೆ. ಬಾಲ್ಯದ ನಮ್ಮ ಆಸೆ ಆಗಿನ ಭಾವನೆಗಳ, ಬಾಲ್ಯಪ್ರಪಂಚದ ಅಭಿವ್ಯಕ್ತಿ ಎಂದು ನನ್ನ ಅಭಿಪ್ರಾಯ. ಈಗಿನ ಸೂಪರ್‌ಸಾನಿಕ್ ಯುಗದಲ್ಲಿ ಮಕ್ಕಳ ಆಸೆಯೂ ಸೂಪರ್‌ಸಾನಿಕ್ ಆಗಿರುತ್ತದೆ ಎಂದು ನನ್ನ ಅನಿಸಿಕೆಯಾಗಿತ್ತು. ಆದರೆ ನನ್ನ ಅನಿಸಿಕೆಗಳಿಗೆಲ್ಲಾ ಒಂದು ಹೊಸ ತಿರುವು ಕೊಟ್ಟ ಒಂದು ಘಟನೆ ನನ್ನ ಹಿಂದಿನ ಅಭಿಪ್ರಾಯಗಳನ್ನು ಬಹಳಷ್ಟು ಬದಲಿಸಿದೆ.

'ಹಕ್ಕಿಯ ಹಾಡಿಗೆ ತಲೆದೂಗುವ ಹೂ ನಾನಾಗುವ ಆಸೆ' ಎಂಬ ಕೆ. ಎಸ್. ನರಸಿಂಹಸ್ವಾಮಿಯವರ ಕವನ ಭಾಗವನ್ನು ಆರನೇ ತರಗತಿಯ ವಿದ್ಯಾರ್ಥಿಗಳಿಗೆ ವಿವರಿಸುತ್ತಿದ್ದೆ. ಮುಗ್ಧ ಹುಡುಗಿಯ ಸುಂದರ ಕನಸುಗಳನ್ನು ಅತ್ಯಂತ ಸರಳವಾಗಿ ಹೇಳಿದರೂ ಹುಡುಗರು ಅರ್ಥಮಾಡಿಕೊಂಡಂತೆ ನನಗೆ ಕಾಣಲಿಲ್ಲ. ಮಕ್ಕಳಿಗೆ ಪದ್ಯದಲ್ಲಿ ಆಸೆ ಹುಟ್ಟಿಸಬೇಕು ಎನ್ನುವ ಉದ್ದೇಶದಿಂದ ನಾನು ಎಲ್ಲರನ್ನೂ ಒಬ್ಬೊಬ್ಬರಾಗಿ ತಮ್ಮ ಆಸೆಗಳನ್ನು ಹೇಳುವಂತೆ ಕೇಳಿದೆ. ಮೊದಲು ಕೆಲವು ಹುಡುಗರು ತಿಂಡಿ-ತಿನಿಸುಗಳ ಪಟ್ಟಿ ಮಾಡಿದರು. ಆಸೆಗಳು ನಿಜವಾಗಿ ಅವರ ಮನದಿಂದ ಬಂದದ್ದಲ್ಲ, ಕೇವಲ ಇತರರನ್ನು ನಗಿಸಬೇಕೆನ್ನುವ ಉದ್ದೇಶದಿಂದ ಹಾಗೆ ಹೇಳಿದರು. 'ನಿಮಗೆ ಬರಿ ತಿನ್ನೋದೇ ಚಿಂತೆ. ಅದನ್ನ ಬಿಟ್ಟು ಬೇರೇನೂ ಇಲ್ವಾ, ತಿಂಡಿಪೋತಗಳು' ಎಂದು ಹಾಸ್ಯ ಮಾಡಿದೆ. ನಂತರ ನನ್ನ ಉದ್ದೇಶವನ್ನು ಗ್ರಹಿಸಿದರೋ ಎಂಬಂತೆ, ರಮೇಶ ಎದ್ದು ನಿಂತು ಹೇಳಿದ, 'ಸರ್, ನನಗೆ ಒಂದು ದೇವಸ್ಥಾನ ಕಟ್ಟಿಸಬೇಕು ಅಂತ ಆಸೆ. ಅದರಲ್ಲೂ ಹನುಮಂತ ಸ್ವಾಮಿ ದೇವಸ್ಥಾನ ಕಟ್ಟಿಸಬೇಕು ಅಂತ ಆಸೆ. ದೇವರು ಆಗ ನಮ್ಗೆ ವಿದ್ಯಾ-ಬುದ್ಧಿ ಕೊಡ್ತಾನೆ' – ಎಂದು. ಆ ರೀತಿಯ ಆಸೆ ಕೇಳಿ ನನಗೆ ಖಂಡಿತ ಸಂತೋಷವಾಯ್ತು. ಅವನಿಗೆ ಪ್ರೋತ್ಸಾಹದ ಮಾತು ಹೇಳಿ, ಭಾಗ್ಯಮ್ಮನ ಆಸೆ ಕೇಳಿದಾಗ ಅವಳು 'ಸರ್, ನನಗೆ ಭಜನೆ ಮಾಡಬೇಕು ಅಂತ ತುಂಬಾ ಇಷ್ಟ ಸಾರ್' ಎಂದಳು. ಅವಳ ಸಾತ್ವಿಕ ಆಸೆ ಕೇಳಿ ನನಗೆ ನಿಜವಾಗಿಯೂ ಹೆಮ್ಮೆ ಎನಿಸಿತು.

ನಮ್ಮ ಶಾಲೆ ಇರುವುದು ಪ್ರಕೃತಿಯ ಮಡಿಲಲ್ಲಿ, ನಗರದ ಗದ್ದಲ, ಗಲಾಟೆ-ಭರಾಟೆಗಳಿಂದ, ಕಲುಷಿತ ಹವೆ-ವಾತಾವರಣದಿಂದ, ಬಹಳ ದೂರದಲ್ಲಿ. ಆ ಪ್ರಶಾಂತ ವಾತಾವರಣ ಹೇಗೆ ಅವರ ವ್ಯಕ್ತಿತ್ವದ ಮೇಲೆ ಆಳವಾದ, ಸಾತ್ವಿಕವಾದ ಪರಿಣಾಮವನ್ನು ಬೀರುತ್ತಿದೆ ಎಂದು ಈ ಮಕ್ಕಳ ಆಸೆಗಳೇ ಸಾರಿ ಹೇಳುತ್ತವೆ. ಸತೀಶನ ಆಸೆ 'ಚೆನ್ನಾಗಿ, ಕಷ್ಟಪಟ್ಟು ಓದಬೇಕು, ಒಳ್ಳೆ ಕೆಲಸ ಹಿಡಿದು ಹಣ ಸಂಪಾದನೆ ಮಾಡಬೇಕು' ಎಂದು. ಮಂಜ ಇದ್ದುದರಲ್ಲಿ ಆ ಹುಡುಗರಲ್ಲೇ ಸ್ವಲ್ಪ ಚುರುಕು. ಅವನ ಆಸೆ ಏನು ? 'ಸರ್, ಇದೇ ಸ್ಕೂಲ್ ತರಹ ಇನ್ನೊಂದು ಸ್ಕೂಲ್ ಕಟ್ಟಿಸಬೇಕು ಅಂತ ನನ್ನ ಆಸೆ. ಹೀಗೆ ಸ್ಕೂಲ್ ಕಟ್ಟಿಸಿ ಮಕ್ಕಳ್ಗೆಲ್ಲಾ ವಿದ್ಯಾಭ್ಯಾಸ ಕೊಡಿಸಬೇಕು ಅಂತ ಅಂದ್ಕೊಂಡಿದ್ದೀನಿ ಸರ್' ಎಂದ. ಈ ಮಾತುಗಳನ್ನು ಕೇಳಿದಾಗ ಒಬ್ಬ ಶಿಕ್ಷಕನಿಗೆ ಅದೆಷ್ಟು ಸಂತೋಷವಾಗಿರಬಹುದೆಂಬುದನ್ನು ನೀವೇ ಊಹಿಸಿ !

ಇದಕ್ಕೆ ಸ್ವಲ್ಪ ದಿನಗಳ ಮುನ್ನ ಚಿತ್ರಕಲೆ ಕಲಿಸುತ್ತಿದ್ದಾಗ ಮಕ್ಕಳಿಗೆ ಏನಾದರೊಂದು ಚಿತ್ರ ಬರೆಯಲು ಹೇಳಿದ್ದೆ. ಸಿದ್ದು ಒಂದು ಸುಂದರವಾದ, ಅಚ್ಚುಕಟ್ಟಾದ ಮನೆಯ ಚಿತ್ರ ಬರೆದಿದ್ದ. ಅದನ್ನು ಜ್ಞಾಪಿಸಿಕೊಂಡು ನಾನು ಸಿದ್ದು ಏನು ಹೇಳಬಹುದೆಂದು ವಿಚಾರ ಮಾಡುತ್ತಾ ಅವನನ್ನು ಕೇಳಿದೆ. ಅದಕ್ಕೆ ಅವನು 'ಸರ್, ನನಗೆ ಒಂದು ಮನೆ ಕಟ್ಟಿಸಬೇಕು, ಅದರಲ್ಲಿ ನಮ್ ಅಪ್ಪ, ಅಮ್ಮ, ಅಣ್ಣ, ನಾನು ಇರಬೇಕು ಸರ್' ಎಂದ. 'ಯಾಕೋ ನಿನಗೆ ದೇವಸ್ಥಾನಾನೋ, ಸ್ಕೂಲೋ ಕಟ್ಟೋದಿಕ್ಕೆ ಆಸೆ ಇಲ್ವೇನೋ ?' ಎಂದೆ. ಅದಕ್ಕೆ ಅವನು 'ಸರ್, ನಮ್ಮಪ್ಪನಿಗೆ ಕೈಯಲ್ಲಿ ಆಗೋದಿಲ್ಲ. ನಮ್ಮ ಮನೆ ತುಂಬಾ ಹಳೇದು ಸರ್ (ಖಂಡಿತವಾಗಿಯೂ ಹೌದು, ಏಕೆಂದರೆ ನಾನೇ ನೋಡಿದ್ದೆ). ಮನೆ ಮರಾನೆಲ್ಲಾ ಗೆದ್ದಲು ತಿಂದುಬಿಟ್ಟಿದೆ ಸರ್. ಮಳೆ ಬಂದ್ರೆ ತುಂಬಾ ಸೋರತ್ತೆ. ನಮ್ಮಮ್ಮನಿಗೆ ರಾತ್ರಿ ಸರಿಯಾಗಿ ಮನೀಕೋಳಕೂ ಆಗೋದಿಲ್ಲ ಸರ್. ಆದ್ದರಿಂದ ನನ್ಗೆ ಮೊದ್ಲು ನಮ್ಮ ಮನೆ ಕಟ್ಟಿ, ನಮ್ಮಮ್ಮನಿಗೆ ಕಷ್ಟ ತಪ್ಪಿ, ಖುಷಿಯಾಗಿರೋ ಹಾಗೆ ಮಾಡ್ಬೇಕು ಸರ್' ಎಂದ.

ಹನ್ನೊಂದು ವರ್ಷದ ಈ ಬಾಲಕನ ಮಾನಸಿಕ ಪ್ರಬುದ್ಧತೆ ಕಂಡು ನಿಜವಾಗಿಯೂ ನನಗೆ ಅಚ್ಚರಿಯಾಯಿತು. ಈ ಬಾಲಕನ ಬಗ್ಗೆ ಹೆಮ್ಮೆ ಎನಿಸಿತು. ಅಷ್ಟರಲ್ಲಿ ಪೀರಿಯಡ್ ಬೆಲ್ ಹೊಡೆದಿತ್ತು. 'ಆಯ್ತು ಕಣೋ, ಒಳ್ಳೇ ಗಟ್ಟಿಮುಟ್ಟಾದ ಮನೆ ಕಟ್ಸೋ' ಎಂದು ತುಂಬು ಹೃದಯದಿಂದ ಅವನ ಆಸೆ ಪೂರೈಸಲಿ ಎಂದು ಹಾರೈಸಿದೆ.

ಮಕ್ಕಳ ಆಸೆ ಕಲ್ಪನಾಲೋಕದಲ್ಲಿ, ವಾಸ್ತವಕ್ಕೆ ದೂರವಾದ ಲೋಕದಲ್ಲಿ ವ್ಯವಹರಿಸುತ್ತದೆ ಎಂದುಕೊಂಡಿದ್ದ ನನಗೆ ಈ ಅನುಭವ ಕಲಿಸಿದ ಪಾಠ ಏನು ? ಆದರೆ ನಮ್ಮ ಕಲಿಸುವ ವ್ಯವಸ್ಥೆಯಲ್ಲಿ ಮಕ್ಕಳ ಮನದಾಳದ ಅಭಿವ್ಯಕ್ತಿಗಿಂತಲೂ ಭಾಷಾ ಕಲಿಕೆ ಮುಂತಾದುವೇ ಮಹತ್ವ ಪಡೆದಿರುವುದು ಒಂದು ಶೈಕ್ಷಣಿಕ ವ್ಯಂಗ್ಯವೆನಿಸುವುದಿಲ್ಲವೆ ?

**ಎಂ. ಪಿ. ಕಾರ್ತಿಕ್**
೬೦೦/೧, ೧೦ನೇ ಕ್ರಾಸ್, ಎಸ್. ಬಿ. ಎಂ. ಕಾಲೋನಿ, ಬೆಂಗಳೂರು - ೮೯

## ಅಣ್ಣ ಬಸವಣ್ಣ

ಅಣ್ಣ ನಿನ್ನ ವಚನ ಕೇಳಿ
ಸಣ್ಣದೊಂದು ಪದವ ಕಲಿತೆ

ಬಣ್ಣ ಬಣ್ಣದಿ ಹಾಡುತಿಹುದು
ತನ್ನ ತಾನೇ ಸಲಿಯುತಿಹುದು

ಏನೋ ಭಾವ ಬೆನ್ನ ಹಿಂದೆ
ಅರ್ಥವೇನೊ ಅರಿಯದಾದೆ

ಬದುಕೆ ಇಲ್ಲದ ಭವನು ನಾನು
ಪದದ ಅರ್ಥ ಅರಿಯದವನು

ವ್ಯರ್ಥದೂರ ನಡೆದೆ ಹಾಗೆ
ಅರ್ಥವರಿಯದೆ ಉಳಿದೆ ಹೀಗೆ

ಚೆನ್ನ ಕಕ್ಕರ ವಚನ ಹಿಡಿದೆ
ನಿನ್ನ ಹಾದಿಲಿ ಮತ್ತೆ ನಡೆದೆ

ಪದದ ಅರ್ಥವು ತಿಳಿಯಿತಣ್ಣ
ಅದುವೆ ನನ್ನ ಮಾನ ಪ್ರಾಣ

**ಡಾ|| ಮ. ನ. ಜವರಯ್ಯ**
ನಂ. ಎಮ್-೧೩, ೨ನೇ ಮುಖ್ಯರಸ್ತೆ, ೨ನೇ ಕ್ರಾಸ್
೨ನೇ ಹಂತ, ಇ ಮತ್ತು ಎಫ್ ಬ್ಲಾಕ್, ದತ್ತಗಲ್ಲಿ
ರಾಮಕೃಷ್ಣನಗರ, ಮೈಸೂರು - ೫೭೦ ೦೨೨



